# ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು : ಒಂದು ಸಮಾಜಶಾಸ್ತ್ರೀಯ ಅಧ್ಯಯನ

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ
ಉಪೇಂದ್ರಕುಮಾರ ಲಕ್ಷ್ಮಣ ಸುಬೇದಾರ

ಮಾರ್ಗದರ್ಶಕರು
ಡಾ. ತಾರಿಹಳ್ಳಿ ಹನುಮಂತಪ್ಪ
ಸಹಾಯಕ ಪ್ರಾಧ್ಯಾಪಕರು





ಮಾನವಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ– ೫೮೩ ೨೭೬
೨೦೧೬

# ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು : ಒಂದು ಸಮಾಜಶಾಸ್ತ್ರೀಯ ಅಧ್ಯಯನ

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕ
**ಉಪೇಂದ್ರಕುಮಾರ ಲಕ್ಷ್ಮಣ ಸುಬೇದಾರ**

ಮಾರ್ಗದರ್ಶಕರು
**ಡಾ. ತಾರಿಹಳ್ಳಿ ಹನುಮಂತಪ್ಪ**
ಸಹಾಯಕ ಪ್ರಾಧ್ಯಾಪಕರು



ಮಾನವಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ – ೫೮೩೨೭೬
೨೦೧೬

# ದೃಢೀಕರಣ ಪತ್ರ

**ಶ್ರೀ ಉಪೇಂದ್ರಕುಮಾರ ಲಕ್ಷ್ಮಣ ಸುಬೇದಾರ** ಅವರು ಪಿಎಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು : ಒಂದು ಸಮಾಜಶಾಸ್ತ್ರೀಯ ಅಧ್ಯಯನ** ಎಂಬ ವಿಷಯಕ್ಕೆ ಸಂಬಂಧಿಸಿದ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಮಾನವಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧವು ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 1.10.2016
ಸ್ಥಳ : ವಿದ್ಯಾರಣ್ಯ.

T. Hanumanthappa.
**(ಡಾ. ತಾರಿಹಳ್ಳಿ ಹನುಮಂತಪ್ಪ)**
ಮಾರ್ಗದರ್ಶಕರು
ಸಹಾಯಕ ಪ್ರಾಧ್ಯಾಪಕರು
ಮಾನವಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪ್ರಮಾಣ ಪತ್ರ

**ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು : ಒಂದು ಸಮಾಜಶಾಸ್ತ್ರೀಯ ಅಧ್ಯಯನ** ಎಂಬ ವಿಷಯಕ್ಕೆ ಸಂಬಂಧಿಸಿದ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಮಾನವಶಾಸ್ತ್ರ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ ಡಾ.ತಾರಿಹಳ್ಳಿ ಹನುಮಂತಪ್ಪ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧವು ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಉಪೇಂದ್ರಕುಮಾರ ಲಕ್ಷ್ಮಣ ಸುಬೇದಾರ)
ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿ
ಮಾನವಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ : 26-7-2016
ಸ್ಥಳ : ವಿದ್ಯಾರಣ್ಯ

# ಪರಿವಿಡಿ

# ಅಧ್ಯಾಯ ೧

## ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ಸ್ವರೂಪ

೧. ಪ್ರಸ್ತಾವನೆ

೨. ಅಧ್ಯಯನದ ಉದ್ದೇಶ

೩. ಅಧ್ಯಯನದ ವ್ಯಾಪ್ತಿ

೪. ಅಧ್ಯಯನದ ಸ್ವರೂಪ

೫. ಅಧ್ಯಯನದ ವಿಧಾನಗಳು

೬. ಅಧ್ಯಯನದ ಪ್ರಾಮುಖ್ಯತೆ

೭. ಇದುವರೆಗೆ ನಡೆದಿರುವ ಅಧ್ಯಯನಗಳು

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### ೧.೧ ಪ್ರಸ್ತಾವನೆ:

ಸಗರ ಚಕ್ರವರ್ತಿಯ ಹೆಸರನ್ನು ಹೊಂದಿದ ಸಗರನಾಡು ಹೈದರಾಬಾದ ಕರ್ನಾಟಕ ಪ್ರದೇಶದ ಯಾದಗಿರಿ ಜಿಲ್ಲೆಯ ಸುರಪುರ, ಶಹಾಪುರ ಮತ್ತು ಕಲಬುರಗಿ ಜಿಲ್ಲೆಯ ಜೇವರ್ಗಿ ತಾಲೂಕುಗಳನ್ನು ಒಳಗೊಂಡಿದೆ. ಯಾದಗಿರಿ ಜಿಲ್ಲೆ ಆಗುವುದಕ್ಕಿಂತ ಮುಂಚೆ ಕಲಬುರಗಿ ಜಿಲ್ಲಾ ವ್ಯಾಪ್ತಿಗೆ ಈ ೩ ತಾಲೂಕುಗಳು ಸೇರಿದ್ದವು. ಸುರಪುರ, ಶಹಾಪುರ, ಜೇವರ್ಗಿ ಈ ಮೂರು ತಾಲೂಕುಗಳ ಗಡಿರೇಖೆಯಂತಿರುವ ಕೃಷ್ಣ, ಭೀಮೆಯರ ನಡುವಿನ ಪ್ರದೇಶದ ವ್ಯಾಪ್ತಿಯುಳ್ಳ ಈ ಸಗರನಾಡು ಸಾವಿರಾರು ವರ್ಷಗಳ ಪ್ರಾಚೀನತೆಯನ್ನು ಹೊಂದಿದೆಯಲ್ಲದೆ ತನ್ನ ಘನ ಐತಿಹ್ಯವನ್ನು ಮೆರೆದು ವಿಶ್ವಖ್ಯಾತಿಯನ್ನು ಪಡೆದಿದೆ. ಸಗರನಾಡು ಭೌಗೋಳಿಕವಾಗಿ ನೋಡಿದಾಗ ಕಿರಿದಾದ ಬೆಟ್ಟ-ಗುಡ್ಡಗಳ ಸಾಲುಗಳಿಂದ ಭೀಮಾಕಾರದ ಹಾಸುಬಂಡೆಗಳಿಂದಲೂ, ದುಂಡು ಶಿಲೆಗಳಿಂದಲೂ ತುಂಬಿದ ಬೆಟ್ಟದ ಸಾಲುಗಳು ಹಳ್ಳ-ಕೊಳ್ಳ, ನದಿ ಹೊಳೆಗಳಿಂದಲೂ ಮತ್ತು ಫಲವತ್ತಾದ ಭೂಪ್ರದೇಶವನ್ನು ಒಳಗೊಂಡಿದೆ.

ಅಲ್ಲದೇ ಮಳೆಗಾಲ, ಚಳಿಗಾಲದ ದಿನಗಳಲ್ಲಿ ಹೊನ್ನೆ, ಸುರಹೊನ್ನೆ, ಅವರೆ, ಬಿಟ್ಟಲು, ಸೀತಾಫಲ ಮುಂತಾದ ಗಿಡಗಂಟೆ ಪೊದೆಗಳಿಂದಲೂ ತುಂಬಿ, ತುಳಸಿ, ಕಾಡುಸೇವಂತಿಗೆ, ಗಣಜಲಿ, ಉತ್ತರಾಣಿಯಂತಹ ವನಸ್ಪತಿಗಳಿಂದಲೂ ಹಾಸು ಬಂಡೆಗಳಿಂದ ಜಾರಿ ಬರುವ ಝರಿಗಳಿಂದ ಸಗರನಾಡಿನ ಸುರಪುರ-ಶಹಾಪುರ-ಜೇವರ್ಗಿ ಬೆಟ್ಟಗಳು ತಮ್ಮ ಚೆಲುವನ್ನು ಮತ್ತಷ್ಟು ಸಿಂಗರಿಸಿಕೊಂಡಿವೆ. ಈ ರೀತಿಯ ನಿಸರ್ಗ ರಮಣೀಯತೆಯನ್ನು ಪಡೆದ ಈ ನೆಲ ತನ್ನ ಗರ್ಭದಲ್ಲಿ ಅಕ್ಷಯ ಭಂಡಾರವನ್ನೇ ಇಟ್ಟುಕೊಂಡಿದೆ. ಕಲಬುರಗಿಯಿಂದ ಬೆಂಗಳೂರಿಗೆ ಹೋಗುವ ರಾಜ್ಯ ಹೆದ್ದಾರಿಗೆ ಈ ಸಗರನಾಡು ಪ್ರದೇಶ ಹೊಂದಿಕೊಂಡಿದೆ.

ಸಗರನಾಡು ಕೋಟೆ ಕೊತ್ತಲಗಳಿಂದ ಅರಮನೆ, ಗುರುಮನೆಗಳಿಂದ ಶೋಭಿಸುವ ಈ ಐತಿಹಾಸಿಕ ಸಗರನಾಡು ನೋಡುವವರ ಕಣ್ಣುಗಳನ್ನು ಸೂರೆಗೊಂಡಿದೆ.

ಇಷ್ಟೆಲ್ಲಾ ನೈಸರ್ಗಿಕ ಸಂಪನ್ಮೂಲಗಳಿಂದ ಕೂಡಿದ ಸಗರನಾಡು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ತೀರಾ ಹಿಂದುಳಿದಿರುವ ಪ್ರದೇಶವಾಗಿದೆ. ಸ್ವಾತಂತ್ರ್ಯ ಸಿಗುವುದಕ್ಕಿಂತ ಪೂರ್ವದಲ್ಲಿ ಈ ಪ್ರದೇಶ ನಿಜಾಮನ ಅಧಿಕಾರ ವ್ಯಾಪ್ತಿಯಲ್ಲಿ ಇತ್ತು. ಅಂದಿನಿಂದ ಈ ಸಗರನಾಡು ಎಲ್ಲಾ ಸೌಲಭ್ಯಗಳಿಂದ ವಂಚಿತವಾಗಿದೆ. ಸ್ವಾತಂತ್ರ್ಯ ನಂತರ ಸಹ ಇದು ಸರ್ಕಾರದ ನಿರ್ಲಕ್ಷ್ಯಕ್ಕೆ ಒಳಪಟ್ಟಿದೆ. ೧೯೪೮ ಸೆಪ್ಟೆಂಬರ್ ೧೮ರಂದು ಹೆಸರಿಗೆ ಮಾತ್ರ ನಿಜಾಮನ ದುರಾಡಳಿತದಿಂದ ಮುಕ್ತವಾಯಿತು. ನಂತರವು ಒಂದಿಲ್ಲ ಒಂದು ಸ್ವರೂಪದ ಸಮಸ್ಯೆಗಳಲ್ಲಿಯೇ ಕೊಳೆತು ಅನ್ಯಾಯ, ಅತ್ಯಾಚಾರ, ದೌರ್ಜನ್ಯ, ಶೋಷಣೆಗಳಿಗೆ ಒಳಗಾಗುತ್ತಲೇ ಬಂದಿದೆ. ಆದ್ದರಿಂದ ಸುಮಾರು ವರ್ಷಗಳಿಂದ ೩೭೧ರ ತಿದ್ದುಪಡಿಗಾಗಿ ವಿಶೇಷ ಸ್ಥಾನಮಾನಕ್ಕಾಗಿ ಹೋರಾಟ ಹೆಚ್ಚಾದ ಕಾರಣ ಕೇಂದ್ರ ಸರ್ಕಾರವು ೩೭೧ರ ಕಲಂ ತಿದ್ದುಪಡಿ ಮಾಡಿತು. ಪ್ರಸ್ತುತವಾಗಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಔದ್ಯೋಗಿಕವಾಗಿ ಎಲ್ಲಾ ರೀತಿಯಿಂದಲೂ ಸಗರನಾಡು ಅಭಿವೃದ್ಧಿಯ ಪಥದತ್ತ ಸಾಗುತ್ತಿದೆ.

ಹೈದರಾಬಾದ ಕರ್ನಾಟಕದ ಈ ಸಗರನಾಡಿನಲ್ಲಿ ಎಲ್ಲಾ ತರಹದ ಜಾತಿ, ಧರ್ಮ, ಜನಾಂಗ, ಸಮುದಾಯದ ಜನವಾಸವಾಗಿದ್ದಾರೆ. ಆದರೆ ಬೇಡ ಜನಾಂಗದವರ ಪ್ರಭಾವ ಅಧಿಕವಾಗಿದೆ. ಬೇಡರು ಎಂದರೆ ಯಾರಿಗೂ ಅಂಜದವರು ಎಂಬ ಭಾವನೆ ಇತರ ಜನಾಂಗದವರಲ್ಲಿದೆ. ಆದರೂ ಕೂಡ ಬೇಡ ಸಮುದಾಯ ತುಳಿತಕ್ಕೆ ಒಳಗಾಗಿರುವುದು ಆಶ್ಚರ್ಯದ ಸಂಗತಿ. ಪರಿಶಿಷ್ಟ ಪಂಗಡಕ್ಕೆ ಸೇರಿದ ಈ ಸಮುದಾಯಕ್ಕೆ ಸರ್ಕಾರವು ಪರಿಶಿಷ್ಟ ಪಂಗಡದವರಿಗೆ ಸಿಗುವ ಎಲ್ಲಾ ರೀತಿಯ (ಮೀಸಲಾತಿ) ಸೌಲಭ್ಯಗಳನ್ನು ಕೊಟ್ಟರೂ ಕೂಡ ಆ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳಲಾಗದೆ ವಂಚಿತರಾಗಿದ್ದಾರೆ. ಭಾರತದಲ್ಲಿ ವಾಸವಾಗಿರುವ ಆದಿವಾಸಿ ಜನಾಂಗಗಳಲ್ಲಿ ಈ ಬೇಡ ಜನಾಂಗವು ಒಂದು. ನಮ್ಮ ದೇಶದಲ್ಲಿ ಪುರಾತನ ಕಾಲದಿಂದಲೂ ಈ ಸಮುದಾಯ ಅಸ್ತಿತ್ವದಲ್ಲಿ ಇತ್ತು ಎಂಬ ಬಗೆಗೆ ಅನುಮಾನವಿಲ್ಲ. ಸಗರನಾಡು ಬೇಡ ರಾಜರ ಸಂಸ್ಥಾನವಾಗಿರುವುದರಿಂದ ಇಲ್ಲಿ ಇವರ ಜನಸಂಖ್ಯೆ ಬೆಳೆಯಲು ಕಾರಣವಾಯಿತು.

ಬೇಡರಿಗೆ ಪರ್ಯಾಯ ಹೆಸರುಗಳೆಂದರೆ ನಾಯಕ, ಬೇಡರು, ತಳವಾರ, ವಾಲ್ಮೀಕಿ ಮಕ್ಕಳು, ಪುಳಿಂದ, ಇತ್ಯಾದಿ ಹೆಸರುಗಳಿಂದ ಬೇಡ ಸಮುದಾಯವನ್ನು ಕರೆಯುವುದುಂಟು. ಬೇಡ ಸಮುದಾಯದ ಮಹನೀಯರಲ್ಲಿ ಮಹರ್ಷಿ ವಾಲ್ಮೀಕಿ ಶಿವನ ಮಹಾಭಕ್ತ. ಬೇಡರ ಕಣ್ಣಪ್ಪ, ಏಕಲವ್ಯ, ಶಬರಿ, ಮದಕರಿ ನಾಯಕ, ಸುರಪುರದ ಗಡ್ಡಿ ಪಿಡ್ಡನಾಯಕ, ಮೊಂಡಗೈ ರಾಜಾ ವೆಂಕಟಪ್ಪ ನಾಯಕ, ನಾಲ್ವಡಿ ರಾಜಾ ವೆಂಕಟಪ್ಪ ನಾಯಕ, ಹರಪನಹಳ್ಳಿ

ಪಾಳೇಗಾರರು, ಕನಕದಾಸ (ತಿಮ್ಮಪ್ಪ ನಾಯಕ) ಸಿಂಧುರ ಲಕ್ಷ್ಮಣ ಇನ್ನಿತರ ಮಹಾನ್ ಚೇತನಗಳು ಈ ಸಮುದಾಯದಲ್ಲಿ ಹುಟ್ಟಿ ಈ ಬೇಡ ಸಮಾಜವನ್ನು ಎತ್ತರಕ್ಕೆ ಕೊಂಡೊಯ್ಯುವಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿದ್ದಾರೆ. ಆದ್ದರಿಂದ ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳ ಕುರಿತು ಅಧ್ಯಯನ ಮಾಡುವ ಅವಶ್ಯಕತೆ ಇದೆ.

**೧.೨ ಅಧ್ಯಯನದ ಉದ್ದೇಶ:**

ಹೈದರಾಬಾದ ಕರ್ನಾಟಕದ ಸಗರನಾಡಿನಲ್ಲಿ (ಸುರಪುರ, ಶಹಾಪುರ, ಜೇವರ್ಗಿ) ಅತಿ ಹೆಚ್ಚು ಬೇಡ ಸಮುದಾಯದ ಜನಸಂಖ್ಯೆಯನ್ನು ಕಾಣಬಹುದು. ಸುರಪುರ ಬೇಡ ಸಮುದಾಯ ಹಾಗೂ ಶಹಾಪುರ, ಜೇವರ್ಗಿಯ ಬೇಡ ಸಮುದಾಯದವರ ಜೀವನ ಶೈಲಿಯಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಸುರಪುರದಲ್ಲಿ ಬೇಡರ ಜನಸಂಖ್ಯೆ ೬೦,೦೦೦ ಇದ್ದು, ನೀರಾವರಿ ಸೌಲಭ್ಯವನ್ನು ಪಡೆದು ಸ್ವಲ್ಪ ಮಟ್ಟಿಗೆ ಆರ್ಥಿಕವಾಗಿ ಚೇತರಿಸಿಕೊಂಡಿದ್ದಾರೆ. ರಾಜಕೀಯ ಮೀಸಲಾತಿಯನ್ನು ಪಡೆದು ರಾಜ್ಯ ವಿಧಾನಸಭೆ, ಲೋಕಸಭೆಗಳಿಗೆ ಆಯ್ಕೆಯಾಗುತ್ತಿದ್ದಾರೆ. ಆದರೂ ಶೇಕಡಾ ೫೦ರಷ್ಟು ಬೇಡರು ಬಡವರಾಗಿದ್ದಾರೆ. ಅದೇ ರೀತಿಯಾಗಿ ಶಹಾಪುರದ ಬೇಡರು ರಾಜಕೀಯವಾಗಿ ವಂಚಿತರಾಗಿದ್ದಾರೆ. ಆರ್ಥಿಕವಾಗಿ ಹಿಂದುಳಿದಿದ್ದಾರೆ. ಶಹಾಪುರದ ಬಹುತೇಕ ಕೃಷಿ ಭೂಮಿಗಳಿಗೆ ನೀರಾವರಿ ಸೌಕರ್ಯವಿಲ್ಲ. ಆದ್ದರಿಂದ ಗುಡಿಸಲುಗಳಲ್ಲಿ ಮತ್ತು ಟೀನ್ ಮನೆಗಳಲ್ಲಿ ವಾಸವಾಗಿದ್ದಾರೆ. ಆದರೆ ಶೇಕಡಾ ೨೫%ರಷ್ಟು ಬೇಡರು ಮಾತ್ರ ಆರ್ಥಿಕವಾಗಿ ಸುಧಾರಿಸಿಕೊಂಡಿದ್ದಾರೆ. ಹಾಗೂ ಸಗರನಾಡಿನ ಕೊನೆಯ ಭಾಗ ಅಥವಾ ತಾಲೂಕು ಜೇವರ್ಗಿಯಲ್ಲಿ ಬೇಡರು ಗ್ರಾಮಗಳಲ್ಲಿ ಬಹುಸಂಖ್ಯಾತರಿದ್ದು, ಸಂಪೂರ್ಣ ನೀರಾವರಿ ಸೌಲಭ್ಯ ಇಲ್ಲದ ಕಾರಣ ಆರ್ಥಿಕವಾಗಿ ಹಿಂದುಳಿದಿದ್ದಾರೆ. ಇದರ ಜೊತೆಗೆ ರಾಜಕೀಯ ನಿರಾಸಕ್ತಿಯನ್ನು ಹೊಂದಿದ್ದಾರೆ. ಇಲ್ಲಿ ಹೆಚ್ಚಾಗಿ ತೊಗರಿ ಬೆಳೆಯನ್ನು ಬೆಳೆಯುವುದರಿಂದ ಈ ಬೆಳೆಯೇ ಇವರಿಗೆ ಬೆಳಕಾಗಿದೆ ಎಂದರೆ ತಪ್ಪಾಗಲಾರದು. ಆದ್ದರಿಂದ ಕಲಬುರಗಿಯ ಜೇವರ್ಗಿ ತಾಲೂಕನ್ನು ತೊಗರಿಯ ಕಣಜ ಎಂದು ಕರೆಯುತ್ತಾರೆ. ಆದ್ದರಿಂದ ಸಗರನಾಡಿನ ಸುರಪುರ, ಶಹಾಪುರ, ಜೇವರ್ಗಿ ಪ್ರದೇಶದ ಬೇಡರ ಸ್ಥಿತಿಗತಿಯನ್ನು ಅರಿಯುವ ಸಲುವಾಗಿ ಅಧ್ಯಯನವನ್ನು ಕೈಗೊಳ್ಳಲು ಪ್ರಮುಖವಾದ ಉದ್ದೇಶವಾಗಿದೆ.

೧ ಬ್ರಿಟೀಷರ ಆಳ್ವಿಕೆಯಲ್ಲಿ ಬೇಡರ ಸಾಮಾಜಿಕ ಸ್ಥಿತಿಗತಿ

೨ ಸ್ವಾತಂತ್ರ್ಯ ಹೋರಾಟದಲ್ಲಿ ಬೇಡ ಸಮುದಾಯದವರ ಪಾತ್ರ

೩ ಹೈದರಾಬಾದ ಕರ್ನಾಟಕ ವಿಮೋಚನೆಯಲ್ಲಿ ಬೇಡರ ಪಾತ್ರ

೪ ಇತಿಹಾಸದಲ್ಲಿ ಎದುರಾಗಿರುವ ಬೇಡರ ಸಾಮಾಜಿಕ ಸ್ಥಾನಮಾನ

೫ ಸಗರನಾಡಿನಲ್ಲಿ ಬೇಡ ಸಮುದಾಯದ ಪ್ರಭಾವ

೬ ಪ್ರಸ್ತುತ ದಿನಮಾನಗಳಲ್ಲಿನ ಬೇಡ ಸಮುದಾಯದ ಸಾಮಾಜಿಕ, ಆರ್ಥಿಕ, ರಾಜಕೀಯ ಸಾಂಸ್ಕೃತಿಕ ಸ್ಥಿತಿಗತಿಗಳು

೭ ಸಗರನಾಡು ಇತಿಹಾಸ ಪ್ರಸಿದ್ಧ ಪ್ರದೇಶಗಳನ್ನು ಒಳಗೊಂಡಿದೆ.

೮ ಸಗರನಾಡಿನ ಸುರಪುರ, ಶಹಾಪುರ, ಜೇವರ್ಗಿ ಬೇಡರ ಸಂಸ್ಕೃತಿ, ಸಂಪ್ರದಾಯ, ಆಚರಣೆಗಳು ಅಲ್ಲದೇ ಸುರಪುರ ಬೇಡರು ಮತ್ತು ಶಹಾಪುರ, ಜೇವರ್ಗಿಯ ಬೇಡರಿಗೂ ನಡುವೆ ಇರುವ ವೈಶಿಷ್ಟ್ಯವನ್ನು ಕೂಲಂಕುಷವಾಗಿ ಅಧ್ಯಯನ ಮಾಡಲಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ:

ಬೇಡರು ಈ ನಾಡಿನ ಮೂಲನಿವಾಸಿಗಳು ಆಗಿರುವುದರಿಂದ ಸಗರನಾಡಿನ ಬೇಡ ಸಮುದಾಯ ಇಡೀ ಸಗರನಾಡಿನಾದ್ಯಂತ ಹರಡಿಕೊಂಡಿದೆ. ಈ ನಾಡಿನ ವ್ಯಾಪ್ತಿಗೆ ಒಳಪಟ್ಟಿರುವ ಸುರಪುರ ತಾಲೂಕು ಈ ತಾಲೂಕಿನ ೧೮೫ ಗ್ರಾಮಗಳು ಪ್ರಮುಖವಾಗಿ ಬೇಡರು ಹೆಚ್ಚಾಗಿ ವಾಸಿಸುವ ಪ್ರಮುಖ ಗ್ರಾಮಗಳಾದ ಹುಣಸಗಿ, ಕಕ್ಕೇರಿ, ಕೋಡೇಕಲ್, ರಾಯನಪಾಳ್ಯ, ದೇವರಗೋನಾಲ, ಸಿದ್ದಾಪುರ, ಮಹಾಕವಿ ಲಕ್ಷ್ಮೀಶನ ಹುಟ್ಟೂರಾದ ದೇವಪುರ, ಹಾಗೆಯೇ ಈ ಸುರಪುರ ತಾಲೂಕಿನ ಬೇಡರ ಗಡ್ಡಿಗಳಾದ (ಹಟ್ಟಿಗಳು) ಬೆಂಚಗಡ್ಡಿ, ಬಂಡೊಳ್ಳಿ, ತೀರ್ಥ, ನೀಲಕಂಠರಾಯನಗಡ್ಡಿ, ಕೃಷ್ಣಾನದಿಯ ಗಡ್ಡಿ ಪ್ರದೇಶಗಳು ಮತ್ತು ಸುರಪುರ ತಾಲೂಕಿಗೆ ಹೊಂದಿಕೊಂಡಿರುವ ಶಹಾಪುರ ತಾಲೂಕು. ಈ ತಾಲೂಕಿನ ೧೩೫ಕ್ಕೂ ಹೆಚ್ಚು ಗ್ರಾಮಗಳು ಪ್ರಮುಖವಾಗಿ ವನದುರ್ಗ, ಕೆಂಭಾವಿ, ಸಗರ, ಮುಡಬೋಳ, ಶಿರವಾಳ ಹಾಗೂ ಬೇಡರ ದೊಡ್ಡಿಗಳು ಮತ್ತು ಜೇವರ್ಗಿ ತಾಲೂಕು ಈ ತಾಲೂಕಿನ ವ್ಯಾಪ್ತಿಗೆ ಒಳಪಟ್ಟಿರುವ ಎಲ್ಲಾ ಗ್ರಾಮಗಳು ಮುಖ್ಯವಾಗಿ ನರಿಬೋಳ, ಬಿರಾಳ ಕೆ. ಇನ್ನಿತರ ಗ್ರಾಮಗಳು ಅಲ್ಲದೆ ಯಾದಗಿರಿ ಜಿಲ್ಲೆಯ ಕೆಲವು ಗ್ರಾಮಗಳು ಈ ಸಗರನಾಡಿನ ವ್ಯಾಪ್ತಿಗೆ ಒಳಪಟ್ಟಿದ್ದರಿಂದ ಈ ಜಿಲ್ಲೆಯ ಕೆಲವು ಪ್ರಮುಖ ಗ್ರಾಮಗಳನ್ನು ಮಾತ್ರ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಆದ್ದರಿಂದ ಸುರಪುರ ತಾಲೂಕು ಶಹಾಪುರ ತಾಲೂಕು ಜೇವರ್ಗಿ ತಾಲೂಕು ಮತ್ತು ಸುರಪುರಕ್ಕೆ ಹೊಂದಿಕೊಂಡಿರುವ ಯಾದಗಿರಿ ಜಿಲ್ಲೆಯ ಬೇಡರು ಹೆಚ್ಚಾಗಿ ವಾಸಿಸುವ ಗ್ರಾಮಗಳು ಈ ಅಧ್ಯಯನದ ವ್ಯಾಪ್ತಿಯ ಪರಿಮಿತಿಯಾಗಿದೆ.

## ೧.೪ ಅಧ್ಯಯನದ ಸ್ವರೂಪ:

ಪಿಎಚ್.ಡಿ ಪ್ರಬಂಧ ಅಧ್ಯಯನ ಸ್ವರೂಪವು ೯ ಅಧ್ಯಾಯುಗಳನ್ನು ಒಳಗೊಂಡಿದೆ. ನನ್ನ ಪಿಎಚ್.ಡಿ ಪ್ರಬಂಧದ ಪ್ರೌಢ ಪ್ರಂಬಂಧವು ಅಚ್ಚುಕಟ್ಟಾಗಿ ಮಂಡಿಸಲು ೯ ಅಧ್ಯಾಯಗಳಿಗೆ

ಮಾತ್ರ ಸೀಮಿತಗೊಳಿಸಲಾಗಿದೆ. ಪ್ರಬಂಧದ ಚೌಕಟ್ಟು, ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ, ಪ್ರಾಮುಖ್ಯತೆ, ವಿಧಿ-ವಿಧಾನಗಳನ್ನು ಒಳಗೊಂಡಂತೆ ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು ಈ ೯ ಅಧ್ಯಾಯಗಳಲ್ಲಿ ಸೆರೆ ಹಿಡಿಯಲಾಗಿದೆ. ಸಗರನಾಡು ಪೌರಾಣಿಕ ಕಾಲದಿಂದಲೂ ಹೆಸರುವಾಸಿಯಾದುದು. ಕರ್ನಾಟಕದ ಸಗರನಾಡಿನಲ್ಲಿ ರಾಷ್ಟ್ರಕೂಟರಿಂದ ಹಿಡಿದು ಸುರಪುರದ ಗೋಸಲ ವಂಶದ ಬೇಡ ದೊರೆಗಳು ಈ ನಾಡನ್ನು ಆಳಿದ್ದಾರೆ. ಅಲ್ಲದೆ ಈ ನಾಡನ್ನು ಕಾಲಜ್ಞಾನಿಗಳು ಅನೇಕ ಶಿವಶರಣರು, ಹರಿದಾಸರು, ಕವಿಗಳೂ, ಚಿತ್ರಕಲಾವಿದರು, ಅಡಿಯಿಂದ ಮುಡಿಯವರೆಗೆ ಇಲ್ಲಿನ ಹಿರಿಮೆ ಮತ್ತು ಗೌರವ, ಪಾವಿತ್ರ್ಯವನ್ನು ಹೆಚ್ಚುವಂತೆ ಮಾಡಿ ಸೂರ್ಯ ಚಂದ್ರರು ಇರುವವರೆಗೆ ಅಜರಾಮರರಾಗಿದ್ದಾರೆ. ಇನ್ನು ಸಗರನಾಡಿನ ಕೇಂದ್ರ ಸ್ಥಳವಾದ ಸುರಪುರದ ಐತಿಹಾಸಿಕತೆಯ ಹಿರಿಮೆ ಗರಿಮೆಯನ್ನು ನೆನಪು ಮಾಡಿಕೊಂಡಾಗ ಸುಪ್ತಚೇತನವು ಸೆಟೆದು ನಿಲ್ಲುತ್ತದೆ. ಮೈ ರೋಮಾಂಚನವಾಗುತ್ತದೆ. ಸಗರನಾಡಿನಲ್ಲಿ ಅರಸರಾಗಿದ್ದ ಬೇಡರ ದೊರೆಗಳನ್ನು ಈ ಜನ, ಈ ನೆಲ ಎಂದೆಂದಿಗೂ ಮರೆಯುವುದಿಲ್ಲ. ಅಂತಹ ಅಪಾರ ಕೊಡುಗೆಯನ್ನು ನೀಡಿ ಸ್ವರ್ಗ ಲೋಕಕ್ಕೆ ಹೋಗಿದ್ದಾರೆ. ಮತ್ತು ಅನೇಕ ದೇವಸ್ಥಾನಗಳು, ಗುಡಿಗೋಪುರಗಳು, ಗದ್ದುಗೆಗಳು ಕಂಗೊಳಿಸುತ್ತವೆ. ಸಗರನಾಡಿಗೆ ಇಂದಿಗೂ ಬೇಡರಗೂಡು ಎಂದು ಕರೆದರೆ ಅತಿಶಯೋಕ್ತಿಯಾಗಲಾರದು. ಅಂತೇ ಬಹಳ ದಿನಗಳಿಂದ ಸಗರನಾಡಿನ ಬಗ್ಗೆ ಸಗರನಾಡಿನ ಚಾರಿತ್ರಿಕ ಹಿನ್ನೆಲೆಯನ್ನು ತಿಳಿದುಕೊಳ್ಳುವುದರ ಜೊತೆಗೆ ಸಗರನಾಡಿನ ಬೇಡ ಸಮುದಾಯದ ಬಗ್ಗೆ ಅವರ ಸಾಮಾಜಿಕ ಸ್ಥಿತಿಗತಿಯ ಬಗ್ಗೆ ಅಧ್ಯಯನ ಮಾಡಬೇಕೆಂಬ ನನ್ನ ಹಂಬಲ ಮೊದಲಿನಿಂದಲೂ ಇತ್ತು. ಈ ಕುರಿತು ಅಧ್ಯಯನವನ್ನು ಮಾಡಬೇಕೆಂಬ ಅಪೇಕ್ಷೆ ನನಗೆ ಬಲವಾಗಿ ಕಾಡಿದ ಹಿನ್ನೆಲೆಯಲ್ಲಿ ಈ ಪಿಎಚ್.ಡಿ ಸಂಶೋಧನಾ ಅಧ್ಯಯನವನ್ನು ಕೈಗೊಂಡಿದ್ದೇನೆ. ನನ್ನ ಈ ಪ್ರಬಂಧದ ಒಂಬತ್ತು ಅಧ್ಯಾಯಗಳು ಈ ಕೆಳಕಂಡಂತಿವೆ.

**ಮೊದಲನೆಯ ಅಧ್ಯಾಯದಲ್ಲಿ** ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವಿಧಾನಗಳು, ಅಧ್ಯಯನದ ಮಹತ್ವವನ್ನು ವಿವರಿಸಲಾಗಿದೆ.

**ಎರಡನೇ ಅಧ್ಯಾಯ**ದಲ್ಲಿ ಸಗರನಾಡಿನ ಚಾರಿತ್ರಿಕ ಹಿನ್ನಲೆಯನ್ನು ಕುರಿತು ಸಂಕ್ಷಿಪ್ತ ಮಾಹಿತಿ ನೀಡಲಾಗಿದೆ. ಸಗರದ ಚಕ್ರವರ್ತಿ ಸಗರನ ಜನನ ವೃತ್ತಾಂತ ವೈಭವೋಪ್ರೇರಿತ ಆಡಳಿತ ವ್ಯವಸ್ಥೆ, ರಾಷ್ಟ್ರಕೂಟ, ಶಾತವಾಹನರು, ಬಾದಾಮಿ ಚಾಲುಕ್ಯರು, ಕಲ್ಯಾಣರು ಕಳಚೂರ್ಯರು ಮಾಸವಾಡಿ ಶೆವಣರು, ಬಹುಮನಿ ಅರಸರು ಅವರ ಶಾಸನಗಳ ಬಗ್ಗೆ ಮತ್ತು ಹೈದರಾಬಾದ ನಿಜಾಮನ, ಬ್ರಿಟೀಷರ ಕುರಿತು, ಸುರಪುರ ಸಂಸ್ಥಾನದ ರಾಜರ ಕುರಿತು ಹೈದರಾಬಾದ ಕರ್ನಾಟಕ ವಿಮೋಚನೆಯಲ್ಲಿ ಹೋರಾಟ ಮಾಡಿದ ಬೇಡನಾಯಕರ ಕುರಿತು ಐತಿಹಾಸಿಕ ಕೋಟೆ ಕೊತ್ತಲಗಳ ಬಗ್ಗೆ ವಿವರಿಸಲಾಗಿದೆ.

**ಮೂರನೇಯ ಅಧ್ಯಾಯ**ದಲ್ಲಿ ಸಗರನಾಡಿನ ಬೇಡ ಸಮುದಾಯದ ಕುರಿತು ಅಧ್ಯಯನವನ್ನು ಮಾಡಿದ್ದೇನೆ. ಈ ನಾಡಿನ ಬೇಡ ಸಮುದಾಯದ ಪರಿಚಯ ಹಾಗೂ ಸುರಪುರ, ಶಹಾಪುರ, ಜೇವರ್ಗಿ ತಾಲೂಕುಗಳ ಹಿಂದಿನ ಮತ್ತು ಪ್ರಸ್ತುತ ಸ್ಥಿತಿಗತಿಗಳನ್ನು ಕುರಿತು ಹಾಗೂ ಅವರ ಉದ್ಯೋಗ, ವೃತ್ತಿ, ಕೃಷಿಯ ಚಟುವಟಿಕೆ, ಬದುಕಿನಲ್ಲಿ ಬರುವ ದುಃಖ ದುಮ್ಮಾನಗಳು, ಮಾನಸಿಕ ತೊಳಲಾಟಗಳು, ಸಾಮಾಜಿಕ ಸಮಸ್ಯೆಗಳು, ಇವರ ಜೀವನ ವರ್ತನೆಗಳು, ಬೇಡರ ಆಧುನಿಕ ಸ್ಥಿತ್ಯಾಂತರಗಳು ಇತ್ಯಾದಿ ವಿಷಯಗಳ ಕುರಿತು ಈ ಅಧ್ಯಾಯದಲ್ಲಿ ಸಮಗ್ರವಾದ ನೋಟವನ್ನು ಕಂಡುಕೊಳ್ಳಲಾಗಿದೆ.

**ನಾಲ್ಕನೇ ಅಧ್ಯಾಯ**ದಲ್ಲಿ ಸಗರನಾಡಿನ ಬೇಡ ಸಮುದಾಯದವರು ಸಗರನಾಡಿನಲ್ಲಿ ಸಾಮಾಜಿಕವಾಗಿ ಯಾವ ಸ್ಥಾನದಲ್ಲಿದ್ದಾರೆ. ಇತರೆ ಜಾತಿಗಳ ಜೊತೆ ಇವರ ಹೊಂದಾಣಿಕೆ, ಇವರ ದಿನನಿತ್ಯದ ಕಾರ್ಯ ಚಟುವಟಿಕೆಗಳು, ಕೌಟುಂಬಿಕ ಜೀವನ ಪದ್ಧತಿ, ವೈವಾಹಿಕ ಜೀವನ, ಗೃಹ ನಿರ್ಮಾಣ, ಆಹಾರ ಸೇವನೆಯ ಪದ್ಧತಿ, ಸಾಮಾಜಿಕ ನ್ಯಾಯ ಪದ್ಧತಿ, ಪಶುಚಿಕಿತ್ಸೆ ಪದ್ಧತಿ, ಬೇಡರು ಅನುಸರಿಸುವ ಚಿಕಿತ್ಸಾ ಪದ್ಧತಿ, (ಜನಪದ ವೈದ್ಯ) ಬೇಡರ ಬೇಟೆ ಪದ್ಧತಿ, ಗೋಷಾ ಪದ್ಧತಿ, ಮಹಿಳೆಯರ ಸ್ಥಾನ-ಮಾನ, ಕಲೆ ಮತ್ತು ಕ್ರೀಡೆ, ಬೇಡರ ಸಂಘ ಸಂಸ್ಥೆಗಳು ಮತ್ತು ಹೋರಾಟಗಳು ಬಂಧುತ್ವ ಸಾಮಾಜಿಕ ನಿಯಂತ್ರಣ ವ್ಯವಸ್ಥೆ, ಧರ್ಮ ಮತ್ತು ಧಾರ್ಮಿಕ ಆಚರಣೆಗಳು, ಬೇಡರ ಉಡುಗೆ ತೊಡುಗೆ, ಮತ್ತು ಹುಟ್ಟು-ಸಾವಿನ ಸಂಸ್ಕಾರಗಳು, ಜಾತಿ, ಪಂಚಾಯತಿ, ಜಾಜಮಾನಿ ಪದ್ಧತಿ ಹಾಗೂ ಬಡತನದ ಸ್ಥಿತಿಗತಿಗಳ ಕುರಿತು ಸಂಪೂರ್ಣವಾಗಿ ವಿವರಿಸಿದೆ.

**ಐದನೇಯ ಅಧ್ಯಾಯ**ದಲ್ಲಿ ಸಗರನಾಡಿನ ಬೇಡ ಸಮುದಾಯದ ಸಂಸ್ಕೃತಿ ಕುರಿತು ಕೂಲಂಕುಷವಾಗಿ ಅಧ್ಯಯನ ಮಾಡಲಾಗಿದೆ. ಬೇಡರ ಉಡುಗೆ-ತೊಡುಗೆ, ಆಚಾರ-ವಿಚಾರ ಪದ್ಧತಿ, ವಿವಾಹದ ವಿಧಿ-ವಿಧಾನಗಳು ಹಾಗೂ ಭಾಷಾ ಸಂಸ್ಕೃತಿ, ಧಾರ್ಮಿಕ ಆಚರಣೆಗಳು ಹಬ್ಬ ಹರಿದಿನ, ಜಾತ್ರೆ ಉತ್ಸವಗಳ ಕುರಿತು ಅಧ್ಯಯನ ಮಾಡಲಾಗಿದೆ.

**ಆರನೇ ಅಧ್ಯಾಯ**ದಲ್ಲಿ ಸಗರನಾಡಿನ ಬೇಡ ಸಮುದಾಯದ ಆರ್ಥಿಕ ಜೀವನವನ್ನು ಕುರಿತು ಅಧ್ಯಯನ ಮಾಡಲಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಇವರ ಆರ್ಥಿಕ ಸ್ಥಿತಿಗತಿ, ಸ್ವಾತಂತ್ರ್ಯ ನಂತರದಲ್ಲಿ ಆರ್ಥಿಕ ಸ್ಥಿತಿಗತಿಯ ಬಗ್ಗೆ ಸುದೀರ್ಘವಾಗಿ ಚರ್ಚಿಸಲಾಗಿದೆ. ಅಲ್ಲದೇ ಇವರು ಆರ್ಥಿಕವಾಗಿ ಹಿಂದುಳಿದಿರುವುದಕ್ಕೆ ಕಾರಣವಾಗಿರುವ ಅಂಶಗಳು ಮತ್ತು ಅನಕ್ಷರತೆ, ಬಡತನ, ಕೃಷಿ-ವ್ಯವಸಾಯಗಳ ಬಗ್ಗೆ ಅಧ್ಯಯನವನ್ನು ಮಾಡಲಾಗಿದೆ.

**ಏಳನೇಯ ಅಧ್ಯಾಯ**ದಲ್ಲಿ ಶಿಕ್ಷಣದ ಅರ್ಥ, ವ್ಯಾಖ್ಯೆ, ಬೇಡ ಸಮುದಾಯದವರ ಶೈಕ್ಷಣಿಕ ಜೀವನ ಮತ್ತು ಇವರ ಶೈಕ್ಷಣಿಕ ಸ್ಥಿತಿಗತಿ, ಶಿಕ್ಷಣದ ಗುಣಮಟ್ಟ ಉತ್ತಮಗೊಳಿಸುವ ದಿಶೆಯಲ್ಲಿ ಸರಕಾರ ನಾಗರಿಕ ಸಮಾಜ ಮತ್ತು ಎನ್.ಜಿ.ಓಗಳ ಸಹಯೋಗ ಕುರಿತು

ಹಾಗೂ ಬೇಡ ಸಮುದಾಯದವರಿಗೆ ಸಿಗುವ ಶೈಕ್ಷಣಿಕ ಸೌಲಭ್ಯಗಳ ಕುರಿತು ಕೂಲಂಕುಷವಾಗಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಎಂಟರಲ್ಲಿ** ಸಗರನಾಡಿನ ಬೇಡ ಸಮುದಾಯದ ರಾಜಕೀಯ ಜೀವನ ಕುರಿತು ಅಧ್ಯಯನ ಮಾಡಲಾಗಿದೆ. ಸುರಪುರ ತಾಲೂಕಿನ ಬೇಡನಾಯಕರ ರಾಜಕೀಯ ಜೀವನ ಹಾಗೂ ಶಹಾಪುರ ತಾಲೂಕಿನ ಬೇಡ ಸಮುದಾಯದವರ ರಾಜಕೀಯ ಜೀವನ ಹಾಗೂ ಸಗರನಾಡಿನ ಕೊನೆಯ ತಾಲೂಕು ಜೇವರ್ಗಿಯ ಬೇಡ ನಾಯಕರ ರಾಜಕೀಯ ಜೀವನವನ್ನು ಕುರಿತು, ಗ್ರಾಮ ಪಂಚಾಯತಿ, ತಾಲೂಕ ಪಂಚಾಯತಿ, ಜಿಲ್ಲಾ ಪಂಚಾಯತಿಯಲ್ಲಿ ಇವರ ಪಾತ್ರ ಹಾಗೂ ರಾಜ್ಯ ವಿಧಾನಸಭೆ, ಕೇಂದ್ರ ಲೋಕಸಭೆಗೆ ಆಯ್ಕೆಯಾದ ಬೇಡ ನಾಯಕರ ರಾಜಕೀಯ ಜೀವನ ಸಗರನಾಡಿನಾದ್ಯಂತ ರಾಜಕೀಯದಲ್ಲಿ ಬೇಡ ನಾಯಕರ ಪಾತ್ರ ಮತ್ತು ಮಹತ್ವ ಹಾಗೂ ಜನನಾಯಕ, ಜನಸೇವಕರಾಗಿ ಇವರು ಮಾಡಿರುವ ಅಭಿವೃದ್ಧಿ ಕಾರ್ಯಗಳನ್ನು ಚರ್ಚಿಸಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಒಂಬತ್ತರಲ್ಲಿ** ಈ ಪ್ರಬಂಧಧ ಕೊನೆಯ ಸಮಾರೋಪದ ಭಾಗದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ಸಗರನಾಡಿನ ಚಾರಿತ್ರಿಕ ಹಿನ್ನೆಲೆ. ಬೇಡ ಸಮುದಾಯ, ಸಾಮಾಜಿಕ ಜೀವನ, ಸಾಂಸ್ಕೃತಿಕ ಜೀವನ, ಆರ್ಥಿಕ ಜೀವನ, ಶೈಕ್ಷಣಿಕ ಜೀವನ, ರಾಜಕೀಯ ಜೀವನ ಸೆರೆಹಿಡಿಯುವ ಪ್ರಯತ್ನವನ್ನು ಮಾಡಿ ಸಮಾರೋಪದ ಭಾಗದಲ್ಲಿ ಅಧ್ಯಯನದ ಫಲಿತಗಳು ಮತ್ತು ಪರಿಹಾರೋಪಾಯಗಳನ್ನು ಒಳಗೊಂಡು ಮುಕ್ತಾಯಗೊಳಿಸುವ ಹಂತಕ್ಕೆ ಈ ಪಿಎಚ್.ಡಿ ಮಹಾಪ್ರಬಂಧವನ್ನು ಪೂರ್ಣ ಪ್ರಮಾಣದಲ್ಲಿ ಸಿದ್ಧಪಡಿಸಲಾಗಿದೆ.

**೧.೫ ಅಧ್ಯಯನದ ವಿಧಾನಗಳು:**

ಯಾವುದೇ ಒಂದು ಜಾತಿಯ, ಸಮುದಾಯದ, ಧರ್ಮದ, ಸಮೂಹದ, ಜನಾಂಗದ ಬಗ್ಗೆ ಅಧ್ಯಯನ ಅಥವಾ ಸಂಶೋಧನೆ ಕೈಗೊಳ್ಳಬೇಕಾದರೆ ಅದಕ್ಕೆ ತನ್ನದೇ ಆದ ವೈಜ್ಞಾನಿಕ ಪದ್ಧತಿಯ ವಿಧಿ ವಿಧಾನಗಳು ಇರುತ್ತವೆ. ಈ ವಿಧಿ ವಿಧಾನಗಳನ್ನು ಅಳವಡಿಸಿಕೊಂಡಾಗ ಮಾತ್ರ ಸತ್ಯಾಸತ್ಯತೆಗಳು ಹೊರಗೆ ಬರುತ್ತವೆ. ಹಾಗೆಯೇ ಅದು ಒಂದು ವೈಜ್ಞಾನಿಕ ಅಧ್ಯಯನ ಎನಿಸಿಕೊಳ್ಳುತ್ತದೆ. ಆದ್ದರಿಂದ "ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು" ಎಂಬ ಸಂಶೋಧನಾ ಅಧ್ಯಯನವನ್ನು ಕೈಗೊಳ್ಳುವಾಗ ಕ್ಷೇತ್ರಕಾರ್ಯವನ್ನು ಮಾಡುವಾಗ ಕುಟುಂಬಗಳನ್ನು ಸಂದರ್ಶನ ಮಾಡುವಾಗ ಜನರ ಜೊತೆ ಚರ್ಚೆಯಲ್ಲಿ ತೊಡಗಿದಾಗ ಸಂಶೋಧನಾ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ. ಸಂಶೋಧನೆಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ಮಹತ್ವ ಎಷ್ಟು ಮುಖ್ಯವೋ ಸಂಶೋಧನಾ ವಿಧಾನಗಳೂ ಕೂಡ ಅಷ್ಟೇ ಮುಖ್ಯವಾಗಿದೆ.

ಬೇಡ ಸಮುದಾಯದ ಅಧ್ಯಯನಕ್ಕೆ ಸಂಬಂಧಿಸಿದಂತೆ ಇಲ್ಲಿಯವರೆಗೆ ಬಂದಿರುವ ಸಂಶೋಧನಾ ಗ್ರಂಥಗಳು, ಲೇಖನಗಳು, ಜಾನಪದ ಐತಿಹ್ಯ, ದಂತಕಥೆ, ಲಾವಣಿಗಳು, ಜಾನಪದ ಗೀತೆಗಳು, ಪತ್ರಿಕಾ ಪ್ರಕಟಣೆಗಳು ಶಾಸನಗಳ ಆಧಾರಗಳನ್ನು ಈ ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಏಕೆಂದರೆ ಸಂಶೋಧನ ಅಧ್ಯಯನ ಪರಿಪೂರ್ಣವಾಗಿ ಮೂಡಿ ಬರಬೇಕು. ಸತ್ಯಾಸತ್ಯತೆಯಿಂದ ಕೂಡಿರಬೇಕು ಎಂಬ ಉದ್ದೇಶದಿಂದ ಗಂಭೀರವಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ ಸಮಾಜ ಶಾಸ್ತ್ರೀಯ, ಮಾನವಶಾಸ್ತ್ರೀಯ ಅಧ್ಯಯನದ ಹಿನ್ನೆಲೆಯಲ್ಲಿ ರೂಪಿತವಾಗಿರುವ ಈ ಅಧ್ಯಯನ ವಿಷಯವು ವೈಜ್ಞಾನಿಕ ಮತ್ತು ಸೈದ್ಧಾಂತಿಕ ವಿಧಿ ವಿಧಾನಗಳ ಮೂಲಕ ವಿವರಿಸಲಾಗಿದೆ. ಆದ್ದರಿಂದ ಈ ಅಧ್ಯಯನದ ವಿಧಾನಗಳು ಈ ಕೆಳಕಂಡಂತಿವೆ.

೧. ದತ್ತಾಂಶಗಳ ಸಂಗ್ರಹಣೆ

೨. ದತ್ತಾಂಶಗಳ ವಿಶ್ಲೇಷಣೆ

೩. ಪ್ರಶ್ನಾವಳಿ ವಿಧಾನ

೪. ಸಹಭಾಗಿತ್ವ ಅವಲೋಕನಾ ವಿಧಾನ

೫. ಸಂದರ್ಶನ ವಿಧಾನಗಳು

೬. ವಿಷಯ ಅಧ್ಯಯನ ವಿಧಾನ

೭. ಸಂಖ್ಯಾಶಾಸ್ತ್ರೀಯ ವಿಧಾನ

೮. ಅವಲೋಕನ ವಿಧಾನ

೧) **ದತ್ತಾಂಶಗಳ ಸಂಗ್ರಹಣೆ:–** "ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು ಒಂದು ಸಮಾಜಶಾಸ್ತ್ರೀಯ ಅಧ್ಯಯನ" ಎಂಬ ಸಂಶೋಧನಾ ಅಧ್ಯಯನಕ್ಕೆ ಸಂಬಂಧಿಸಿದಂತೆ ಮುಖ್ಯ ಪ್ರಾಥಮಿಕ ಮೂಲಗಳಾದ ಗ್ರಂಥಗಳು, ಲೇಖನಗಳು, ವೃತ್ತ ಪತ್ರಿಕೆಗಳು, ದಿನಪತ್ರಿಕೆಗಳ ಅಂಕಣಗಳು, ವಿವಿಧ ಅಧ್ಯಯನದ ಪ್ರಬಂಧಗಳು, ಸ್ಮರಣ ಸಂಚಿಕೆಗಳು, ಇತಿಹಾಸದ ಗ್ರಂಥಗಳು, ಸಾಮಾಜಿಕ ಸಂಶೋಧನಾ ಗ್ರಂಥಗಳು, ಸರಕಾರಿ ಸರ್ವೆ ಪುಸ್ತಕಗಳು ಮುಂತಾದವುಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

೨) **ದತ್ತಾಂಶ ವಿಶ್ಲೇಷಣೆ:–** ಸಗರನಾಡಿನ ಸುರಪುರ, ಶಹಾಪುರ, ಜೇವರ್ಗಿ ತಾಲೂಕುಗಳಾದ್ಯಂತ ಕ್ಷೇತ್ರ ಕಾರ್ಯವನ್ನು ಹಮ್ಮಿಕೊಂಡು ಮಾಹಿತಿಯನ್ನು ನೀಡಿದ ಬೇಡ ಸಮುದಾಯದವರ ಹಿರಿಯರ ಅನಿಸಿಕೆಗಳು ಅಭಿಪ್ರಾಯಗಳು ಮತ್ತು ವಿವರಗಳನ್ನು ಪಡೆಯಲಾಗಿದೆ. ಈ ಸಮುದಾಯದ ಸಂಘಟನೆಗಳು, ಸಂಘಗಳು, ಸಂಸ್ಥೆಗಳು, ಉನ್ನತ ಸ್ಥಾನದಲ್ಲಿರುವ ಅಧಿಕಾರಿಗಳ ಜನನಾಯಕರ ಹಾಗೂ ಮುಖ್ಯವಾಗಿ ಪರಿಶಿಷ್ಟ ಪಂಗಡ

ಇಲಾಖೆಯ ಅಧಿಕಾರಿಗಳಿಂದ ಪಡೆದ ಮಾಹಿತಿ ಇವರು ನೀಡಿದ ದತ್ತಾಂಶಗಳನ್ನು ಒಟ್ಟುಗೂಡಿಸಿ ಮಾಹಿತಿಯನ್ನು ವಿಶ್ಲೇಷಣೆ ಮಾಡಿ ಓರೆ ಹಚ್ಚಿ ನೋಡಿ ಫಲಿತಾಂಶವನ್ನು ಪ್ರಾಮಾಣಿಕವಾಗಿ ವಿವರಿಸಲಾಗಿದೆ.

೩) **ಪ್ರಶ್ನಾವಳಿ ವಿಧಾನ:-** ಕ್ಷೇತ್ರ ಕಾರ್ಯಕ್ಕೆ ಇಳಿಯುವುದಕ್ಕಿಂತಲೂ ಮುಂಚೆ ಬೇಡ ಸಮುದಾಯಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ಸಿದ್ಧಪಡಿಸಿಕೊಂಡು ಕ್ಷೇತ್ರ ಕಾರ್ಯದ ಜೊತೆಗೆ ಸಂದರ್ಶನದ ಮುಖಾಂತರ ಬೇಡ ಸಮುದಾಯದವರಿಗೆ ಕುತೂಹಲಕಾರಿ ಪ್ರಶ್ನೆಗಳನ್ನು ಕೇಳುವುದರ ಮುಖಾಂತರ ಅವರಿಂದ ಮಾಹಿತಿಯನ್ನು ಪಡೆದು ಸಂಪೂರ್ಣವಾಗಿ ಸಂಗ್ರಹಿಸಲಾಗಿದೆ.

೪) **ಸಹಭಾಗಿತ್ವ ಅವಲೋಕನ ವಿಧಾನ:-** ಈ ವಿಧಾನ ಸಂಶೋಧನಾಕಾರನಿಗೆ ಪ್ರಮುಖ ವಿಧಾನವಾಗಿದೆ. ಸಮುದಾಯದ ಹೆಚ್ಚಿನ ಮಾಹಿತಿಯನ್ನು ಈ ವಿಧಾನದ ಮೂಲಕ ಪಡೆಯಬಹುದು. ಅಂದರೆ ಸಂಶೋಧನಾಕಾರನು ಸಮುದಾಯದವರಲ್ಲಿ ಭಾಗಿಯಾಗುವುದರ ಮುಖಾಂತರ ಸಂಪೂರ್ಣ ಮಾಹಿತಿಯನ್ನು ಪಡೆಯಬಹುದು. ಈ ಸಂದರ್ಭದಲ್ಲಿ ಬೇಡ ಸಮುದಾಯದವರ ಜೊತೆ ಬೆರೆತು ಅದರ ನೋವು ನಲಿವುಗಳನ್ನು ಕಷ್ಟ ಕಾರ್ಪಣ್ಯಗಳನ್ನು ಆಲಿಸುವುದರ ಮುಖಾಂತರ ಇವರನ್ನು ಸಂದರ್ಶನಕ್ಕೆ ಒಳಪಡಿಸಿ ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳನ್ನು ಅರಿಯಲಾಗಿದೆ.

೫) **ಸಂದರ್ಶನ ವಿಧಾನ:-** ಸಂದರ್ಶನ ವಿಧಾನದಲ್ಲಿ ಸಂದರ್ಶನ ವಿಧಾನ ಪ್ರಮುಖ ಪಾತ್ರ ವಹಿಸುತ್ತದೆ. ಸಂದರ್ಶನ ವಿಧಾನ ತೀರ ಅತ್ಯವಶ್ಯಕವಾದದ್ದು ಮತ್ತು ಅನಿವಾರ್ಯತೆಯಿಂದ ಕೂಡಿರುತ್ತದೆ. ಒಂದು ವೇಳೆ ಸಂದರ್ಶನ ಇರದೆ ಹೋದರೆ ಸಂಶೋಧನೆ ಅಪೂರ್ಣವಾಗುತ್ತದೆ. ಆದ್ದರಿಂದ ಕ್ಷೇತ್ರ ಕಾರ್ಯದಲ್ಲಿ ಈ ವಿಧಾನವನ್ನು ಅಳವಡಿಸಿಕೊಂಡಾಗ ಮಾತ್ರ ನಿಜವಾದ ಮಾಹಿತಿ ಹೊರಗೆ ಬರುತ್ತದೆ. ಅದೇ ರೀತಿಯಾಗಿ ಬೇಡ ಸಮುದಾಯದವರನ್ನು ಸಂದರ್ಶನಕ್ಕೆ ಒಳಪಡಿಸಿ ಹೆಚ್ಚಿನ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

೬) **ವಿಷಯ ಅಧ್ಯಯನ ವಿಧಾನ:-** ಸಗರ ನಾಡಿನ ಬೇಡ ಸಮುದಾಯದ ಸಾಮಾಜಿಕ ಸ್ಥಿತಿಗಳು ಗತಿಗಳು ಎಂಬ ಸಂಶೋಧನಾ ಸಂದರ್ಭದಲ್ಲಿ ಇಡೀ ಸಗರನಾಡಿನಾದ್ಯಂತ ಅಂದರೆ ಸುರಪುರ, ಶಹಾಪುರ, ಜೇವರ್ಗಿಯಾದ್ಯಂತ ಸಂಚರಿಸಿ ಬೇಡರ ಬಗ್ಗೆ ಇರುವ ಲೇಖನಗಳು, ಗ್ರಂಥಗಳು, ಪ್ರಸ್ತುತ ಅವರ ಸಾಮಾಜಿಕ ಸ್ಥಿತಿಗತಿ, ರಾಜಕೀಯ ಸ್ಥಿತಿಗತಿ, ಆರ್ಥಿಕ ಸ್ಥಿತಿಗತಿ, ಶೈಕ್ಷಣಿಕ ಸ್ಥಿತಿಗತಿ ಮತ್ತು ಅವರ ಸಂಸ್ಕೃತಿ ಹಾಗೂ ಈ ಸಮುದಾಯದವರ ಕೆಲವೊಂದು ಹೆಚ್ಚಿನ ಮಾಹಿತಿ ವಿಷಯಗಳನ್ನು ಅರಿತು ನನ್ನ ಮಾರ್ಗದರ್ಶಕರ ಜೊತೆಗೆ ಸಾಧಕ ಬಾಧಕಗಳ ಕುರಿತು ಚರ್ಚಿಸಲಾಗಿದೆ.

೭) **ಸಂಖ್ಯಾಶಾಸ್ತ್ರೀಯ ವಿಧಾನ:-** ಸಗರನಾಡಿನಲ್ಲಿ ಬೇಡ ಸಮುದಾಯದವರ ಜನಸಂಖ್ಯೆ ಅಂಕಿ ಅಂಶಗಳನ್ನು ಹಾಗೂ ಆರ್ಥಿಕತೆಗೆ, ಸಂಬಂಧಿಸಿದ ಅಂಕಿಸಂಖ್ಯೆಗಳ ಮಾಹಿತಿಯನ್ನು, ಈ ಸಮುದಾಯಕ್ಕೆ ಸಂಬಂಧಪಟ್ಟ ಇಲಾಖೆಯ ಅಧಿಕಾರಿಗಳಿಂದ, ಜಾತಿಯ ಜನಗಣತಿಯಿಂದ, ಈ ಬೇಡ ಸಮುದಾಯದ ಸಂಘಗಳಿಂದ, ಪಡೆದ ಮಾಹಿತಿಯನ್ನು ಪತ್ರಿಕೆಪುಸ್ತಕಗಳಿಂದ ಪಡೆದ ಮಾಹಿತಿಯನ್ನು, ಅಂಕಿ ಅಂಶಗಳಲ್ಲಿ ದಾಖಲಿಸಲಾಗಿದೆ.

೮) **ಅವಲೋಕನ ವಿಧಾನ:-** ಸಂಶೋಧನಾ ವಿಧಾನಗಳಲ್ಲಿ ಅವಲೋಕನ ವಿಧಾನ ಮುಖ್ಯವಾದದ್ದು. ಏಕಾಏಕಿಯಾಗಿ ಸಂಶೋಧನೆಗೆ ಇಳಿಯುವುದರ ಬದಲು ಮೊದಲು ಒಂದು ಸಮುದಾಯದ ಬಗ್ಗೆ ಸಂಪೂರ್ಣವಾಗಿ ಅವಲೋಕಿಸಿದಾಗ ನಿಜ ಸ್ಥಿತಿ ಅರಿವಾಗುತ್ತದೆ. ಹಾಗೆಂದು ನನ್ನ ಸಂಶೋಧನೆಯಲ್ಲಿ ಈ ವಿಧಾನವನ್ನು ಅಳವಡಿಸಿಕೊಂಡು ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಔದ್ಯೋಗಿಕ ಜೀವನ ಮತ್ತು ಅವರ ದಿನನಿತ್ಯದ ಬದುಕು ಬವಣೆಗಳ ಬಗ್ಗೆ ಅರಿತು ಈ ವಿಧಾನದ ಮೂಲಕ ಮಾಹಿತಿಯನ್ನು ಹೊರ ತೆಗೆಯಲಾಗಿದೆ.

ಅನಾದಿಕಾಲದಿಂದಲೂ ಬೇಡರು ಈ ದೇಶದ ಮೂಲ ನಿವಾಸಿಗಳಾಗಿದ್ದಾರೆ. ಹಾಗೂ ತನ್ನದೇ ಆದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದ್ದಾರೆ. ಇಡೀ ಭರತಖಂಡಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ. ರಾಜ್ಯದ ರಕ್ಷಣೆಯಲ್ಲಿ ದೇಶದ ರಕ್ಷಣೆಯಲ್ಲಿ ಇವರ ಪಾತ್ರ ಸಿಂಹಪಾಲಾಗಿದೆ. ಇಂತಹ ಬೇಡ ಸಮುದಾಯದವರ ಇಂದಿನ ಸ್ಥಿತಿಗತಿಗಳನ್ನು ಅವಲೋಕಿಸಿದಾಗ ಬೆರಳಣಿಕೆಯಷ್ಟು ಜನರು ಮಾತ್ರ ಅಭಿವೃದ್ಧಿಯನ್ನು ಹೊಂದಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ.

### ೧.೬ ಅಧ್ಯಯನದ ಪ್ರಾಮುಖ್ಯತೆ:

ಐತಿಹಾಸಿಕವಾಗಿ ಸಗರನಾಡನ್ನು ಅಧ್ಯಯನ ಮಾಡಿದಾಗ ಅದು ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದಿದೆ. ಇದುವರೆಗೆ ಸಗರನಾಡನ್ನು ಕುರಿತು ಇಲ್ಲಿಯ ಭೌಗೋಳಿಕ ಅಂಶಗಳನ್ನು ಕುರಿತು ಯಾರೊಬ್ಬರೂ ಸಂಪೂರ್ಣವಾಗಿ ಸಂಶೋಧನಾ ಅಧ್ಯಯನವನ್ನು ಕೈಗೊಂಡಿಲ್ಲ. ಹಾಗೂ ಈ ನಾಡು ಹೈದರಾಬಾದ ಕರ್ನಾಟಕಕ್ಕೆ ಒಳಪಟ್ಟಿರುವುದರಿಂದ ಸರ್ಕಾರದಿಂದ ಬಹಳ ನಿರ್ಲಕ್ಷ್ಯಕ್ಕೆ ಒಳಪಟ್ಟಿದೆ. ಆದ್ದರಿಂದ ಇಲ್ಲಿನ ಬೇಡ ಸಮುದಾಯ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಔದ್ಯೋಗಿಕವಾಗಿ ಬಹಳ ಹಿಂದುಳಿದಿರುವುದನ್ನು ಸಂಶೋಧನಾ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಅಲ್ಲದೆ ಇಲ್ಲಿನ ನೆಲ, ಜಲ, ಭಾಷೆ, ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರ, ಪದ್ಧತಿ ಇವೆಲ್ಲವುಗಳನ್ನು ಅರಿಯಲು ಈ ಅಧ್ಯಯನದಿಂದ ಸಾಧ್ಯವಾಗಿದೆ. ಈ ಬೇಡ ಸಮುದಾಯದ

ಬಗ್ಗೆ ಅಧ್ಯಯನ ಮಾಡುತ್ತಾ ಹೋದಾಗ ಸುರಪುರ ಬೇಡ ಸಮುದಾಯ ಹಾಗೂ ಶಹಾಪುರ, ಜೇವರ್ಗಿ ಬೇಡ ಸಮುದಾಯದ ನಡುವಿನ ವ್ಯತ್ಯಾಸವನ್ನು ಅರಿಯಲು ಸಾಧ್ಯವಾಗಿದೆ. ಒಂದು ವೇಳೆ ಈ ನಾಡಿನ ಈ ಬೇಡ ಸಮುದಾಯದ ಬಗ್ಗೆ ಸಂಶೋಧನೆ ಮಾಡದೇ ಹೋದಲ್ಲಿ ಇಲ್ಲಿನ ಬೇಡ ಸಮುದಾಯದ ವೈವಿಧ್ಯತೆಯನ್ನು ಅರಿಯಲು ಸಾಧ್ಯವಾಗುತ್ತಿರಲಿಲ್ಲ. "ದೇಶ ಸುತ್ತಿ, ಕೋಶ ಓದು" ಎನ್ನುವ ನಾಣ್ಣುಡಿಯಂತೆ ಸಗರನಾಡಿನಾದ್ಯಂತ ಕ್ಷೇತ್ರ ಕಾರ್ಯದಲ್ಲಿ ತೊಡಗಿದಾಗ ಬೇಡರ ಆರ್ಥಿಕ ಸಂಕಷ್ಟವನ್ನು ಅರಿಯಲು ಸಾಧ್ಯವಾಯಿತು. ಈಗಲೂ ಕೂಡ ಬೇಡರು ನಿಕೃಷ್ಟ ಜೀವನ ನಡೆಸುತ್ತಿರುವುದನ್ನು ನೋಡಿದರೆ ಇದಕ್ಕೆ ಕಾರಣಗಳು ಏನೆಂಬುದನ್ನು ತಿಳಿದುಕೊಳ್ಳಲಾಯಿತು. ಒಂದು ಕಡೆ ಸಗರನಾಡು ಸಾಂಸ್ಕೃತಿಕವಾಗಿ ಹಿರಿಮೆ, ಗರಿಮೆಯನ್ನು ಹೊಂದಿದ್ದರೆ ಇನ್ನೊಂದು ಕಡೆ ಬೇಡ ಸಮುದಾಯದವರು ಎಲ್ಲಾ ರೀತಿಯಿಂದಲೂ ಸಂಕಷ್ಟದ ಸುಳಿಗೆ ಸಿಲುಕಿರುವುದನ್ನು ನೋಡಬಹುದು. ಈ ಅಧ್ಯಯನ ಮುಂದೆ ಸಂಶೋಧನಾಕಾರರಿಗೆ ಸಮಾಜ ಸೇವಕರಿಗೆ, ದಲಿತೋದ್ಧಾರಕರಿಗೆ, ಇತಿಹಾಸ ತಜ್ಞರಿಗೆ, ಮಾನವ ಶಾಸ್ತ್ರಜ್ಞರಿಗೆ, ಸಮಾಜ ಶಾಸ್ತ್ರಜ್ಞರಿಗೆ, ಸ್ಥಳೀಯ ಸರ್ಕಾರಕ್ಕೆ ಮತ್ತು ರಾಜ್ಯ ಮತ್ತು ಕೇಂದ್ರ ಸರ್ಕಾರಕ್ಕೆ ಮಾಹಿತಿಯನ್ನು ನೀಡುವ ಒಂದು ಏಕೈಕ ಸಾಧನವಾಗಬಹುದು. ಈ ಅಧ್ಯಯನದ ಮುಖಾಂತರ ಇಲ್ಲಿನ ಬೇಡರ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಬಹುದು. ಆದ್ದರಿಂದ ಸಗರನಾಡಿನ ಬೇಡ ಸಮುದಾಯ ಕುರಿತು ಈ ಅಧ್ಯಯನ ಬಹಳ ಪ್ರಾಮುಖ್ಯತೆಯನ್ನು ಪಡೆದಿದೆ.

**೧.೭ ಇದುವರೆಗೆ ನಡೆದಿರುವ ಅಧ್ಯಯನಗಳು:**

ಸಗರನಾಡಿನ ಕುರಿತು, ಈ ನಾಡಿನ ಶಾಸನಗಳ ಕುರಿತು. ಐತಿಹಾಸಿಕ ಹಿನ್ನೆಲೆಯನ್ನು ಕುರಿತು, ಬೆರಳಣಿಕೆಯಷ್ಟು ಅಧ್ಯಯನಗಳು ನಡೆದಿವೆ ವಿನಃ ಸಮಾಜಶಾಸ್ತ್ರೀಯವಾಗಿ, ಮಾನವಶಾಸ್ತ್ರೀಯವಾಗಿ ಯಾವುದೇ ಅಧ್ಯಯನ ನಡೆದಿಲ್ಲ. ಆದರೆ ಕೆಲವು ಜನ ಸಂಶೋಧನ ವಿದ್ಯಾರ್ಥಿಗಳು, ಸಮುದಾಯ ಅಭಿಮಾನಿಗಳು, ಇತಿಹಾಸ ತಜ್ಞರು ಲೇಖನಗಳು, ಗ್ರಂಥಗಳು, ಸ್ಮರಣ ಸಂಚಿಕೆಯನ್ನು ಹೊರತರುವುದರ ಜೊತೆಗೆ ಈ ನಾಡಿನ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಆದ್ದರಿಂದ ಸಗರನಾಡಿನ ಬೇಡ ಸಮುದಾಯ ಕುರಿತು ಅಧ್ಯಯನ ನಡೆಸುವ ಅಗತ್ಯತೆ ಇದೆ. ಅಲ್ಲದೆ ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳಿಂದ, ಲೇಖನಗಳಿಂದ ಗ್ರಂಥಗಳಿಂದ ಸ್ವಲ್ಪ ಮಟ್ಟಿಗೆ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳಲಾಗಿದೆ. ಆದ್ದರಿಂದ ಸಗರನಾಡಿನ ಬೇಡ ಸಮುದಾಯ ಕುರಿತು ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳನ್ನು ಈ ಕೆಳಗಿನಂತೆ ಸೂಚಿಸಲಾಗಿದೆ.

೧. **ಕಲಬುರಗಿ ಜಿಲ್ಲೆ ಮಾನವ ಅಭಿವೃದ್ಧಿ ವರದಿ ೨೦೦೮:** ಸರಕಾರದ ಈ ವರದಿ ಪುಸ್ತಕದಲ್ಲಿ ಬೇಡ ಸಮುದಾಯದ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗೆ ಸಂಬಂಧಿಸಿದ

ಮಾಹಿತಿ ಹಾಗೂ ಈ ಸಮುದಾಯದ ಜನಸಂಖ್ಯೆ ವರದಿಯನ್ನು ಅಂಕಿ-ಸಂಖ್ಯೆಗಳನ್ನು ನೀಡಿರುವುದನ್ನು ಗಮನಿಸಬಹುದು.

೨. **ಸಗರನಾಡ ದರ್ಶನ:** ಎಂಬ ಸ್ಮರಣ ಸಂಚಿಕೆಯಿಂದ ಬೇಡ ಸಮುದಾಯದ ಚಾರಿತ್ರಿಕ ಹಿನ್ನೆಲೆ, ಜನಪದ ಗೀತೆ, ಕೆಲವು ಪ್ರಮುಖ ಬೇಡ ನಾಯಕರ ಜೀವನ ಚರಿತ್ರೆಯನ್ನು ಈ ಸಂಚಿಕೆಯಲ್ಲಿ ಕಾಣಬಹುದು.

೩. **ಭಾಸ್ಕರ್‌ರಾವ್ ಮುಡಬೋಳ ಅವರ ಮರೆಯಲಾಗದ ಸುರಪುರ ಇತಿಹಾಸ:** ಎಂಬ ಪುಸ್ತಕದಲ್ಲಿ ಬೇಡ ಸಮುದಾಯಕ್ಕೆ ಸೇರಿದ ರಾಜರುಗಳ ಮಾಹಿತಿ ಅವರ ಹೋರಾಟದ ಯುದ್ಧಗಳು ಅಂದಿನ ಬೇಡರ ಸಾಮಾಜಿಕ ಜೀವನ ಹಾಗೂ ಹಿಂದಿನ ಆರ್ಥಿಕ ಸ್ಥಿತಿಗತಿಯ ವಿಷಯಗಳು ಲಭ್ಯವಾಗಿವೆ.

೪. **ಶ್ರೀ ವಿ. ಕೃಷ್ಣಮಾಚಾರ್ಯ ರಾಜಗುರು ಇವರ ವಿರಚಿತ ಇತಿಹಾಸ ಪ್ರಾಸ್ತವಿಕವಾದ ಮರೆಯಲಾಗದ ಸುರಪುರ ರಾಜರಚರಿತ್ರೆ:** ಎಂಬ ಪುಸ್ತಕದಲ್ಲಿ ಬೇಡರ ಗೋಸಲ ವಂಶದ ಅರಸರ ೨೨೨ ವರ್ಷಗಳ ಆಳ್ವಿಕೆಯ ಚಿತ್ರಣದೊಂದಿಗೆ ಸಾಂಸ್ಕೃತಿಕವಾಗಿ, ಚಾರಿತ್ರಿಕವಾಗಿ, ಮನೋಜ್ಞವಾಗಿ ಮೂಡಿಬಂದಿದೆ.

೫. **ಶ್ರೀ ವಿರುಪಾಕ್ಷ ಕಟ್ಟಿಮನಿ** ಅವರ ಚಿಕ್ಕ ಲೇಖನ ಪುಸ್ತಕವಾದ **ಹಳ್ಳಿಹಾದಿ** ಎಂಬ ಲೇಖನ ಪುಸ್ತಕ ಸುರಪುರದ ಒಂದು ಪ್ರಮುಖ ಗ್ರಾಮವಾದ ಚಿಕ್ಕನಹಳ್ಳಿಯ ಭೌಗೋಳಿಕ ಪರಿಚಯ, ಹಳ್ಳಿಯ ಇತಿಹಾಸ ಹಾಗೂ ಹಿಂದಿನ ಮತ್ತು ಇಂದಿನ ಈ ಗ್ರಾಮದ ಸ್ಥಿತಿಗತಿಯನ್ನು ಕುರಿತು ಅಧ್ಯಯನ ಮಾಡಲಾಗಿದೆ.

೬. **ಭಾಸ್ಕರರಾವ ಮುಡಬೋಳ ಅವರಿಂದ ರಚಿತವಾದ ಬರಪೀಡಿತ ಸಗರನಾಡಿಗೆ ವರದಾನ "ದಕ್ಷಿಣದ ಗಂಗೆ-ಕೃಷ್ಣೆ"** ಎಂಬ ಪುಸ್ತಕ ರೈತರ ಕುರಿತು, ನೀರಾವರಿ ಹಾಗೂ ಈ ಭಾಗದ ಸಮಸ್ಯೆಗಳ ಕುರಿತ ಪುಸ್ತಕ ಇದಾಗಿದೆ.

೭. **ಡಾ॥ ಚೆನ್ನಮಲ್ಲಪ್ಪ ಜುಬೀರ ಅವರ ಸಂಶೋಧನಾ ಗ್ರಂಥ "ಕಲಬುರಗಿ ಜಿಲ್ಲೆಯ ಬುಡಕಟ್ಟು ರಾಜಕೀಯ"** ಎಂಬ ಕೃತಿ ಬುಡಕಟ್ಟು ಆದಿವಾಸಿ ರಾಜಕೀಯ ಕುರಿತು ಪ್ರಸ್ತುತ ಸಗರನಾಡಿನ ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಯ ಬುಡಕಟ್ಟು ರಾಜಕೀಯ ನಾಯಕರ ಜೀವನ ಅವರು ನಡೆದು ಬಂದ ಹಾದಿ ಬುಡಕಟ್ಟು ರಾಜಕೀಯ ಹಿನ್ನಲೆ ಸ್ಥಳೀಯ ಸಂಸ್ಥೆಗಳು ಹಾಗೂ ಬುಡಕಟ್ಟು ರಾಜಕೀಯ ಹೀಗೆ ಹತ್ತು ಹಲವಾರು ವಿಚಾರಗಳು ಈ ಕೃತಿಯಲ್ಲಿ ಅಡಕವಾಗಿದೆ.

೮. **ಬಸನಗೌಡ ಎಸ್. ಹುಣಸಗಿ ಇವರ ಹುಣಸಗಿ ಪೋಲೀಸ್ ಪಾಟೀಲ್ ಪ್ರತಿಷ್ಠಾನದ ವತಿಯಿಂದ ಪ್ರಕಟಗೊಂಡಿರುವ ಯಾದಗಿರಿಯ** ಸಿರಿ ಎಂಬ ಪುಸ್ತಕದಲ್ಲಿ ಸಗರನಾಡಿನ

ಸುರಪುರ ತಾಲೂಕಿನ ಹುಣಸಿಗಿಗೆ ಸಂಬಂಧಿಸಿದ ಆದಿ ಮಾನವನ **"ಅಶೋಲಿಯನ್"** ಸಂಸ್ಕೃತಿಯ ತಾಣದ ಕುರಿತು ಹಾವಿನಾಳ ಗ್ರಾಮದ ಕುರಿತು, ಚಂಡರಿಕಿಯ ಭದ್ರ ಕೋಟೆಯ ಕುರಿತು, ಪ್ರಾಗೈತಿಹಾಸಿಕ ಹಾಗೂ ಚಾರಿತ್ರಿಕ ಮಹತ್ವದ ತಾಣವಾದ ಹುಣಸಗಿ ಗ್ರಾಮದ ಕುರಿತು ವಜ್ಜಲ ಗ್ರಾಮ ಮತ್ತು ದೇವಾಲಯಗಳ ಕುರಿತು ಕೆಂಭಾವಿ ಗ್ರಾಮದ ಕುರಿತು ಸಂಪೂರ್ಣ ಮಾಹಿತಿ ಈ ಕೃತಿಯಲ್ಲಿ ಲಭ್ಯವಾಗಿದೆ.

೯. **ಶ್ರೀ ಮಹರ್ಷಿ ವಾಲ್ಮೀಕಿ** ಹಾಗೂ ನಾಯಕ ಜನಾಂಗ ಸಾಮಾಜಿಕ ಅಂಗವಾಗಿ ಹೊರ ತರಲಾಗಿರುವ **ಏಕಲವ್ಯ ಸ್ಮರಣ ಸಂಚಿಕೆಯ** ಲೇಖನಗಳಾದ ಸಗರನಾಡಿನ ಅನೇಕ ಬೇಡ ನಾಯಕರ-ರಾಣಿಯರ ಕುರಿತು ಜೀವನ ಚರಿತ್ರೆ ಬೇಡರ ಹಬ್ಬ ಹರಿದಿನಗಳು ಪರಿಶಿಷ್ಟ-ಪಂಗಡದ ಜನಾಂಗಕ್ಕಿರುವ ಸರಕಾರದ ಸೌಲಭ್ಯಗಳು ಈ ಎಲ್ಲಾ ಮಾಹಿತಿ ಈ ಏಕಲವ್ಯ ಸ್ಮರಣ ಸಂಚಿಕೆಯಲ್ಲಿದೆ.

೧೦. **ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿಯವರ ಸಗರನಾಡಿನ "ಸುರಪುರ ಶೈಲಿಯ ಚಿತ್ರಕಲೆ"** ವಿಷಯದ ಪ್ರಬಂಧವು ಸಗರನಾಡಿನ ಬೇಡರ ಸಂಸ್ಥಾನದ ಇತಿಹಾಸ, ಸಾಹಿತ್ಯ, ಕಲೆ, ವಾಸ್ತುಶಿಲ್ಪ, ಪಂಚಾಂಗ, ಬೇಡರ ಸಂಸ್ಕೃತಿ ಈ ಗ್ರಂಥದಲ್ಲಿ ಇರುವುದನ್ನು ಕಾಣಬಹುದು.

೧೧. **ಸುರಪುರ ತಾಲೂಕಿನ ಪ್ರೇಕ್ಷಣೀಯ ಸ್ಥಳಗಳು ಎಂಬ ಸಚಿತ್ರಮಯ ಕಿರುಹೊತ್ತಿಗೆ**ಯಲ್ಲಿ ಸಗರನಾಡಿನ ಸುರಪುರ ತಾಲೂಕಿನ ಪ್ರೇಕ್ಷಣೀಯ ಸ್ಥಳಗಳನ್ನು ವಿವರಿಸಿ ಪರಿಚಯಿಸಲಾಗಿದೆ. ಹಾಗೂ ಈ ನಾಡಿನ ಬೇಡ ಸಮುದಾಯದ ರಾಜರ ಹಾಗೂ ಐತಿಹಾಸಿಕ ಪುರುಷರ ಚಾರಿತ್ರಿಕ ಅಂಶಗಳನ್ನು ಸಂಗ್ರಹಿಸಲಾಗಿದೆ. ಹಾಗೂ ಪ್ರೇಕ್ಷಣೀಯ ಸ್ಥಳಗಳ ನಕಾಶೆಯು ಈ ಗ್ರಂಥಕ್ಕೆ ಹೆಚ್ಚಿನ ಮೆರಗನ್ನು ನೀಡಿದೆ.

೧೨. **ಡಾ.ತಾರಿಹಳ್ಳಿ ಹನುಮಂತಪ್ಪ ಅವರ (ಸಂ) ನಾಯಕರ ಮಹಾಸಂಸ್ಥಾನ ಸುರಪುರ** ಎಂಬ ಪುಸ್ತಕದಲ್ಲಿ ಸಗರನಾಡಿನ ಸುರಪುರದ ಬೇಡ ಜನಾಂಗದ ಕುರಿತು ಐತಿಹಾಸಿಕ ಹಿನ್ನಲೆ,ಪ್ರಸ್ತುತ ಬೇಡ ಜನಾಂಗದ ಸ್ಥಿತಿಗತಿ,ಹಾಗೂ ಮಹಿಳೆಯರ ಸ್ಥಾನ-ಮಾನ,ಹಬ್ಬ ಹರಿದಿನ, ಜಾತ್ರೆ ಉತ್ಸವಗಳ ಕುರಿತು ಅನೇಕ ಲೇಖನಗಳು ಈ ಪುಸ್ತಕದಲ್ಲಿ ಅಡಕವಾಗಿವೆ.

## ಅಧ್ಯಾಯ - ೨

## ಸಗರನಾಡಿನ ಚಾರಿತ್ರಿಕ ಹಿನ್ನೆಲೆ

೧. ಸಗರನಾಡಿನ ಕ್ಷೇತ್ರ ಪರಿಚಯ
೨. ಸಗರನಾಡಿನ ಚಾರಿತ್ರಿಕ ಹಿನ್ನೆಲೆ
೩. ಸಗರನಾಡಿನ ಗಡಿರೇಖೆಗಳು
೪. ಸಗರನಾಡಿನ ಬೇಡ ಸಮುದಾಯದ ದೊರೆಗಳ ಚರಿತ್ರೆ
೫. ಹೈದರಾಬಾದ್ ಕರ್ನಾಟಕ ವಿಮೋಚನೆಯಲ್ಲಿ ಬೇಡ ನಾಯಕರ ಪಾತ್ರ
೬. ಸಗರನಾಡಿನ ಬೇಡ ದೊರೆಗಳ ವಂಶಾವಳಿ
೭. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡ ಪ್ರಮುಖ ವ್ಯಕ್ತಿಗಳ ಹೆಸರುಗಳು

# ಅಧ್ಯಾಯ ೨

# ಸಗರನಾಡಿನ ಚಾರಿತ್ರಿಕ ಹಿನ್ನೆಲೆ

## ೨.೧ ಸಗರನಾಡಿನ ಕ್ಷೇತ್ರ ಪರಿಚಯ:

ಭಾರತ ದೇಶದ ಪ್ರತಿಯೊಂದು ಜಾತಿ, ಧರ್ಮ, ಸಮುದಾಯಗಳಿಗೆ ತನ್ನದೆಯಾದ ಚಾರಿತ್ರಿಕ ಹಿನ್ನೆಲೆ ಇದೆ. ಅದರಲ್ಲಿಯೂ ನಾವು ಕರ್ನಾಟಕವನ್ನು ಭಾರತ ದೇಶದ ಹೆಮ್ಮೆಯ ನಾಡು ಎಂದು ಕರೆಯಬಹುದು. ಕರ್ನಾಟಕದ ಕೆಲವು ಪ್ರದೇಶಗಳನ್ನು ಗಂಡು ಮೆಟ್ಟಿದ ನೆಲ ಎಂದು ಕರೆಯುತ್ತಾರೆ. ಈ ಕರುನಾಡಿನಲ್ಲಿ ಸಗರನಾಡು ಕೂಡ ಗಂಡು ಮೆಟ್ಟಿದ ನೆಲ. ಅಲ್ಲದೆ ಧೈರ್ಯ, ಸ್ವಾಭಿಮಾನ, ದಾನ, ಧರ್ಮಗಳಿಗೆ ಹೆಸರುವಾಸಿಯಾಗಿದೆ. ಸಗರನಾಡು ಎಂಬುದು ಎಲೆಮರಿ ಕಾಯಿಯಂತೆ. ಇತಿಹಾಸ ಸಂಶೋಧಕರಿಗೆ, ಇತಿಹಾಸಕಾರರಿಗೆ, ಬುದ್ಧಿಜೀವಿಗಳಿಗೆ ಕಂಡೂ ಕಾಣದಂತೆ ಇತ್ತು. ಸರಕಾರದಿಂದ, ಇತಿಹಾಸಕಾರರಿಂದ ನಿರ್ಲಕ್ಷ್ಯಕ್ಕೆ ಒಳಪಟ್ಟ ಈ ನಾಡಿನ ಹಿರಿಮೆಯನ್ನು ವರ್ಣನೆ ಮಾಡಲು ಪದಗಳು ಸಾಕಾಗುವುದಿಲ್ಲ. ಆದರೆ ಇಂದು ಸಗರನಾಡು ತನ್ನ ಇತಿಹಾಸವನ್ನು ನೆನಪಿಸಿಕೊಳ್ಳುತ್ತಿದೆ. ಈ ನಾಡಿನ ಕೆಲವು ಬುದ್ಧಿಜೀವಿಗಳು, ಇತಿಹಾಸ ತಜ್ಞರು, ಅಭಿಮಾನಿಗಳು, ಸಂಶೋಧನಾ ವಿದ್ಯಾರ್ಥಿಗಳು ಸಗರನಾಡಿನ ಚಾರಿತ್ರಿಕ ಹಿನ್ನೆಲೆಯ ಹಿರಿಮೆಯನ್ನು ಎಳೆ ಎಳೆಯಾಗಿ ಬಿಚ್ಚಿಡುತ್ತಿದ್ದಾರೆ. ಆದರೂ ಕೂಡ ಸಂಪೂರ್ಣವಾಗಿ ಇಲ್ಲಿಯವರೆಗೆ ಯಾವುದೇ ವೈಜ್ಞಾನಿಕ, ಸಾಮಾಜಿಕ, ಐತಿಹಾಸಿಕ, ಸಂಶೋಧನೆಗಳು ಆಗಿಲ್ಲ.

ನಾಡಿನ ಭೌಗೋಳಿಕ ಹಿನ್ನೆಲೆಯಲ್ಲಿ ನೋಡಿದಾಗ ಸುರಪುರ ತಾಲೂಕಿನ ಮಂಗಳೂರು ಗ್ರಾಮದ ಬಳಿ ಹಿಂದೆ ಬಂಗಾರದ ಗಣಿಗಳಿದ್ದವೆಂಬುದು ಭೂಗರ್ಭ ಸಂಶೋಧಕರ ಅಭಿಪ್ರಾಯವಾಗಿದೆ. ಮಾವಿನಮಟ್ಟಿ, ಜೈನಾಪುರ ಎಂಬ ಗ್ರಾಮಗಳಿಂದ ಪ್ರಾರಂಭವಾಗಿ ನಗನೂರುವರೆಗೆ ಭೂಭಾಗದಲ್ಲಿ ಬಂಗಾರದ ನಿಕ್ಷೇಪಗಳು ಇದ್ದವು ಎಂದು ಹೇಳಲಾಗುತ್ತದೆ. ೧೯೦೫ರಲ್ಲಿ ಕಂಪನಿಯೊಂದು ಗಣಿಯ ಉದ್ಯಮವನ್ನು ಪ್ರಾರಂಭಿಸಿತ್ತು. ಕಾರಣಾಂತರಗಳಿಂದ

೧೯೧೧ರಲ್ಲಿ ಸಂಪೂರ್ಣ ಸ್ಥಗಿತಗೊಂಡಿತ್ತು. ಈಗಿನ ಲಿಂಗಸೂರು ತಾಲೂಕಿನ ಹಟ್ಟಿಯ ಚಿನ್ನದ ಗಣಿಯ ತರುವಾಯ ಸಗರನಾಡು ವ್ಯಾಪ್ತಿಯಲ್ಲಿ ತಕ್ಕ ಪ್ರಮಾಣದ ಚಿನ್ನ ಲಭ್ಯವಾಗಬಹುದೆಂಬುದು ತಜ್ಞರ ಅಭಿಪ್ರಾಯ. ಅಂದಿನ ಸುರಪುರ ಸಂಸ್ಥಾನ ಬ್ರಿಟೀಷ ಅಧಿಕಾರಿಯಾಗಿದ್ದ ಮೆಡೋಸ್ ಟೇಲರನು ಭೂಗರ್ಭಶಾಸ್ತ್ರಜ್ಞನಾಗಿದ್ದನಲ್ಲದೇ ಈ ಪ್ರದೇಶದ ಹಲವೆಡೆ ಸಂಶೋಧನೆ ಮಾಡಿ ನಿಕ್ಷೇಪಗಳನ್ನು ಶೋಧಿಸಿದ್ದಾನೆ. ಸುರಪುರ ಪ್ರದೇಶದಲ್ಲಿ ಅರ್ಧ ಅಂಗುಲದಿಂದ ಆರು ಅಂಗುಲ ಅಗಲವುಳ್ಳ ಸ್ಫಟಿಕದ ಹರಳುಗಳು ದೊರಕುತ್ತವೆ. ಮೊದಲಬಾವಿ, ಹಗರಟಗಿ, ಹಾಗೂ ಕೊಡೇಕಲ್‌ಗಳಲ್ಲಿ ಗಾಜಿನ ತಯಾರಿಕೆಗೆ ಬೇಕಾಗುವ ಹರಳು ಬೆಳ್ಳನೆಯ ಮರಳು ಹೇರಳವಾಗಿ ಸಿಗುತ್ತದೆ. ರಾಜನಕೊಳ್ಳೂರ ಗ್ರಾಮದಲ್ಲಿ ವಜ್ರದ ಗಣಿಗಳಿದ್ದವೆಂದು ಇದೇ ಗ್ರಾಮದ ವ್ಯಾಪ್ತಿಯಲ್ಲಿ ಕೋಹಿನೂರು ವಜ್ರ ದೊರಕಿರಬಹುದೆಂದು ಡಾ. ಸದಾನಂದ ಕನವಳ್ಳಿಯವರು ತಮ್ಮ ಗ್ರಂಥವೊಂದರಲ್ಲಿ ವಿವರಿಸಿದ್ದಾರೆ. ಅಲ್ಲದೆ ಸಗರನಾಡಿನ ತಿಂಥಣಿ ಗ್ರಾಮದಲ್ಲಿ ತಾಮ್ರದ ಅದಿರು ದೊರಕುತ್ತದೆ. ಹೀಗೆ ಸಂಪದ್ಭರಿತ ಸಂಪನ್ಮೂಲಗಳನ್ನು ಹೊಂದಿದ ಸಗರನಾಡಿನ ಸಂಸ್ಕೃತಿ, ವೈಭವ, ರಾಜ್ಯ ಆಡಳಿತ ಹೀಗೆ ಇದರ ಐತಿಹಾಸಿಕ ಹಿನ್ನಲೆಯನ್ನು ಎಳೆ ಎಳೆಯಾಗಿ ಬಿಚ್ಚಿಡುವ ಅವಶ್ಯಕತೆ ಇದೆ.

ಹೈದರಾಬಾದ ಕರ್ನಾಟಕದ ಸಗರನಾಡು ಎಂಬುದು ಇತಿಹಾಸ ಪ್ರಸಿದ್ಧ ಪ್ರದೇಶವಾಗಿದೆ. ಕೃಷ್ಣ ಮತ್ತು ಭೀಮ ನದಿಯ ನಡುವೆ ಇರುವ ಪ್ರದೇಶವನ್ನು ಸಗರ ಚಕ್ರವರ್ತಿಯು ಆಳುತ್ತಿದ್ದುದ್ದರಿಂದ ಈ ಪ್ರದೇಶ ಸಗರನಾಡು ಎಂದು ಜನಪ್ರಿಯವಾಯಿತು. ಈ ಸಗರನಾಡು ಸುರಪುರ, ಶಹಾಪುರ, ಜೇವರ್ಗಿ ಅಲ್ಪ ಸ್ವಲ್ಪ ಯಾದಗಿರಿ ಹಳ್ಳಿಗಳನ್ನು ಒಳಗೊಂಡಿದೆ. ಈ ಸಗರನಾಡು ಅಂದು ಪುಣ್ಯ ತೀರ್ಥಕ್ಷೇತ್ರಗಳ ದೆಸೆಯಿಂದಲೂ ಧಾರ್ಮಿಕ, ಸಾಂಸ್ಕೃತಿಕ, ಸಾಹಿತಿಕ, ರಾಜಕೀಯ ಹಾಗೂ ಆರ್ಥಿಕ ದೃಷ್ಟಿಯಿಂದಲೂ ಸಗರನಾಡು ವೈಭವ ಪ್ರೇರಿತ ಪ್ರದೇಶವಾಗಿತ್ತು. ಅಂದು ಸುಭದ್ರವಾಗಿದ್ದ ಸಗರನಾಡು ಮುಸ್ಲಿಂ ಆಳರಸರ ದಬ್ಬಾಳಿಕೆಯಿಂದ ಅವರ ಭೋಗ ಲಾಲಸೆಗೆ ಛಿದ್ರ ಛಿದ್ರವಾದದ್ದು ನಾಡಿನ ಜನರ ದುರ್ದೈವ. ಇಂದು ನಮ್ಮ ಕಣ್ಣಿಗೆ ಕಾಣುವ ಸಗರ ಕೋಟೆ, ವಾಗಣಗೇರಿಯ ಕೋಟೆ, ಶಹಾಪುರದ ಕೋಟೆಯೇ ಇದಕ್ಕೆ ಸಾಕ್ಷಿ.

ಈ ಪುಣ್ಯ ಭೂಮಿಗೆ ಸಗರನಾಡು ಎಂದು ಹೆಸರು ಬಂದಿದ್ದು ಪುರಾಣ ಕಾಲದಿಂದ ಎಂದು ಹೇಳಬಹುದು. ಮಹಾ ಧೈರ್ಯವಂತನು, ಮಹಾ ಬಲಶಾಲಿಯೂ, ಉನ್ನತ ಮಹಿಮಾ ಸಂಪನ್ನನು, ಪರಧರ್ಮ ಸಹಿಷ್ಣುತೆಉಳ್ಳವನು ಆದ ಸಗರನು ಈ ಪ್ರದೇಶವನ್ನು ಆಳಿದ್ದರಿಂದ ಈ ನಾಡಿಗೆ ಸಗರನಾಡು ಎಂದು ಹೆಸರು ಬರಲು ಕಾರಣವಾಗಿದೆ. ಸಗರನಾಡಿನ ಸುರಪುರ, ಶಹಾಪುರ, ಜೇವರ್ಗಿಯ ಊರುಗಳಲ್ಲಿ ಬೆಟ್ಟಗಳ ಮೇಲೆ ಕಾಣುತ್ತಿರುವ ಕೋಟೆಗಳು ಈ ರಾಜನೇ ಕಟ್ಟಿಸಿದ್ದಾನೆಂಬ ಪ್ರತೀತಿ ಇದೆ. ಮೊಗಲ ಚಕ್ರವರ್ತಿ ಔರಂಗಜೇಬನ ಕಾರ್ಯಗಳಿಗೆ ತುತ್ತಾಗಿ ಶಿಥಿಲವಾಗಿ ಹಾಳುಬಿದ್ದ ಕೋಟೆಗಳನ್ನು

ವಿಜಾಪುರದ ಬಾದಶಾಹನು ಪುನಃ ನಿರ್ಮಿಸಿದ್ದಾನೆಂದು ತಿಳಿದು ಬರುತ್ತದೆ. ಇಂದು ನಮ್ಮ ಕಣ್ಣಿಗೆ ಕಾಣುವ ಹಾಳು ಬಿದ್ದ, ಭಗ್ನವಾದ ದೇವಸ್ಥಾನಗಳು ಮುಸ್ಲಿಂ ಅರಸರ ದೌರ್ಜನ್ಯಕ್ಕೆ ಸಾಕ್ಷಿ ಎಂದು ಹೇಳಬಹುದು. ಕೆಲವು ಕಡೆಗಳಲ್ಲಿ ಹಿಂದು ದೇವಾಲಯಗಳು ಇದ್ದ ಸ್ಥಳಗಳಲ್ಲಿ ಮಸೀದಿ ನಿರ್ಮಾಣ ಮಾಡಿದ್ದಾರೆ ಎಂಬುದು ಜನರ ಮಾತಿನಿಂದ ತಿಳಿದು ಬರುತ್ತದೆ.

ಸಗರನಾಡು ಚಾಲುಕ್ಯರ ಮೊದಲುಗೊಂಡು ಗೋಸಲ ವಂಶದ ಸುರಪುರ ದೊರೆಗಳ ವರೆಗೂ ಔರಂಗಜೇಬನಿಂದ ಮೊದಲುಗೊಂಡು ಹೈದರಾಬಾದಿನ ನಿಜಾಮನವರೆಗೂ ವಿವಿಧ ರಾಜರ ಆಡಳಿತಕ್ಕೆ ಒಳಪಟ್ಟು ಉನ್ನತಿಯನ್ನು, ಅವನತಿಯನ್ನು ಹೊಂದುತ್ತಾ ಬಂದಿತ್ತು. ವಿಜಯನಗರದ ಕಂಪಿಲರಾಯನ ಕಾಲಕ್ಕೆ ಫಲವತ್ತಾದ ಈ ಸಗರನಾಡು ಅತ್ಯುನ್ನತ ವೈಭವದಿಂದ ಮೆರೆದಿತ್ತೆಂದು ತಿಳಿದು ಬರುತ್ತದೆ. ಮುಸ್ಲಿಂ ಬಾದಶಾಹರೊಡನೆ ಕೃಷ್ಣದೇವರಾಯ ಸಗರ ಕೋಟೆಯಲ್ಲಿ ಯುದ್ಧ ಮಾಡಿದ ಸಂಗತಿಯನ್ನು ಇತಿಹಾಸಕಾರರಾದ ಶ್ರೀ ನೀಲಕಂಠ ಶಾಸ್ತ್ರಿಗಳು ಉಲ್ಲೇಖಿಸಿದ್ದಾರೆ. ಅಳಿಯ ರಾಮರಾಯರಿಗಂತೂ ಸಗರ ಸಂಕ್ರಮಣರಾಯನೆಂಬ ಹೆಸರು ಆತನ ಬಿರುದಾವಳಿಗಳಲ್ಲಿ ಒಂದಾಗಿತ್ತು ಎಂಬುದನ್ನು ಅನೇಕ ಕೈಫೀತುಗಳಲ್ಲಿ ಹೇಳಲಾಗಿದೆ. ಕಾಲ ಕಾಲಕ್ಕೆ ಅದರ ಗಡಿಗಳು ವಿಸ್ತೃತವಾಗಿಯೂ ಮೋಟಕಾಗಿಯೂ ಕೊನೆಗೆ ಕೃಷ್ಣಾ ಭೀಮಾ ನದಿಗಳನ್ನು ಮಧ್ಯದ ಮೂರು ತಾಲೂಕುಗಳಿಗೆ ಸುರಪುರ ಶಹಾಪುರ ಜೇವರ್ಗಿ ತಾಲೂಕುಗಳಿಗೆ ಸೀಮಿತವಾದಂತೆಯೂ ಕಂಡು ಬರುತ್ತದೆ.

"ಸಗರ ಸಾವಿರ ಹಳ್ಳಿ ಏಕ ದೋರನಹಳ್ಳಿ" ಎಂಬ ಮಾತು ದೇವದುರ್ಗ ಲಿಂಗಸುಗೂರು ಗುಡಗುಂಟಿ ಯಾದಗಿರಿಯ ಕೆಲವು ಭಾಗಗಳು ಸುರಪುರ ಸಂಸ್ಥಾನದ ಕಾಲದಲ್ಲಿ ಅವರ ವಶದಲ್ಲಿ ಇದ್ದವೆಂಬ ಮಾತು ನಿಜವಾದದ್ದು. ಬೀದರ ಕೋಟೆಯವರೆಗೆ ಸಗರನಾಡು ವಿಸ್ತಾರಗೊಂಡಿತ್ತೆಂಬ ವಿಚಾರವು ಸಗರನಾಡಿನ ವೈಶಾಲ್ಯವನ್ನು ಎತ್ತಿ ತೋರಿಸುತ್ತದೆ. ದಿವಂಗತ ಕಪಟರಾಳ ಕೃಷ್ಣರಾಯರು ಈ ಸಂಗತಿಯನ್ನು ತಮ್ಮ ಸುರಪುರ ಸಂಸ್ಥಾನದ ಇತಿಹಾಸ ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

ಸಗರನಾಡಿನ ವಿವಿಧ ಅನೇಕ ಸ್ಥಳಗಳಲ್ಲಿ ರಾಮಾಯಣ ಮಹಾಭಾರತದ ಅನೇಕ ಕುರುಹುಗಳು ದೊರೆಯುತ್ತಿರುವುದು ಇದರ ಪ್ರಾಚೀನತೆಗೆ ಸಾಕ್ಷಿಯಾಗಿದೆ. ಪುರಾತತ್ವ ಇಲಾಖೆಯ ಸಂಶೋಧಕರಾಗಿದ್ದ ಟೇಲರ್ ಸಾಹೇಬರು ಕ್ರಿ.ಶ. ೧೮೫೨ರಲ್ಲಿ ಕೈಗೊಂಡ ಸಂಶೋಧನೆಯಿಂದ ಜೇವರ್ಗಿ ಆಂದೋಲಗಳಲ್ಲಿ ಮಣ್ಣಿನ ಪಾತ್ರೆಗಳು, ಕಂಚಿನ ವಿಗ್ರಹಗಳು ಹಾಗೂ ಬಿಳುಪುಗಲ್ಲಿನಲ್ಲಿ ಮಾಡಿದ ಅನೇಕ ಸಾಮಗ್ರಿಗಳು ಕ್ರಿ.ಶ. ೨-೩ ಸಾವಿರ ವರ್ಷಗಳಿಗಿಂತ ಪೂರ್ವವೆಂದು ದೃಢಪಡಿಸಿದ್ದರು. ಇಂತಹ ಅನೇಕ ಸಾಕ್ಷಿಗಳನ್ನು ಸಂಶೋಧನೆಗಳಿಂದ ತಿಳಿದುಬರುವ ಒಂದು ಸತ್ಯವೇನೆಂದರೆ, ಸಗರನಾಡು ವೈಭವಯುತ ನಾಡಾಗಿತ್ತೆಂದು ಹೇಳಬಹುದು.

'ಅಲ್ಲದೆ ಸಗರನು ಯಾರು? ಹೇಗೆ ಹುಟ್ಟಿದ್ದ? ಅವನ ವ್ಯಕ್ತಿತ್ವದ ಬಗ್ಗೆಯು ಸಹ ಕೂಲಂಕುಷವಾಗಿ ಅಧ್ಯಯನ ಮಾಡಲಾಗಿದೆ. ಈ ಪ್ರದೇಶದಲ್ಲಿ ನಮಗೆ ಕಂಡು ಬರುವ ಊರುಗಳು ಮೂರು. ಒಂದು ಹಳೆಯ ಸಗರ. ಇನ್ನೊಂದು ಶಹಾಪುರ. ಮೂರನೇಯದು ಹೊಸ ಸಗರ. ಈ ಮೂರು ಊರುಗಳಲ್ಲಿ ನಿಜವಾದ ಸಗರ ಯಾವುದೆಂದು ಪ್ರಶ್ನೆ ಮೂಡಿದಾಗ ಕೆಲವು ಪ್ರಾಚೀನ ಗ್ರಂಥಗಳಲ್ಲಿ ಇದ್ದಂತೆ ಸಗರಾದ್ರಿಯ ತಪ್ಪಲಲ್ಲಿ ವಿಸ್ತೃತವಾಗಿ ಬೆಳೆದಿದ್ದ ಸಗರ ನಗರವೇ ಪುರಾತನ ಸಗರವೆಂದು ಕಂಡುಬರುತ್ತದೆ.'[೨] ಮಾಸಿನಾಳದ ನಾಗರಾಜ ತನ್ನ ಪುಣ್ಯಶ್ರಮವೆಂಬ ಗ್ರಂಥದಲ್ಲಿ ತಾನು ಸೇಡಿಂಬಪುರದಲ್ಲಿ ರಾಷ್ಟ್ರಕೂಟ ರಾಜರ ಆಶ್ರಯದಲ್ಲಿ ಇದ್ದಾಗ ಸಗರ ನಗರದ ಶ್ರೇಷ್ಠಿಗಳು ತಮಗೆ ಕಾವ್ಯವೊಂದನ್ನು ಬರೆಯಲು ಕೇಳಿಕೊಂಡರೆಂದು ಅವರ ಇಚ್ಛೆಯಂತೆ ತಾನು ಪುಣ್ಯಸ್ರವವೆಂಬ ಮಹಾ ಕಾವ್ಯವನ್ನು ರಚಿಸಿದನೆಂದು ಹೇಳಿಕೊಂಡಿದ್ದಾನೆ. ಹೀಗಿದ್ದ ಮೇಲೆ ಈಗಿನ ಶಹಾಪುರ ಮತ್ತು ಹಳೇ ಸಗರ ಇವೆ ಪುರಾತನ ಅಂದಿನ ಸಗರವಾಗಿರಲು ಯಾವ ಸಂಶಯವು ಪಡಬೇಕಾಗಿಲ್ಲ. ಮುಸ್ಲಿಂ, ಮೊಘಲ್ ಅರಸರ ದಾಳಿಯಲ್ಲಿ ಸರ್ವನಾಶವಾಗಿದ್ದ ಸಗರ ಆದಿಲ್‌ಶಾಹಿ ರಾಜರ ಕಾಲಕ್ಕೆ ಶಹಾಪುರ (ಷಹಾಪುರ)ವಾಯಿತೆಂದು ಈ ಮಾತನ್ನು ಪುಷ್ಠೀಕರಿಸುತ್ತದೆ. ಇನ್ನು ಪುರಾತನ ನಗರದ ಅಳಿದುಳಿದ ಭಾಗ ಹಳೇಯ ಸಗರವಾಗಿ ಪುರಾತನ ಸಗರದಿಂದ ನಿರ್ಗತಿಕರಾಗಿ ಹೋದ ಜನರು ಬೆಟ್ಟದ ಹಿಂಭಾಗದಲ್ಲಿ ಹೊಸ ಸಗರವೊಂದನ್ನು ನಿರ್ಮಿಸಿಕೊಂಡಿರಬಹುದೆಂದು ತಿಳಿದುಬರುತ್ತದೆ. ಅದನ್ನು ದೊಡ್ಡ ಸಗರ ಎಂದು ಕರೆಯುತ್ತಾರೆ. ಸಗರ ಚಕ್ರವರ್ತಿಯ ಕಾಲದಲ್ಲಿ ನೆಲೆಸಿದ್ದ ಸಗರ ಈಗಿನ ಶಹಾಪುರವೇ ಆಗಿತ್ತು ಎಂಬುವುದು ನಿರ್ವಿವಾದ.

### ೨.೨. ಚಾರಿತ್ರಿಕ ಹಿನ್ನೆಲೆ:

'ಇನ್ನು ಸಗರ ಚಕ್ರವರ್ತಿಯ ಜೀವನ ಚರಿತ್ರೆ, ಈತನ ವೃತ್ತಾಂತ ಎಷ್ಟು ರೋಚಕವೋ ಅನುಕಂಪಪೂರ್ಣವೋ ಅಷ್ಟೇ ವೈಭವಪ್ರೇರಿತವೂ ಆಗಿದೆ. ಇದು ಈ ನಾಡಿನ ಪಾವಿತ್ರ್ಯಕ್ಕೂ, ಹಿರಿಮೆಗೂ ಕನ್ನಡಿ ಹಿಡಿಯುವಂತಿದೆ. ಇಕ್ಷ್ವಾಕು ವಂಶದಲ್ಲಿ ಅಂಬರೀಷನೆಂಬ ಅರಸು ಪರಮಜ್ಞಾನಿಯು ರಾಜರ್ಷಿಯೂ ಎಂದು ಪ್ರಸಿದ್ಧಿ ಹೊಂದಿದ್ದನು. ಆತ ಮನು ಪುತ್ರನ, ಭಗನ ಮಗನಾದ ನಾಭಾಗನ ಮಗನು. ಈತನು ಪರಮಾತ್ಮನ ಪ್ರೀತಿಯ ಮಹಾಭಕ್ತನು ಉದಾರ ಧರ್ಮಾತ್ಮನು ಆಗಿದ್ದನು. ಇದೇ ವಂಶದಲ್ಲಿ ಜನಿಸಿದ ತ್ರಿಶಂಕು (ಸಾತ್ಯವೃತ)ನಿಗೆ ಹರಿಶ್ಚಂದ್ರನೆಂಬ ಪ್ರಖ್ಯಾತ ಮಗ ಹುಟ್ಟಿದ. ವಿಶ್ವಾಮಿತ್ರನ ದೆಸೆಯಿಂದಾಗಿ ಆತ ಪಟ್ಟ ಭವಣೆ, ಈಶ್ವರನ ಸಾಕ್ಷಾತ್ಕಾರ ಮುಂತಾದ ವಿಷಯಗಳು ಗೊತ್ತಿದ್ದ ಸಂಗತಿಗಳೇ ಆಗಿವೆ. ಹರಿಶ್ಚಂದ್ರ ಮಹಾರಾಜನಿಗೆ ಬಹುಕಾಲ ಮಕ್ಕಳು ಆಗದಿದ್ದಾಗ ನಾರದರ ಉಪದೇಶದಿಂದ ವರುಣ ದೇವರ ಅನುಗ್ರಹದೊಂದಿಗೆ ರೋಹಿತನೆಂಬ ಮಗನನ್ನು ಪಡೆದನು. ರೋಹಿತನ ಮಗನೇ ಹರಿತ, ಹರಿತನಿಂದ ಚಂಪ, ಚಂಪನಿಂದ ಸುದೇವ, ಸುದೇವನಿಗೆ ವಿಜಯ,

ವಿಜಯನ ಮಗ ಬರುಕ, ಬರುಕನಿಗೆ ವೃಕ, ವೃಕನಿಗೆ ಬಾಹುಕ, ಬಾಹುಕನಿಂದ ಶತ್ರುಗಳು ರಾಜ್ಯವನ್ನು ಕಸೆದುಕೊಂಡಿದ್ದರಿಂದ ಆತ ನಿರಾಶೆ ಹೊಂದಿ ತನ್ನ ಓರ್ವ ಪ್ರೀತಿಯ ಪತ್ನಿಯೊಡನೆ ವನವನ್ನು ಸೇರಿದನು. ವೃದ್ಧಾಪ್ಯದಿಂದಾಗಿ ಆತನಿಗೆ ಮೃತ್ಯು ಸಂಭವಿಸಿತು. ಆತನ ಪತ್ನಿ ಸಹಗಮನಕ್ಕೆ ಸಿದ್ಧವಾದಳು. ಆದರೆ ಮಹರ್ಷಿ ಜಾರ್ವರಿಗೆ ಆಕೆ ಗರ್ಭವತಿ ಎಂಬುದು ತಿಳಿದು ಬಂದುದ್ದರಿಂದ ಆಕೆ ಸಹಗಮನಕ್ಕೆ ತಡೆದರು. ಈ ವಿಷಯ ಆಕೆಯ ಸವತಿಗೆ ಗೊತ್ತಾಯಿತು. ಅವರು ಉಪಾಯದಿಂದ ಆಕೆಯ ಊಟದಲ್ಲಿ ವಿಷ ಬೆರೆಸಿದರು. ಆದರೆ ಆಕೆಯ ಗರ್ಭದ ಮೇಲೆ ವಿಷದ ಯಾವ ಪರಿಣಾಮವೂ ಬೀರಲಿಲ್ಲ. ಅದರ ಬದಲಾಗಿ ವಿಷದೊಡನೆಯೇ ಸಗರನ ಜನ್ಮವಾಯಿತು. ಆತನೇ ಮುಂದೆ ಯಶಸ್ವೀ ಸಾಮ್ರಾಟನಾಗಿ ಸಗರ ಚಕ್ರವರ್ತಿಯೆನಿಸಿಕೊಂಡ. ಸಗರ ಚಕ್ರವರ್ತಿಯ ಕಾಲದಿಂದಲೇ ಇದಕ್ಕೆ ಸಗರವೆಂಬ ಹೆಸರು ಬಂದಿರಬಹುದೆಂದು ನಿರ್ವಿವಾದ.[೩]

ಇನ್ನು ಆಳವಾಗಿ ಪೌರಾಣಿಕ ಕಥೆಗಳನ್ನು ಕೇಳಿದಾಗ ಸತ್ಯಯುಗದ ನಂತರ ತ್ರೇತಾಯುಗದಲ್ಲಿಯೂ ಇಕ್ಷ್ವಾಕು ವಂಶದ ದೊರೆ ಶ್ರೀ ರಾಮಚಂದ್ರ ಸೀತಾದೇವಿಯನ್ನು ಹುಡುಕುತ್ತಾ ಬಂದಾಗ ಸಗರಾದ್ರಿಯಲ್ಲಿ ವಾಸಿಸಿದ್ದು ಕಂಡುಬರುತ್ತದೆ. ಮೇಲಗಿರಿ ಪರ್ವತದ ಹತ್ತಿರ ಆತ ಕೆಲ ಕಾಲ ತಂಗಿ ಮುಂದೆ ಪ್ರಯಾಣ ಬೆಳೆಸಿದ್ದು ಸೀತಾಮಾತೆ ಈ ಬೆಟ್ಟದಲ್ಲಿ ಬೆಳೆಯುವ ಒಂದು ಸಿಹಿಯ ಮಧುರವೂ ಆದ ಫಲವನ್ನು ಬಹುವಾಗಿ ಇಷ್ಟಪಡುತ್ತಾಳೆ. ಈ ಫಲಕ್ಕೆ ಸೀತಾಫಲವೆಂದು ಹೆಸರನ್ನು ಇಡಲಾಯಿತು ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಮುಂದೆ ಪಾಂಡವರು ದ್ವಾಪರಯುಗದಲ್ಲಿ ಈ ಭಾಗದಲ್ಲಿ ನೆಲೆಸಿದ್ದನ್ನು ಪಾಂಡವರ ಬಂಡೆ ಎಂದು ಈಗಲೂ ಈ ಸಗರನಾಡಿನಲ್ಲಿ ನೆನಪಿಗೆ ತಂದು ಕೊಡುತ್ತದೆ.

**ಮಂದಾಕಿನಿ ಮಹಾತ್ಮೆ ಪುರಾಣದಲ್ಲಿ ಸಗರನಾಡಿನ ಪ್ರಸ್ತಾಪ:-**

ಮಂದಾಕಿನಿ ಮಹಾತ್ಮೆಯಿಂದಲೂ ಸಗರವಂಶದ ಇತಿಹಾಸದ ಮೇಲೆ, ಚರಿತ್ರೆಯ ಮೇಲು ಮತ್ತು ಸಗರನಾಡಿನ ಪೌರಾಣಿಕ ಹಿನ್ನಲೆಯ ಮೇಲೆ ಬೆಳಕು ಬೀಳುತ್ತದೆ. ಭೀಮಾ ನದಿಯ ದಕ್ಷಿಣ ದಿಗ್ಭಾಗದಲ್ಲಿ ಹೇಮಕೂಟದ ಸೋದರನೆಂದು ಪ್ರಸಿದ್ಧಿ ಹೊಂದಿದ್ದ ಸಗರಾದ್ರಿಯು ಮನೋಹರವಾಗಿದೆ. ಆ ಭಾಗವನ್ನು ತನ್ನ ವಶದಲ್ಲಿರಿಸಿಕೊಂಡಿದ್ದ ಸಗರರಾಯನಿಗೆ ಕೇಶಿನಿ ಸುಮತಿ ಎಂಬ ಇಬ್ಬರು ಹೆಂಡಂದಿರು. ಕೇಶಿನಿಗೆ ಅರವತ್ತು ಸಾವಿರ ಮಕ್ಕಳು ಸುಮತಿಗೆ ಅಸಮಂಜಸನೆಂಬ ಒಬ್ಬನೇ ಒಬ್ಬ ಮಗ. ಸಗರ ಚಕ್ರವರ್ತಿ ಇಂದ್ರಪದವಿಯನ್ನು ಪಡೆಯುವುದಕ್ಕಾಗಿ ಶತಕ್ರತು ಯಜ್ಞವನ್ನು ಆರಂಭಿಸಿದನು. ಇಂದ್ರನಿಗೆ ಭಯವಾಗಿ ಅ ಯಜ್ಞದ ಕುದುರೆಯ ಹಿಂದೆ ಬರುತ್ತಿದ್ದ ಆತನ ಮಕ್ಕಳು ಸಗರಾದ್ರಿಯ ಬೆಟ್ಟದಲ್ಲಿದ್ದ ತಾವರೆಗೆರೆಯಲ್ಲಿ (ಪದ್ಮಸರೋವರ) ಸಾಯಂಕಾಲದ ಸಂಧ್ಯಾವಂದನೆಯನ್ನು ಮುಗಿಸಿಕೊಂಡು ಮುಂದೆ ಸಾಗುವುದರೊಳಗಾಗಿ ಆ ಯಜ್ಞಾಶ್ವವು ಮುಂದೆ ಸಾಗಿ ಈಗ

ಮಂದಾಕಿನಿ ಇರುವ ಆಖಾತದ ಸಮೀಪ ಬಂದಿತು. ಆ ಆಖಾತದ ಗುಹೆಯಲ್ಲಿ ಕಪಿಲ ಮಹರ್ಷಿಗಳು ತಪಸ್ಸನ್ನಾಚರಿಸುತ್ತ ಕುಳಿತಿದ್ದರು. ಇಂದ್ರನು ಆ ಯಜ್ಞಾಶ್ವವನ್ನು ಆ ಅಖಾತದಲ್ಲಿರುವ ಕಪಿಲ ಮಹರ್ಷಿಗಳ ಹತ್ತಿರ ಇರಿಸಿ ಮಾಯವಾಗುತ್ತಾನೆ. ಸಗರರಾಯನ ಮಕ್ಕಳು ಅದನ್ನು ಹುಡುಕುತ್ತಾ ಬರುತ್ತಿರುವಾಗ ಅಲ್ಲಿ ದನ ಕಾಯುತ್ತಾ ನಿಂತಿದ್ದ ದನಕಾಯುವವರನ್ನು ವಿಚಾರಿಸಿದಾಗ ಯಾರೋ ಒಬ್ಬರು ಆ ಯಜ್ಞದ ಕುದುರೆಯನ್ನು ಆಖಾತದೊಳಕ್ಕೆ ಒಯ್ದಂತೆ ತಿಳಿಸಿದರು. ಅವರು ಅಲ್ಲಿ ಬಂದು ನೋಡಿದಾಗ ಕಪಿಲ ಮಹರ್ಷಿಗಳ ಹತ್ತಿರ ಆ ಅಶ್ವ ಕಂಡಿತು. ಇವರೇ ಕದ್ದಿರಬೇಕೆಂದು ಅವರಿಗೆ ತೊಂದರೆ ಕೊಡುತ್ತಾರೆ. ಋಷಿಮುನಿಗಳು ಕೋಪದಿಂದ ಕಣ್ಣು ತೆರೆದಾಗ ಎಲ್ಲರೂ ಭಸ್ಮೀಭೂತರಾಗುತ್ತಾರೆ. ಈ ವಿಷಯ ತಿಳಿದು ಸಗರರಾಯ ಬಹಳ ದುಃಖಿತನಾಗಿ ತನ್ನ ಯಾಗ ಪೂರ್ತಿಯಾಗದು ಎಂದು ನೆನೆದು ಇನ್ನಷ್ಟು ಚಿಂತಿಸುತ್ತಾನೆ. ಆಗ ಅಸಮಂಜಸನ ಮಗ ಅಂಶುಮಂತ ತನ್ನ ಪಿತಾಮಹನ ಅಣತಿಯಂತೆ ಆ ಗುಹೆಯ ಹತ್ತಿರ ಬಂದು ಋಷಿಗಳಿಗೆ ಪ್ರಾರ್ಥಿಸಿ ಸಂತುಷ್ಟಗೊಳಿಸಿ ಆ ಯಜ್ಞ ತುರಗವನ್ನು ಪಡೆದುಕೊಂಡನು. ತನ್ನ ಪಿತೃಗಳ ಉದ್ಧಾರಕ್ಕಾಗಿ ಪ್ರಾರ್ಥಿಸಿಕೊಂಡನು. ಆಗ ಋಷಿಮುನಿಗಳು ದೇವಗಂಗೆ ಭೂಮಿಗಿಳಿದು ಬಂದು ಭಸ್ಮರಾಶಿಯ ಮೇಲೆ ಹರಿದಾಗಲೇ ಅವರಿಗೆ ಮುಕ್ತಿ ಎಂದು ಅವರಿಗೆ ಹೇಳಿದರು. ಆತ ಆ ಕುದುರೆಯನ್ನು ತಾತನಿಗೆ ಅರ್ಪಿಸಿ ೯೯ ಯಜ್ಞಗಳನ್ನು ಪೂರ್ತಿಯಾಗುವುದಕ್ಕೆ ಅನುಕೂಲಮಾಡಿಕೊಟ್ಟನು. ವೃದ್ಧಾಪ್ಯದಿಂದಾಗಿ ನೂರನೇ ಯಜ್ಞ ಪೂರ್ತಿಗೊಳಿಸಲು ಸಾಧ್ಯವಾಗಲಿಲ್ಲ. ಇದಕ್ಕೆ ಇಂದ್ರನ ಕುಟಿಲ ನೀತಿಯೇ ಕಾರಣವಾಯಿತೆಂದು ಪುರಾಣ ಹೇಳುತ್ತದೆ. ಸಗರರಾಯ ತನ್ನ ಮೊಮ್ಮಗನಾದ ಅಂಶುಮಂತನಿಗೆ ರಾಜ್ಯಭಾರವನ್ನು ಒಪ್ಪಿಸಿ ಪರಲೋಕಕ್ಕೆ ತೆರಳಿದನು. ಅಂಶುಮಂತನು ತನ್ನ ಮಗ ದಿಲೀಪನಿಗೆ ರಾಜ್ಯಭಾರವನ್ನು ಒಪ್ಪಿಸಿ ತಪಸ್ಸಿಗಾಗಿ ಹೊರಟು ಹೋದನು. ತನ್ನ ಜೀವಮಾನದವರೆಗೂ ಆತನು ತಪಸ್ಸು ಮಾಡಿದನು. ಆದರೆ ಆತನ ಇಷ್ಟ ಪೂರ್ತಿಯಾಗಲಿಲ್ಲ. ಕೊನೆಗೆ ಭಗೀರಥ ಪ್ರಯತ್ನದಿಂದ ಸೀತಾ, ಅಲಕ, ನಂದ, ಮತ್ತು ಭದ್ರ ಎಂಬ ನಾಲ್ಕು ರೂಪಗಳಿಂದ ಭೂಲೋಕಕ್ಕೆ ಇಳಿದಳು. ನಂದಾ ಎಂಬ ಪ್ರವಾಹವೇ ಸಗರಾಚಲಕ್ಕೆ ಹರಿದು ಬಂದು ಅಖಾತವನ್ನು ಸೇರಿ ಸಗರರಾಯನ ಮಕ್ಕಳನ್ನು ಉದ್ಧರಿಸಿದಳು ಅವಳೇ ಈಗ ಮಂದಾಕಿನಿಯಾಗಿ ನಮ್ಮ ಪಾಪಗಳನ್ನೆಲ್ಲಾ ತೊಳೆಯುವ ಪಾಪನಾಶಿನಿ ಆಗಿದ್ದಾಳೆ. ಈ ಸಗರ ನಾಡಿನ ಶಿರವಾಳ, ಕೆಂಭಾವಿ, ವಡಗೇರಿ, ಮುದನೂರು ಮತ್ತು ದುಮ್ಮದ್ರಿ ಮುಂತಾದವುಗಳು ಆ ಕಾಲದ ಅಗ್ರಹಾರಗಳು ಹಾಗೂ ಘಟಿಕಾಸ್ಥಾನಗಳಾಗಿದ್ದವು. ಹೆಮ್ಮಡಗಿ, ಹಗರಟಗಿ, ರಾಜನಕೊಳ್ಳೂರು, ಹುಣಸಗಿ, ಕುಳಗೇರಿ, ಮಂದಾಗ್ನಿ, ಅಗ್ನಿ, ಅಂದೇಲಿ, ಶಿರವಾಳ ಮುಂತಾದವುಗಳು ಅತ್ಯಂತ ಪ್ರಾಚೀನವಾದ ಸ್ಥಳಗಳಾಗಿ ಅನೇಕ ಅವಶೇಷಗಳನ್ನು ಹೊಂದಿರುವದಲ್ಲದೇ ಸುರಪುರ, ದೇವಾಪುರ, ಮುದನೂರ, ಕೆಂಭಾವಿ, ನಾರಾಯಣಪುರ, ಯಾಳಗಿ, ಕಕ್ಕೇರಿ, ಜೇವರ್ಗಿ, ಆಂದೋಲಾ

ಮುಂತಾದವುಗಳು ಮಹಾಶಿವಶರಣರನ್ನು ಮಹಾ ವೀರಾಧಿವೀರರನ್ನು, ಮಹಾಕವಿಗಳನ್ನೂ ಹಾಗೂ ಭಗವಾನ್ ಸೂರ್ಯಪತ್ನಿಯಾದ ಛಾಯಾಭಗವತಿಯ ಭವ್ಯ ಮಂದಿರವನ್ನು ಹೊಂದಿದ ಪುಣ್ಯ ಪವಿತ್ರ ಸ್ಥಳವಾಗಿವೆಯಲ್ಲದೆ ಇನ್ನೂ ಅನೇಕಾನೇಕ ಕ್ಷೇತ್ರಗಳು ಈ ನಾಡಿನಲ್ಲಿವೆ. ಕಕ್ಕೇರಿಯಲ್ಲಿ ಡೋಹರ ಕಕ್ಕಯ್ಯನ ಗುಡಿಯಿದೆ. ಕಕ್ಕಯ್ಯನು ಇಲ್ಲಿಯೇ ದೇಹವಿಟ್ಟಂತೆ ತಿಳಿದುಬರುತ್ತದೆ. ಇಲ್ಲಿ ಕಕ್ಕಯ್ಯನ ದೇವಸ್ಥಾನವು ಚಾಳುಕ್ಯರ ಕಾಲದ್ದಾಗಿದೆ. ಈ ಗ್ರಾಮದಲ್ಲಿ ಆರಾಧ್ಯ ದೈವವಾದ ಸೋಮನಾಥ ಮಂದಿರವು ಬಹು ಸುಂದರವಾಗಿದೆ. ಸಗರ ಏವೂರು ಕೆಂಭಾವಿಗಳು ಮಾಹಿಷ್ಮತೀಪುರವರಾಧೀಶ್ವರ, ಹೈಹಯರುಲೋಪ್ಘಮೆ ಇತ್ಯಾದಿ ಬಿರುದಾಂಕಿತ ಸಗರ ವಂಶಕ್ಕೆ ರಾಜಧಾನಿಯಾಗಿದ್ದರೆ ಹಗರಟಗಿ ಮಾಸವಾಡಿ ಸೇವುಣರ ರಾಜಧಾನಿಯಾಗಿತ್ತು. ಈ ಮನೆತನ ಯಾದವ ಚಕ್ರವರ್ತಿಗಳೆಂದು ಪ್ರಸಿದ್ಧರಾದ ದೇವಗಿರಿಯ ಯಾದವ ಸೆವುಣ ಮನೆತನಕ್ಕೆ ಸಂಬಂಧ ಹೊಂದಿತ್ತು. ಇಂದಿನ ಕುಳಗೇರಿಯೇ ಆಗಿನ ಕುಂತಳ. ಈ ಕುಂತಳದ ಬಗ್ಗೆ ದೇವಪುರದ ಲಕ್ಷ್ಮೀಶ ಕವಿಯ ಜೈಮಿನಿ ಭಾರತದ ಚಂದ್ರಹಾಸಾಖ್ಯಾನದಲ್ಲಿ ವರ್ಣನೆ ಬಂದಿದೆ.

ವಚನ ಸಾಹಿತ್ಯ ದಿವ್ಯ ಗಂಗೋತ್ರಿಯಾದ ಸುರಪುರ ತಾಲೂಕಿಗೆ ಮುದನೂರನಿಂದಲೇ ವಚನವಾಹಿನಿಯು ಪ್ರವಹಿಸಲು ಪ್ರಾರಂಭಿಸಿದ್ದುದನ್ನು ನೆನೆದರೆ ಮೈಮನವೆಲ್ಲ ರೋಮಾಂಚನವಾಗಿ ಪುಳಕಿತಗೊಳ್ಳುತ್ತದೆ. ಕ್ರಿ.ಶ. ೧೧೦೦ರಲ್ಲಿ ಬಾಳಿದ ಕರ್ನಾಟಕ ಕವಿಚೂತವನ ಚೈತ್ರನೆಂಬ ಬಿರುದಾಂಕಿತನಾದ ಮಹಾಕವಿ ಲಕ್ಷ್ಮೀಶನು ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ದೇವಾಪುರದವನೇ ಎಂಬುದನ್ನು ಸ್ಮರಿಸಿದರೆ ಅಭಿಮಾನದಿಂದ ಸಂತೋಷದಿಂದ ಮೈನವಿರೇಳುತ್ತದೆ. ಸುರಪುರ ತಾಲೂಕಿನ ಏವೂರು ದೇವಾಪುರಕ್ಕೆ ೧೭ ಮೈಲಿಗಳ ಅಂತರದಲ್ಲಿದೆ. ಆತನಿದ್ದ ವಿದ್ವತ್ ಸಭಾವಲಯವು ಈ ಏವೂರಿನಲ್ಲಿಯೇ ಇದ್ದಿತೆಂದು ಹೇಳಿದರೆ ಆಶ್ಚರ್ಯಪಡಬೇಕಾಗಿಲ್ಲ. ಸುರಪುರ ತಾಲೂಕಿನ ಏವೂರಿನ ಅಥವಾ ದರ್ಶನಾಪುರದ ಸಮೀಪದಲ್ಲಿರುವ ಮತ್ತು ಏವೂರಿನ ಶಾಸನದಲ್ಲಿ ನಿರೂಪಿತವಾಗಿರುವ ಅಣ್ಣಮಗೆರೆಯು ಇಂದು ಹಾರುವಣ್ಣ ಕೆರೆ ಹಾರಣಗೇರಿ ಅಥವಾ ಹಾರಣಗೇರಾ ಎಂದು ಮಾರ್ಪಾಟಾಗಿರುವುದನ್ನು ಗಮನಿಸಬಹುದು. 'ಸಗರನಾಡಿನಲ್ಲಿ ಜಲದುರ್ಗ, ವನದುರ್ಗ, ಶಹಾಪುರ, ಆಲೂರ ಹಾಗೂ ರಾಯನಪಾಳ್ಯದಲ್ಲಿ ಕೋಟೆ ಕೊತ್ತಳೆಗಳಿವೆಯಲ್ಲದೇ ಅನೇಕ ಹಳ್ಳಿಗಳಲ್ಲಿ ವಾಡೆಗಳೂ ಇವೆ. ಕಾಮನಟಗಿ ಬಳಿಯ ಬನ್ನಟ್ಟಿಯಲ್ಲಿ ವಿಜಯನಗರದ ಅಂತಿಮ ಅರಸನಾದ ರಾಮರಾಯನ ಶಿರಚ್ಛೇದನವಾದ ಸಂಗತಿಯು ಇತಿಹಾಸದ ಪುಸ್ತಕಗಳಲ್ಲಿ ಇತ್ತೀಚೆಗೆ ಬೆಳಕಿಗೆ ಬಂದಿದೆ, ಡಾ. ಪಿ.ಎಂ. ಜೋಷಿ ಅವರ The History of Meduanuval Deccan ಎಂಬ ಗ್ರಂಥದಲ್ಲಿ ಈ ವಿಷಯವು ಅಡಕವಾಗಿದೆ.'[೪] ಈ ಸಗರನಾಡನ್ನು ಅನೇಕ ಶಿವಶರಣರು, ಹರಿದಾಸರು, ಕವಿಗಳು, ಕಲಿಗಳು ತಮ್ಮ ಅಡಿಯ ಹುಡಿಯಿಂದ ಇಲ್ಲಿನ ಹಿರಿಮೆ ಮತ್ತು ಪಾವಿತ್ರ್ಯವೂ ಹೆಚ್ಚುವಂತೆ ಮಾಡಿ

ಅಜರಾಮರರಾಗಿದ್ದಾರೆ. ಇಲ್ಲಿಯ ಶರಣರಲ್ಲಿ ಪ್ರಮುಖರಾದ ಜೇಡರ ದಾಸಿಮಯ್ಯ, ಕೊಂಡಗುಳಿಯ ಕೇಶಿರಾಜ, ಸಗರದ ಬ್ರಹ್ಮಯ್ಯ, ಕೆಂಭಾವಿಯ ಭೋಗಣ್ಣ, ತಿಂಥಣಿಯ ಮೌನೇಶ್ವರರು, ಜೇವರ್ಗಿಯ ಷಣ್ಮುಖ ಶಿವಯೋಗಿಗಳು, ಕಡಕೋಳದ ಮಡಿವಾಳಪ್ಪನವರು ಮುಖ್ಯ ಶಿವಶರಣರಾಗಿದ್ದರಲ್ಲದೇ ಖೈನೂರಿನ ಕೃಷ್ಣಪ್ಪಯ್ಯ, ಶಹಾಪುರದ ಚರಬಸವೇಶ್ವರರು, ಸುರಪುರದ ನಿಷ್ಠೆಯ ಕಡ್ಲಪ್ಪ ವೀರಪ್ಪನವರು ಮತ್ತೆ ಅದೇ ಮನೆತನದವರಾದ ಶ್ರೀ ಕಿರಿಬೇಶ್ವರರು ಇವರೆಲ್ಲಾ ಅಲೌಕಿಕ ವ್ಯಕ್ತಿಗಳಾಗಿದ್ದರು. ಹೀಗೆ ನೂರಾರು ಶರಣರನ್ನು ಹೊಂದಿದ್ದ ಈ ನಾಡು ಪವಿತ್ರವಾದುದಲ್ಲದೆ ಕಕ್ಕೇರಿಯ ಕಕ್ಕಯ್ಯ ಹಾಗೂ ಶ್ರೀ ಸೋಮನಾಥರು ಅಗ್ಗವಣಿ ಹೊನ್ನಯ್ಯ ಹಾವಿನಾಳ ಕಲ್ಲಪ್ಪ, ಹೆಬ್ಬಾಳದ ಪರಮಾನಂದರು ಯಾಳಗಿಯ ರಾಮಪ್ಪಯ್ಯ ನಗನೂರ, ಮತ್ತು ಗೌಡಗೇರಿಯ ನಡುವಿನ ಬೆಟ್ಟದ ಮೇಲಿರುವ ಗುಡ್ಡದ ಗುರುಲಿಂಗೇಶ್ವರ, ಸುರಪುರದ ರಾಮಾನಂದರು, ಗೋಗಿಯ ಚಂದಾಸಾಹೇಬರು ಸಗರದ ಸೋಫಿಸರು ಮತ್ತು ಸಾಹೇಬ ಮಳ್ಳಿಯ ತುಳಜಪ್ಪಯ್ಯ ಇವರೆಲ್ಲರೂ ಈ ನೆಲದ ದಿವ್ಯ ಚೇತನವಾಗಿ ಬೆಳೆದಿದ್ದಾರೆ.

ಸಗರದ ನಾಚಯ್ಯ ನೆಲ್ಲಿಗೆಯ ಶಾಂತಯ್ಯ ಹಾಗೂ ಓಲೆಯ ಶಾಂತಯ್ಯನವರಿಂದ ಪಾವನವಾದ ಈ ನೆಲದಲ್ಲಿಯೇ ಕಾಲಗಿಯ ಜಾನಪ್ಪ ಅರಳಗುಡಿಗೆಯ ಶರಣಬಸವೇಶ್ವರರು ಈ ಸಗರನಾಡಿನಲ್ಲಿ ಅವತರಿಸಿ ಅಂದಿನ ತಾರತಮ್ಯಗಳನ್ನೆಲ್ಲಾ ತೆಗೆದುಹಾಕಿ ಜಗತ್ತನ್ನೇ ಬೆಳಗಿದ ದಿವ್ಯ ವಿಭೂತಿ ಪುರುಷರಾಗಿದ್ದಾರೆ. ದೋರನಹಳ್ಳಿ, ಇಟಗಿ, ಗಂವ್ಹಾರ, ಆಂದೋಲಾ ಮತ್ತು ಇನ್ನಿತರ ಸ್ಥಳಗಳಲ್ಲಿಯೂ ಅನೇಕ ಶರಣರು ಜನಿಸಿ ತಮ್ಮ ಪರಿಸರವನ್ನೆಲ್ಲಾ ಪಾವನ ಮಾಡಿದ್ದಾರೆ. ಈ ನಾಡಿನ ಗಡಿಯಲ್ಲಿರುವ ತಾಳಿಕೋಟೆಯ ಶಿವದೇವಯ್ಯ, ಗೋಲಗೇರಿಯ ಗೊಲ್ಲಾಳ ಅಮರೇಶ್ವರ, ಆಯ್ದಕ್ಕಿ ಮತ್ತು ಆತನ ಪತ್ನಿ ಲಕ್ಕಮ್ಮ ನಾಲತವಾಡದ ಶರಣವೀರೇಶ್ವರರು ಮತ್ತು ರುದ್ರಾಂಬೆಯವರಲ್ಲದೇ ಇನ್ನೂ ಅನೇಕರನ್ನಿಲ್ಲಿ ಹೆಸರಿಸಬಹುದು. ಶರಣರ ಭಂಡಾರವೇ ಈ ಸಗರನಾಡು. ಲಕ್ಕಪ್ಪ ಅ. ಶಿರಹಟ್ಟಿ ಅವರ ಬಸವರಾಜ ದೇವರ್ ಎಂಬ ಕೃತಿಯಲ್ಲಿ ಮತ್ತು ಬಿ. ಪಟ್ಟಪ್ಪಮಯ್ಯ ಅವರ ಐತಿಹಾಸಿಕ ಶಿವಶರಣ ಹರಳಯ್ಯನು ಸಗರನಾಡಿನ ಸುರಪುರದವನೆಂದು ಹೇಳುತ್ತಾರೆ. ಹೀಗೆ ಭಾರತ ಅನೇಕ ಮತಪಂಥಗಳಿಗೆ ಈ ಸಗರನಾಡು ತನ್ನ ಉದರಾಶ್ರಮವೆನಿಸಿದೆ.

**ಸಗರನಾಡನ್ನು ಆಳಿದ ರಾಜಮನೆತನಗಳು**

'ಶಾತವಾಹನರು

ಬಾದಾಮಿ ಚಾಲುಕ್ಯರು

ರಾಷ್ಟ್ರಕೂಟರು

ಕಲ್ಯಾಣದ ಚಾಲುಕ್ಯರು

ಹೈಂಕರ್ಯರು

ಕಳಚೂರ್ಯರು

ಶಿಲಹಾರರು

ಮಾಸವಾಡಿಯ ಸೇವಣರು

ಮಗರವಂಶದವರು

ಬಹುಮನಿ ಅರಸರು

ಬಿಜಾಪುರದ ಆದಿಲ್ ಶಾಹಿ ಅರಸರು

ಹೈದರಾಬಾದ್ ನಿಜಾಮರು

ಸುರಪುರದ ಬೇಡ ಅರಸರು'[೫]

**ಸಗರನಾಡಿನ ಶಿಲಾಶಾಸನಗಳು**

ಸಗರನಾಡಿಗೆ ಸಂಬಂಧಿಸಿದ ಐತಿಹಾಸಿಕ ಆಧಾರಗಳೆನಿಸುವ ಶಿಲಾಶಾಸನಗಳು ಹಲವಾರು ಕಡೆಗಳಲ್ಲಿ ದೊರೆಯುತ್ತವೆ. ಈ ದಿಸೆಯಲ್ಲಿ ಪೂರ್ವ ಪ್ರಯತ್ನ ಮಾಡಿದವರಲ್ಲಿ ಡಾ. ಜಾನ್ ಎಫ್. ಫ್ಲೀಟರು ಪ್ರಮುಖರು. ಅವರು Epigraphia Indica Val XII ೧೯೧೩-೧೪ರಲ್ಲಿ ಐವೂರಿನ ಒಟ್ಟು ೬ ಶಾಸನಗಳನ್ನು ಮುದ್ರಿಸಿದ್ದಾರೆ.

| 'ಆಕರ | ಕಾಲ | ಆಳ್ವಿಕೆ | ವಿಷಯ |
|---|---|---|---|
| E.I.P. | ಕ್ರಿ.ಪೂ. | ಚಾಲುಕ್ಯ | ಹೈಹಯವಂಶದ ಮಹೀಷಮ ಪುರಾಧೀಶ್ವರ |
| No. ೨೬೮ | ೧೦೪೦ | ಜಯಸಿಂಹ | ಬೀಡುವಿನ ಮಹಾಮಂಡಲೇಶ್ವರ ರೇವರಸನು ಸಗರ ೩೦೦ರ ಪ್ರದೇಶವನ್ನಾಳುತ್ತಿದ್ದ |
| E.I.P. | ಕ್ರಿ.ಪೂ. | ವಿಕ್ರಮಾದಿತ್ಯ | ಕೇಶವ ದೇವಾಲಯ ಸತ್ಯ ಪ್ರಚಾರ ಭಟ್ಟಾರಕ ದೇವರ ಸಮಕ್ಷಮದಲ್ಲಿ ಭೂ ಕಾಣಿಕೆ ನೀಡಿದ ದತ್ತಿ ಶಾಸನ ಇದರಲ್ಲಿ ಐವೂರ ಸಗರ ೩೦೦ ಸಗರನಾಡು ಉಲ್ಲೇಖಗಳಿವೆ. |

| | | | |
|---|---|---|---|
| E.I.P. | ಕ್ರಿ.ಪೂ. | ವಿಕ್ರಮಾದಿತ್ಯ | ಕೇಶವ ದೇವಾಲಯಕ್ಕೆ ದತ್ತಿ ನೀಡಿದ್ದು ಅಲ್ಲದೆ ೧೨೦ ಜನ ಬೇರೆ ಬೇರೆ ಕಾಣಿಕೆಗಳನ್ನು ಕೊಟ್ಟಿದ್ದು |
| E.I.P. | ಕ್ರಿ.ಪೂ. | ಕಲಚೂರ್ಯ | ಮಲ್ಲಿಕಾರ್ಜುನ ದೇವಾಲಯಕ್ಕೆ ಕಾಣಿಕೆ ನೀಡಿದ್ದಾನೆ |
| No.೩೩೫ | ೧೧೭೩ | ರಾಯಮುರಾರಿ | ತ್ರಿಪುರಾಂತಕ ದೇವರಸ ಎಂಬ ಮಹಾಪ್ರಭು ಭೂಮಿಯನ್ನು ದತ್ತಿಯಾಗಿ ನೀಡಿದ್ದು |
| E.I.P. | ಕ್ರಿ.ಪೂ. | ಕಲಚೂರ್ಯ | ಸ್ವಯಂಭು ಸೋಮನಾಥ ದೇವಾಲಯಕ್ಕೆ ಭೂಮಿಯನ್ನು ನೀಡಿದ್ದು |
| ೩೩೬ | ೧೧೭೯ | ಸಂಕಮದೇವ | ಭೂಮಿಯನ್ನು ನೀಡಿದ್ದು |
| E.I.P. | ಕ್ರಿ.ಪೂ. | ಕಲಚೂರ್ಯ | ಸೋಮೇಶ್ವರ ದೇವಾಲಯಕ್ಕೆ ದತ್ತಿ ನೀಡಿದವನು.[೬] |

ಅವುಗಳಲ್ಲಿ ಚಾಲುಕ್ಯ ೨ನೇ ಜಯಸಿಂಹನ ಕಾಲದ ಕ್ರಿ.ಶ. ೧೦೪೦ರ ಶಾಸನದಲ್ಲಿ ರೇವರಸ ದಂಡನಾಯಕನು ಚಾಲುಕ್ಯ ೬ನೇ ವಿಕ್ರಮಾದಿತ್ಯನ ಕಾಲದ ಕ್ರಿ.ಶ. ೧೧೦೫ ಶಾಸನದಲ್ಲಿ ರವಿಯಣಭಟ್ಟನಾಯಕನು ಸಗರ ೩೦೦ ಪ್ರದೇಶವನ್ನಾಳುತ್ತಿದ್ದ ವಿವರ ಬಂದಿದೆ. ಕ್ರಿ.ಶ. ೧೦೫೪ನೇ ಶಾಸನ ಹಾಗೂ ಏವೂರಿನ ೧೦೭೭ನೇಯ ಕಾಲದ ಶಾಸನಗಳಲ್ಲಿ ಸಗರ-೩೦೦ ನಾಡೆಂದೇ ಇದು ಉಲ್ಲೇಖಿತವಾಗಿದೆ. ಆದರೆ ಕ್ರಿ.ಶ. ೧೧೬೯ರ ಕಲಚೂರಿ ರಾಯಮುರಾರಿ ಸೋವಿದೇವನ ಕಾಲದ ಕೊಲ್ಲೂರ (ಕೋಳೂರು) ಶಾಸನದಲ್ಲಿ, ಸಗರ-೫೦೦ರ ನಾಡಿಗೆ ಸಾಂದರ ಮಲ್ಲರಸಯ್ಯನಿಂದ ಚೇದಿವಂಶದ ಅಲ್ಲಹುಲಿ ಐದು ದೇವಾಲಯುಗಳನ್ನು ಕಟ್ಟಿಸಿದನು. ಆಗ ಸಗರ-೫೦೦ ನಾಡಿಗೆ ಬೊಮ್ಮಿದೇವ ದಂಡನಾಯಕನೆಂಬವನು ಮಹಾಪ್ರಧಾನನಾಗಿದ್ದನು, ಇದೇ ರೀತಿ ೧೧೮೪ ಚಾಲುಕ್ಯ ೪ನೇಯ ಸೋಮೇಶ್ವರನ ಕಾಲದ ದೇವಪುರದ ಶಾಸನದಲ್ಲಿ ಸಗರ ಪ್ರದೇಶದ ಉಲ್ಲೇಖವಿದೆ. ಮರಬರಸ ದಂಡನಾಯಕನು ಸಗರನಾಡಿಗೆ ಸೇರಿದ ದೇವಾಪುರಕ್ಕೆ ಬಂದಾಗ ಅಲ್ಲಿಯ ದೇವಸ್ಥಾನಕ್ಕೆ ದತ್ತಿಬಿಟ್ಟ ಉಲ್ಲೇಖವಿದೆ. ಈ ಕಾಲದಲ್ಲಿ ಸಗರ ೩೦೦ ರ ಪ್ರದೇಶ ೫೦೦ರ ನಾಡಾಗಿತ್ತೆಂಬುದು ಕೊಲ್ಲೂರು ಮತ್ತು ದೇವಾಪುರ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಇದರ ಬಗ್ಗೆ ಡಾ. ಜಾನ್. ಎಫ್. ಫ್ಲೀಟರು ಇನ್ನೂ ಹೆಚ್ಚಿನ ಸಂಗತಿಗಳನ್ನು ವಿವರಿಸಿ

ಈ ವಿಷಯದ ಸಮಾಲೋಚನೆ ಮಾಡಿದ್ದಾರೆ. ಕ್ರಿ. ಶ. ೧೧೨೯ ಹೀರೆಮುದ್ದೂರಿನ ಒಂದು ಶಾಸನದಲ್ಲಿ ಸಗರ ೫೦೦ರ ಉಲ್ಲೇಖ ೩ ಕಡೆಗೆ ಬಂದಿದೆ. ಇದಲ್ಲದೆ ಕ್ರಿ. ಶ. ೧೧೧೮ರ ಚಿಕ್ಕಮದ್ದೂರಿನ ಒಂದು ಶಾಸನದಲ್ಲಿ ಸಗರ ೫೦೦ರ ಪ್ರದೇಶವೆಂದೇ ವರ್ಣಿತವಾಗಿದೆ. ಸಗರ ೩೦೦ರ ನಾಡು ಸಗರ ೫೦೦ರ ಪ್ರದೇಶವಾದ ಕಾಲಮಾನವನ್ನು ಕುರಿತು ಡಾ. ಫ್ಲೀಟರವರು ಹೀಗೆ ಬರೆಯುತ್ತಾರೆ. If those seems to have received on Increcye of extent at some time about A.D. 1110-1120 through on absorption of the while or part of the some adyustment district of destruects lying probally on the east of the orivinal ೩೦೦ ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆಯ ಡೈರೆಕ್ಟರ್ ಶ್ರೀ ನಾಗರಾಜರಾವ ಅವರು ರಾಷ್ಟ್ರಕೂಟ ಅಕಾಲವರ್ಷನ ಕಾಲದ ಒಂದು ಶಾಸನ ಶಹಾಪೂರ ತಾಲೂಕ ಶಿರವಾಳದಲ್ಲಿ ಸಿಕ್ಕಿದ್ದು ಅದರಲ್ಲಿ ಸಗರನಾಡು ಅಲ್ಲವುಂಡನ ಉಲ್ಲೇಖವಿರುವುದಾಗಿ ತಿಳಿಸಿದ್ದಾರೆ. ಶಿಲಾಶಾಸನ ಕಾಲ ಶಾಲಿವಾಹನ ಶಕೆ ೮೬೧ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಆಳ್ವಿಕೆಗೆ ಸಂಬಂಧಿಸಿದುದು. ಕಾಲ ಕ್ರಿ. ಶ. ೯೩೯ ರಿಂದ ೯೬೮ ಶಿರವಾಳದ ಇನ್ನೊಂದು ಶಾಸನ (ಕಾಲ ಶಕವರ್ಷ ೧೪೫೯) ದಲ್ಲಿ ಸಗರ ನಾಡೊಳಗೆ ಸಿರವಾಳ ಗ್ರಾಮ ಎಂಬ ಉಲ್ಲೇಖವಿದೆ. ಇದರಲ್ಲಿ ಶಿವಲಿಂಗನಾಗಿಯರು ಹನುಮಂತದೇವರ ದೇವಸ್ಥಾನಕ್ಕೆ ದತ್ತಿ ಬಿಟ್ಟ ವಿಷಯವಿದೆ.

ಶಿರವಾಳದ ೩ನೆಯ ಶಾಸನ ಚಾಲುಕ್ಯ ಭೂಲೋಕಮಲ್ಲನ (ಮೂರನೆಯ ಸೋಮೇಶ್ವರ ಆಳ್ವಿಕೆಯಲ್ಲಿ ಕ್ರಿ. ಶ. ೧೧೨೫-೧೧೯೮) ಮಹಾಮಂಡಳೇಶ್ವರ ಸೋವಿದೇವ ಅರಸನು ಸಗರವರ್ಯ ಅಂಬಾಡದ ಹೆಗಡೆ ದಮಡನಾಯಕಂ ಅಲ್ಲಿಪೂರಿಯರಸರುಂ ಸಿರಿವೋಳಂ ಪ್ರಭು ನಾಲ್ವಕಿ ಸೆಟ್ಟಿಯರು ಕದಂಬೇಶ್ವರ ದೇವರ ಜೀರ್ಣೋದ್ಧಾರಕ್ಕೆ ಭೂಮಿಯನ್ನು ದತ್ತಿ ಹಾಕಿಕೊಟ್ಟ ವಿಷಯವಿದೆ. ಸಗರನಾಡಿನ ಸುರಪುರದ ಹಿರೇಮುದನೂರು ದೇವರದಾಸಿಮಯ್ಯನ ಗುಡಿಯ ಎಡಭಾಗದ ಗೋಡೆಯ ಮೇಲೆ ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲನ ಕಾಲದ (ಕ್ರಿ. ಶ. ೧೧೩೮-೧೧೪೯) ಶಾಸನದಲ್ಲಿ ಸಗರ ೫೦೦ ಅಂಬಾಡದ ಉಲ್ಲೇಖವಿದ್ದು ರಾಮಸೆಟ್ಟಿ ಎಂಬುವನು ದತ್ತಿಬಿಟ್ಟ ಉಲ್ಲೇಖವಿದೆ. ಚಿಕ್ಕಮದನೂರು ಗೋಪಾಲಸ್ವಾಮಿ ಗುಡಿಯ ಹಿಂಭಾಗದ ಮುಖಮಂಟಪದ ಶಿಲಾಸ್ಥಂಭದ ಮೇಲೆ ಬರೆದ ಶಾಸನವು ಶ್ರೀಮತು ಸಗರ ರೆಯಿನೋ ಅಂಬಾಡದ ಮುಖ್ಯ ಸೆಟ್ಟಿಯರು ಎಂದು ಆರಂಭವಾಗುತ್ತಿದ್ದು ಸಂಧಿವಿಗ್ರಹಿ ಆದಿಶೆಟ್ಟಿ ಎಂಬುವನು ದತ್ತಿ ಹಾಕಿಕೊಟ್ಟ ವಿವರವಿದೆ. ಇದರಲ್ಲಿ ಯಾವ ಅರಸು ಮನೆತನದ ಉಲ್ಲೇಖ ಇರುವುದಿಲ್ಲ. ಚಿಕ್ಕ ಮುದ್ನೂರು ಗೋಪಾಲಸ್ವಾಮಿಯ ಗುಡಿಯ ಹಿಂಭಾಗದ ಬಲಗಂಬದ ಕೆಳನಿಟ್ಟಿನಲ್ಲಿ ಬರೆದ ಶಾಸನ ಇದು ಯಾದವ ಮನೆತನದ ಪ್ರತಾಪ ಚಕ್ರವರ್ತಿ ಸಂಘೂಣನ ಕಾಲದ್ದು (ಕ್ರಿ. ತ. ೧೨೨೦-೧೨೪೭)

ಇದರಲ್ಲಿ ಸಗರ ರೆಯಿನೊಅಂಬಾಡದ ಸೆಟ್ಟಿಯರು ಮತ್ತು ಅಯ್ಯವಾವಿದ ಐನೂರ್ವರು ಸ್ವಾಮಿಗೆಮಿಂ ಇವರ ಉಲ್ಲೇಖವಿದೆ.

ಈ ಶಿಲಾಶಾಸನಗಳ ಪ್ರಕಾರ ಸಗರನಾಡು ರೆಯಿನೊಅಂಬಾಡ ಇದರ ಅಸ್ತಿತ್ವವು ರಾಷ್ಟ್ರಕೂಟ ಮುಮ್ಮಡಿ ಕೃಷ್ಣ ಕಲ್ಯಾಣಿ ಚಾಲುಕ್ಯ ಮನೆತನದ ಜಗದೇಕಮಲ್ಲ ಭೂಲೋಕಮಲ್ಲರ ಕಾಲದಲ್ಲೂ ಮತ್ತು ಯಾದವ ಮನೆತನದ ಸಂಗಣ್ಣನ ಕಾಲದಲ್ಲೂ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ಕ್ಷೇತ್ರಗಳಲ್ಲಿ ಅನುಷಂಗಿಕವಾಗಿ ಪ್ರಸ್ಥಾಪಿತವಾಗಿರುವುದು ಸ್ಪಷ್ಟವಾಗುತ್ತದೆ. ರಾಷ್ಟ್ರಕೂಟ ಅರಸು ಮನೆತನದ ಆಳ್ವಿಕೆಯನ್ನು ಮಳಖೇಡದಲ್ಲಿ ನಿಗದಿಗೊಳಿಸುವ ಅತ್ಯಂತ ಪ್ರಮುಖ ಶಿಲಾಶಾಸನ ಸಿರವಾಳದಲ್ಲಿ ಸಿಕ್ಕಿರುವುದು ಅಪೂರ್ವ ಸಂಗತಿಯಾಗಿದೆ. ಈ ಶಾಸನದಲ್ಲಿ ಸಗರನಾಡಿನ ಉಲ್ಲೇಖವಿರುವುದಲ್ಲದೆ, ಸಿರವಾಳ ಗ್ರಾಮವು ರಾಷ್ಟ್ರಕೂಟರ ಕಾಲದ ಪ್ರಸಿದ್ಧ ವಾಣಿಜ್ಯ ಸ್ಥಳವಾಗಿತ್ತೆಂಬುದು ಮತ್ತು ಅನೇಕ ದೇವಸ್ಥಾನಗಳ ಬೀಡಾಗಿತ್ತೆಂಬುದು ನಿಶ್ಚಿತವಾಗುತ್ತದೆ.

ಅದೇ ರೀತಿ ಚಾಲುಕ್ಯ, ಕಳಚೂರಿ ಮತ್ತು ಯಾದವರ ಶಾಸನಗಳಲ್ಲಿ ಹಲವು ಹತ್ತು ಕಡೆಗಳಲ್ಲಿ ಸಗರನಾಡಿನ ಉಲ್ಲೇಖವಿದ್ದು. ಮುದನೂರ ಸಗರನಾಡಿನ ಪ್ರಮುಖ ಧಾರ್ಮಿಕ ಕೇಂದ್ರವೆಂದು ಹೆಸರಾಗಿತ್ತು. ಅಲ್ಲದೆ ಅಲ್ಲಿನ ರಾಮೇಶ್ವರ ಮತ್ತು ಲಕ್ಷ್ಮಣೇಶ್ವರ ದೇವತಾ ಮಂದಿರ ಮತ್ತು ದೇವತೀರ್ಥಗಳಿಂದ ಕೂಡಿದ್ದು, ಶಿಲಾಶಾಸನಗಳಲ್ಲಿ ಈ ಮುದನೂರನ್ನು ದಕ್ಷಿಣ ವಾರಣಾಸಿ ಎಂದು ಉಲ್ಲೇಖಿಸಿರುವುದು, ಈ ನಾಡಿನ ಸಾಂಸ್ಕೃತಿಕ ಹಿರಿಮೆಗೆ ನಿದರ್ಶನವಾಗಿದೆ. ರಾಷ್ಟ್ರಕೂಟ ಮತ್ತು ಚಾಲುಕ್ಯ ಕಾಲದ ಶಿಲಾಸಾಸನಗಳಲ್ಲಿ ಸಗರ ೩೦೦ ರ ಪ್ರಾದೇಶಿಕ ಘಟಕದ ಉಲ್ಲೇಖಿಸುತ್ತಾರೆ. ಇದನ್ನು ಆಧರಿಸಿ ಡಾ. ಶ್ರೀನಿವಾಸ ರಿತ್ತಿಯವರು ತನ್ನ ಮಹಾಪ್ರಭಂದದಲ್ಲಿ ಸಗರ ೩೦೦ ಘಟಕವನ್ನು ಉಲ್ಲೇಖಿಸಿದ್ದಾರೆ. ಇದನ್ನು ಆದರಿಸಿ ಡಾ. ಶಿವಾನಂದ ಅವರು ಸಗರನಾಡಿನ ಶಿವಶರಣರು ಎಂಬ ಪುಸ್ತಕದಲ್ಲಿ ಈ ನಾಡಿನ ನಕಾಶೆಯೊಂದನ್ನು ಸಿದ್ಧಪಡಿಸಿ ಅದರ ಗಡಿ-ಗೆರೆಗಳನ್ನು ಹೀಗೆ ಹೇಳಿದ್ದಾರೆ.

**೨.೩. ಸಗರನಾಡಿನ ಗಡಿ ರೇಖೆಗಳು.**

"೧ ಪೂರ್ವ ಎಡದೊರೆ ಎರಡು ಸಾಸಿರ

೨ ಪಶ್ಚಿಮ ತರ್ದವಾಡಿ ಸಾಸಿರ

೩ ಉತ್ತರ ಅಲಂದೆ ಸಾಸಿರ

೪ ದಕ್ಷಿಣ ಕರಡುಕಲ್ಲು ಮುನ್ನೂರು"[೭]

ಇವುಗಳ ಮಧದಲ್ಲಿ ಕೃಷ್ಣಾ ಹಾಗೂ ಭೀಮಾ ನದಿಗಳು ಹರಿಯುವ ಮೇರೆಗುಂಟ ಸಗರನಾಡು ವ್ಯಾಪಿಸಿದ್ದಿತು.

"ಸಮಭೂಮಧ್ಯ ರೇಖಾಯಾಂ

ಶ್ರೀಶೈಲಸ್ಯ ಪಶ್ಚಿಮೇ ಕೃಷ್ಣವೇಣಿ ಭೀಮರತ್ಯು:

ಮಧ್ನೆ ಜಗತಿಪಾವನೆ ಸೂರ್ಯವಂಶ ಕುಲೋತ್ನ

ಸಗರೇಣ ವಿನಿರ್ಮಿತಂ ಸಗರಂ ನಗರಂ ನಾಮ

ಜಯತ್ಯದ್ಯಾಪಿ ಮಿಶ್ರಿತಂ"

ಜಮದಗ್ನಿ ಕುಲೋತ್ಪನ್ನ ಗಂಗಾಧರ ಪಂಡಿತೇನ ವಿರಚೇತಂ ಚಾಂದ್ರಮಾನ ಗ್ರಂಥದಲ್ಲಿ ಈ ರೀತಿ ಉಲ್ಲೇಖಿಸಲ್ಪಟ್ಟಿದೆ.

ಪರಿವೆಸೆವ ಸುರಪುರ ಶಹಾಪುರ

ದೆರಡು ತಾಲೂಕುಗಳವರೆಗಿರುತಿರುವ ಪ್ರಾಂತಕ್ಕೆ ಸಗರನಾಡೆಣದೆನುತೆ ಪೆಳುಮಾ

ಸುರಚಿಶವ ಷನಸಗರನಾಡಿದು

ಪರಮಭಕ್ತಿಯ ಬೀಡು ಪಲದಿಂ

ಭರಿತಮಗಿಹ ವೃಕ್ಷತತಿಗಳ ಷನತರದ ಕಾಡು

(ಶ್ರೀಚರಬಸವೇಶ್ವರ ಪುರಾಣ ೭ನೇಯ ಸಂಧಿ ಪುಟ ಸಂಖ್ಯೆ ೧೪ ಎಂದು ವರ್ಣಿಸಲ್ಪಟ್ಟಿರುವದು) ಈ ನಾಡಿನ

ಹಿರಿಮೆಯ ನೈಜತೆಯನ್ನು ಸ್ಪಷ್ಟಪಡಿಸುತ್ತದೆ.

ಜಳೆಯುತೀವಿದ ಪೋಲಗಳಿಂದ।

ಪಲಿತ ವಿವಿಧ ಕುಜಂಗಳಿಂದಂ।

ಚೆಲುವ ಗುಡಿಗೋಪುರದ ಪೊಳಿಲುಗಳಿಂದ ವೀರನೃಪ।

ಲಲಿತ ಕವಿಶಿಲ್ಪಗಳ ತಲೆಯಿಂ

ತೊಳಪ ಶಿವಗುರು ಶರಣರದಾಸರ

ಬಳಗದಿಂ ಪೆರ್ಮೆಯನು ತಳೆದು ವೆರಾಜಿಪುದ

ತಿರಿಯೊಳ

(ಚರಬಸವೇಶ್ವರ ಪುರಾಣ ಪು. ಸಂ. ೧೪) ಎಂದು ಉಲ್ಲೇಖಿಸಲ್ಪಟ್ಟಿರುವುದು ಈ ನಾಡಿನ ಸಡಗರ ಸಮೃದ್ಧಿ ಮತ್ತು ಸಂಸ್ಕೃತಿ ಸೌಜನ್ಯತೆಗಳ ನಿದರ್ಶನ.

ಕೊಟೆನು ಬಿದರೆಯ ಕೊಟ್ಟಿನು ಸಗರವ. . . . . .

(ರಾಮನಾಥ ಚರಿತ್ರೆ ಸಂಪುಟ ೨, ಸಂಧಿ ೧೭, ಪದ್ಯ ೬೬)

ಸಾಗರದಾನವೆಂಮಂ ದೆಸೆಗಳೊಳು——

ಸಾಗರದಾನದ ಮುಂದೆ ಸರಾಗ್ರಾದುಪಿನು ಎಸಗಿ——

ಕುರುಕೊಂಕಣ ಹೊಣ ಹೊಯ್ಸಳ ತುಳುವಕು

ಕರಜನ ಸಗರಬಂಗಾಳ——

ತುರುಕವಂತಿಯವಂತಿ ಕಾಶ್ಮರ ದೇಶಾಧೀ——

ಶ್ವರ ರೋಡಿದರು ರಾಮನಿಗೆ"೮

ಈ ಕಾವ್ಯ ಚಾರಿತ್ರಿಕ ಮಹತ್ವವೆಂದು ಚಾಲುಕ್ಯರ ಕಾಲದಲ್ಲಿ ಸಗರದುರ್ಗ ಎಂಬ ಹೆಸರನ್ನು ಪಡೆದಿತ್ತು. ಡಾ. ಎಮ್. ಎಚ್. ಕೃಷ್ಣಾ ಅವರು (ಎಂ.ಎ.ಅರ್.೧೯೨೯, ಪು. ೩೭) ಉಲ್ಲೇಖಿಸಿದ್ದಾರೆ.

ಈ ರೀತಿ ಸಗರನಾಡಿಗೆ ಸಂಬಂಧಪಟ್ಟ ಚಾರಿತ್ರಿಕ ಅಥವಾ ಐತಿಹಾಸಿಕ ದಾಖಲೆಗಳು ಸಗರನಾಡಿನ ಉಜ್ವಲ ವೀರಪರಂಪರೆಯನ್ನು ಮತ್ತು ಧಾರ್ಮಿಕ ಪರಂಪರೆಯನ್ನು ದೃಢಿಕರಿಸುತ್ತವೆ. ಸಗರನಾಡಿನ ರಾಜಕೀಯ ಜೀವನದಲ್ಲಿ ಸಾಮಾಜಿಕ ಜೀವನದಲ್ಲಿ ಸ್ಥಿತ್ಯಂತರಗಳು ಸಂಭವಿಸಿದಾಗಲೂ, ಈ ನಾಡಿನನಲ್ಲಿ ಆಯಾ ಮತದವರು ಪರಂಪರೆಯ ಶ್ರದ್ಧೆ ನಿಷ್ಠೆಗಳಿಂದ ಮತ್ತು ಸಾಹಿತ್ಯವನ್ನು ಮತ್ತಿತರ ಸೃಷ್ಟಿಶೀಲ ಕೃತಿ ರಚನೆಯನ್ನು ಮುಂದುವರೆಸಿಕೊಂಡು ಬಂದರೆಂಬುದು ಗಣನೀಯ ಸಂಗತಿಯಾಗಿದೆ.

೧೦-೧೧ನೇಯ ಶತಮಾನಗಳ ಕಾಲಾವಧಿಯಲ್ಲಿ ಶಾಸನ ಸಾಹಿತ್ಯವು ಈ ಭಾಗದಲ್ಲಿ ಅಧಿಕೃತವಾಗಿ ದೊರಕುತ್ತಿದ್ದು, ಮುಂದೆ ಬಂದ ಈ ಪರಿಸರದ ವಚನಕಾರರಿಗೂ, ಕವಿಗಳಿಗೂ ಕನ್ನಡ ಭಾಷೆಯನ್ನು ಸಂಸ್ಕೃತ ಮಟ್ಟದಲ್ಲಿ ರೂಪಿಸುವದಕ್ಕೆ ತಕ್ಕ ನೆಲೆಗಟ್ಟಾಗಿತ್ತು. ವೀರರನಾಡೆಂದು, ಬೇಡರ ಬೀಡೆಂದು, ಸಂಸ್ಕೃತಿಯ ಕೈವಾರಿಯೆಂದು, ಸಾಹಿತ್ಯ-ಸಂಗೀತ ಕಲೆಗಳ ತವರೂರು ಎಂದು ಕೀರ್ತಿಗೆ ಸಂದ ಸಗರನಾಡಿದು. ಹೀಗೆ ಸಗರನಾಡಿನ ಚಾರಿತ್ರಿಕ ಹಿನ್ನೆಲೆಯನ್ನು ಕೆದುಕುತ್ತಾ ಹೋದ ಹಾಗೆ ಈ ನಾಡಿನ ಬಗ್ಗೆ ಹೆಮ್ಮೆಯಾಗುತ್ತದೆ. ಈ ನಾಡಿನಲ್ಲಿ ಹುಟ್ಟಿದ ಪ್ರತಿಯೊಬ್ಬರು ಪುಣ್ಯವಂತರು ಎಂಬ ಭಾವನೆ ಉಂಟಾಗುತ್ತದೆ. ಆದ್ದರಿಂದ ಇತಿಹಾಸವನ್ನು ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು ಎಂಬ ಮಾತು ನಿಜವಾಗುತ್ತದೆ.

## ೨.೪ ಸಗರನಾಡಿನ ಬೇಡ ಸಮುದಾಯದ ದೊರೆಗಳ ಚರಿತ್ರೆ:

### ಗಡ್ಡಿ ಪಿಡ್ಡ ನಾಯಕ (೧೬೫೬-೧೬೭೪)

೧೬೫೬ರಲ್ಲಿ ಗಡ್ಡದ ಪಾಮ ನಾಯಕನು ಮರಣ ಹೊಂದಿದ ನಂತರ ಆತನ ಮಗ ಗಡ್ಡಿ ಪಿಡ್ಡ ನಾಯಕ ಉತ್ತರಾಧಿಕಾರಿಯಾಗಿ ನೇಮಕಗೊಂಡಾಗ, ಪಿತ್ರಾರ್ಜಿತ ಆಸ್ತಿಯಲ್ಲಿ ಎರಡು ಭಾಗವಾಗಿ, ಒಂದು ಗಡ್ಡಿ ಲಿಂಗ ನಾಯಕನಿಗೆ ಇನ್ನೊಂದು ಗಡ್ಡಿ ಪಿಡ್ಡ ನಾಯಕನಿಗೆ ಕೊಡಲ್ಪಟ್ಟಿತು. ಗಡ್ಡಿ ಪಿಡ್ಡ ನಾಯಕನು, ಮಹಾ ಧೈರ್ಯಶಾಲಿಯಾಗಿದ್ದು, ಯುದ್ಧ ಪ್ರಾವೀಣ್ಯತೆಯನ್ನು ಪಡೆದಿದ್ದು ಈತನೆ ವಾಗನಗೇರಾವನ್ನು ಬಸವಂತರಾವ್‌ನಿಂದ, ದೇವಪುರವನ್ನು ನಾಗನಾಥರಾವನಿಂದ ಕಸಿದುಕೊಂಡ. ಬಸವಂತರಾವನಲ್ಲಿ ೨೦೦ ಕುದುರೆ ಸವಾರರಿದ್ದರೆ, ನಾಗನಾಥರಾವನಲ್ಲಿ ೩೦೦ ಕುದುರೆ ಸವಾರರಿದ್ದು, ಇವರು ವಾಗನಗೇರಾ ಶಹಾಪೂರ-ಸಗರ ಕಿಲ್ಲೆಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದು ೧೨೦೦ ಜನ ಸೈನ್ಯ ಸದಾ ಇವರಲ್ಲಿ ಸಿದ್ಧವಿತ್ತು. ಇವರು ಮೊಗಲ್ ಸಾಮ್ರಾಟ್ ಔರಂಗಜೇಬನ ಆಡಳಿತಕ್ಕೆ ಒಳಪಟ್ಟಿದ್ದರು. ಗಡ್ಡಿ ಪಿಡ್ಡನಾಯಕ ತನ್ನ ೬೦೦ ಜನ ಸೈನಿಕರೊಂದಿಗೆ ಈ ಎರಡು ಕಿಲ್ಲೆಗಳನ್ನು ಗೆದ್ದ. ಈ ಭೀಕರ ಯುದ್ಧದಲ್ಲಿ ಇಬ್ಬರು ಸರದಾರರು ಮರಣ ಹೊಂದಿದ ಸುದ್ದಿ ಔರಂಗಜೇಬನಿಗೆ ತಿಳಿದ ಕೂಡಲೆ ರಾಜಾರಾಮ ಬಕ್ಷ ನೇತೃತ್ವದಲ್ಲಿ ೪೦,೦೦೦ ಸೈನ್ಯ ಕಳಿಸಿದ. ಈ ಸೈನ್ಯವು ಅಗ್ನಿಯಲ್ಲಿ ಕ್ಯಾಂಪ್ ಮಾಡಿ, ಮೂರು ತಿಂಗಳವರೆಗೂ ಯುದ್ಧ ಮಾಡಿದರೂ, ಪ್ರಯೋಜನವಾಗದಿದ್ದಾಗ ರಾಜಾ ರಾಮಬಕ್ಷನು ಅಲ್ಲಿಂದ ಜಾಗಾ ಖಾಲಿ ಮಾಡಿದ. ಇದು ಅತ್ಯಂತ ಶಕ್ತಿಶಾಲಿ ಮೊಗಲರ ವಿರುದ್ಧ ಸುರಪುರ ಸಂಸ್ಥಾನದ ಮೊದಲ ಸ್ವಾತಂತ್ರ್ಯ ಸಂಗ್ರಾಮವಾಗಿತ್ತು. ಬಿಜಾಪುರ ಅರಸು ಪಿಡ್ಡ ನಾಯಕನನ್ನು ಯುದ್ಧದಲ್ಲಿ ಸೋಲಿಸಿ, ಸೆರೆ ಹಿಡಿಯುವದು ಸಾಧ್ಯವಿಲ್ಲವೆಂದು ಅರಿತು, ಒಂದು ಉಪಾಯ ಹೂಡಿದ, ಅದೇನೆಂದರೆ ಮದ ಏರಿದ ಆನೆಯನ್ನು, ನಿರಾಯುಧವಾಗಿ ಮಣಿಸಿದವರಿಗೆ ೬ ಲಕ್ಷ ರೂ. ಜಾಗೀರು ಕೊಡುವುದಾಗಿ ಫರಮಾನ ಹೊರಡಿಸಿದ. ಇದರ ಉದ್ದೇಶ ಪಿಡ್ಡನಾಯಕನು ನಿಶ್ಚಿತ ಬರುವನು ಆನೆಯನ್ನು ಮಣಿಸದೇ ಅದರಿಂದ ಮೃತನಾಗುವನು. ಆಗ ಮುಂದಿನ ಹಾದಿ ತನಗೆ ಸುಗಮವೆಂದು ಬಿಜಾಪುರ ರಾಜನ ಊಹೆಯಾಗಿತ್ತು. ಸುಲ್ತಾನರ ಲಾಯದಲ್ಲಿಯ ಮದವೇರಿದ ಆನೆಯನ್ನು ಅಯುಧ ಸಹಾಯವಿಲ್ಲದೆ ಪಳಗಿಸಿದವರಿಗೆ ೬ ಲಕ್ಷ ವರಮಾನವಿರುವ ಜಾಗೀರ ಕೋಡುವುದಾಗಿ ಸಾರಿದ. ಈ ವಾರ್ತೆ ನಾಯಕನಿಗೆ ತಲುಪಿ ಅವರ ಪೌರುಷ ಕೆರಳಿಸಿತು. ೧೫ ನೂರು ಜನ ಸಂಗಾತಿಗಳನ್ನು ಕರೆದುಕೊಂಡು ತನ್ನ ಸಹಜ ಪೋಷಾಕಿನಲ್ಲಿ ಬಿಜಾಪುರ ಸೇರಿದ. ಲಂಡಿಚಣ್ಣ, ಚರ್ಮದ ಟೊಪ್ಪಿಗೆ, ಕತ್ತಿನಿಂದ ಟೊಂಕದವರೆಗೆ ಇಳಿದ ಸಡಿಲಾದ ಅಂಗಿ ಮತ್ತು ಎಡತೋಳಿಗೆ ಸುತ್ತಿದ ಅಚ್ಚಡ ಸೊಂಟದಲ್ಲಿ ಒಂದು ಚೂರಿ ಕೈಯಲ್ಲಿ ಒಂದು ಬಡಿಗೆ ಇದು ಆತನ ಸಿದ್ಧತೆ ಆಗಿತ್ತು.

ಬಿಜಾಪುರದಲ್ಲಿ ಇತರ ೪೮ ಸರದಾರರು ಬಂದಿದ್ದರು. ಅವರನ್ನೆಲ್ಲಾ ಸುಲ್ತಾನ ಸತ್ಕರಿಸಿದ. ಅವರ ಮುಂದೆ ಆಯುಧವಿಲ್ಲದೆ ಮದವೇರಿದ ಆನೆಯನ್ನು ಪಳಗಿಸಲು ವಿಳ್ಯೆ ತೆಗೆದುಕೊಳ್ಳುವ ಪ್ರಸಂಗ ಬಂದಾಗ ಆ ೪೮ ಜನ ಯುವ ಸರದಾರರು ಮುಂದೆ ಬರಲಿಲ್ಲ. ಕೊನೆಗೆ ಲಂಡ ಚಣ್ಣದ ಪಿಡ್ಡನಾಯಕ ವಿಳ್ಯೆವನ್ನು ಎತ್ತಿದ. ಎಲ್ಲರಿಗೂ ಅಚ್ಚರಿಯಾಯಿತು. ಈ ಸಾಹಸವನ್ನು ನೋಡಬಯಸುವವರು, ಮಾಳಗೆಯ ಮೇಲೆ ನಿಂತು ನೋಡಬಹುದು. ಎಂದು ಡಂಗೂರ ಸಾರಲಾಯಿತು. ನಂತರ ಪಿಡ್ಡನಾಯಕನನ್ನು ಮದವೇರಿದ ಹುಚ್ಚು ಆನೆಯ ಹತ್ತಿರ ಬಿಡಲಾಯಿತು. ಮದ್ದಾನೆಯು ಗಿಡ ಮರ ಅಂಗಡಿಗಳನ್ನು ಕೆಡುವುತಿತ್ತು. ಆಗ ಪಿಡ್ಡನಾಯಕನಿಗೆ ಎದುರಾದ ಆನೆಯು ಆತನನ್ನು ಹಿಡಿಯಲು ಹವಣಿಸಿದಾಗ ಅದರಿಂದ ಪಾರಾಗಿ ಆನೆಯ ಬಾಲದ ಆಸರೆಯಿಂದ ಅದರ ಮೇಲೆರಿ ತಲೆಗೆ ಬಲವಾಗಿ ದೊಣ್ಣೆಯಿಂದ ಹೊಡೆಯ ತೊಡಗಿದಾಗ ಆನೆಯು ನೋವಿನಿಂದ ಓಡತೊಡಗಿತು. ಪಿಡ್ಡನಾಯಕ ತನ್ನ ಹೊಡೆತ ನಿಲ್ಲಿಸದೇ ಅದರ ಮರ್ಮಸ್ಥಾನಕ್ಕೆ ಹೊಡೆದು ಆನೆಯ ಮದವಿಳಿಸಿದ. ಕೊನೆಗೆ ಆನೆ ಅಸಹಾಯಕವಾಗಿ ಕಿರುಚುತ್ತಾ ಮೆತ್ತಗಾದಾಗ, ನಾಯಕ ಸುಲ್ತಾನರ ಹತ್ತಿರ ನಡಿಸಿ ತಂದು ಸಲಾಮು ಮಾಡಲು ತಿಳಿಸಿದ. ಸುಲ್ತಾನನು ಎಲ್ಲರ ಸಮ್ಮುಖದಲ್ಲಿಯೇ ಸನ್ನದು ಬರೆಸಿಕೊಟ್ಟ. ಹಾಗೂ ಬಿರುದಾವಳಿ ಕೆತ್ತಿದ ಎರಡುವರೆ ಮಣ ತೂಕದ ಕಬ್ಬಿಣದ ಗದೆ ಕಾಣಿಕೆಯಾಗಿ ಅರ್ಪಿಸಿ, ಗಜಗಂಡ, ಭೇರುಂಡ, ಗಡ್ಡಿ ಪಿಡ್ಡನಾಯಕ ಬಹರಿ ಬಹುದ್ದೂರನೆಂಬ ಬಿರುದನ್ನು ದಯಪಾಲಿಸಿ ಅಂದೋಲ, ನೆಲೋಗಿ, ಶಿರವಾಳ, ರಸ್ತಾಪೂರ, ವಡಿಗೇರ್, ಮಳ್ಳಿ, ಕೆಂಭಾವಿ, ಹುಣಸಗಿ, ಕೊಡೆಕಲ್, ಮದ್ರಿಕಿ ಸೆರಿದಂತೆ ೧೦ ತಾಲೂಕುಗಳನ್ನು ಜಾಗಿರವಾಗಿ ಕೊಟ್ಟ. ಹೀಗೆ ಮೋಸದಿಂದ ಕೊಲ್ಲುವ ಯೋಜನೆ ಸಾಹಸಿ ಪಿಡ್ಡ ನಾಯಕನಿಗೆ ಹೊಸ ಪ್ರದೇಶಗಳನ್ನು ಗೆಲ್ಲಲು ಸಹಾಯಕವಾಯಿತು.

'ನಾಯಕನು ಕ್ರಿ.ಶ. ೧೬೬೪ರಲ್ಲಿ ವಾಗಣಗೇರಿಯಲ್ಲಿ ದರ್ಬಾರ ಭವನವನ್ನು ಕಟ್ಟಿಸಿದ ಅನೇಕ ಕೆರೆ, ಭಾವಿಗಳನ್ನು ತೋಡಿಸಿ ರಾಜ್ಯ ವ್ಯವಸ್ಥೆಗಾಗಿ ಸುಭೇದಾರರನ್ನು, ಹವಾಲ್ದಾರನನ್ನು ಗರಡಿ ಸವಾರರನ್ನು ಸಬ್‌ನವಿಸ್ ಹುಂಡೆಕಾರ ಮೊದಲಾದ ಅಧಿಕಾರಿಗಳನ್ನು ನೇಮಿಸಿದ. ಈತನು ಆಗಾಗ್ಗೆ ಬಿಜಾಪೂರಕ್ಕೆ ಭೇಟಿ ನೀಡಿ ಸುಲ್ತಾನನಿಗೆ ತನ್ನ ಮಿತ್ರತ್ವದ ಗೌರವ ತೋರಿಸಿ ಬರುತ್ತಿದ್ದ. ಈತನು ತನ್ನ ಸೈನ್ಯದಲ್ಲಿ ೧೨ ಸಾವಿರ ಕುದುರೆ ಸವಾರರನ್ನು, ೧ ಲಕ್ಷ ಸೈನಿಕರನ್ನು ಸಜ್ಜುಗೊಳಿಸಿದ್ದ. ಈತನ ಕಾಲಕ್ಕೆ ಸಂಸ್ಥಾನಕ್ಕೆ ಒಂದು ಭದ್ರ ಬುನಾದಿ ಹಾಕಲಾಯಿತು. ಈತನಿಗೆ ಮಕ್ಕಳಿಲ್ಲದಿದ್ದರಿಂದ, ಈತನ ಅಣ್ಣ ಗುಡುಗುಂಟೆಯ ಅರಸು ಲಿಂಗನಾಯಕನ ಮಗ ಪಾಮನಾಯಕನನ್ನು ದತ್ತು ತೆಗೆದುಕೊಂಡು ಈತನ ತರುವಾಯ ದತ್ತುಪುತ್ರ ಪಾಮನಾಯಕನು ಸಂಸ್ಥಾನದ ರಾಜನಾದ.'[೯]

### ರಾಜಾ ಪಾಮನಾಯಕ (೧೬೭೪-೧೬೯೨)

'ದತ್ತುಪುತ್ರನಾದ ಪಾಮನಾಯಕನು ಸಿಂಹಾಸನವೇರಿದ ಮೇಲೆ ವಾಗಣಗೆರಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ನೂತನ ಕಚೇರಿಯನ್ನು ತೆರೆದ. ಅವುಗಳೆಂದರೆ ಗುರಿಕಾರ, ಸರನೌಬತ್, ಸರಹವಾಲ್ದಾರ, ಸಬನವಿಸ್, ಗರಡಿಸವಾರಿ, ದಖನಿ, ಹುಂಡೆಕಾರ, ಮರಾಠೇಶ್ವರ ಗೋಗಿ, ಸುಬೇದಾರ ದೇವಾಪೂರ ಸುಬೇದಾರ ತಿಂಥಣಿ ಸುಬೇದಾರ, ವಜ್ಜಲ ಸುಬೇದಾರ ಕೋಳಿಹಾಳ ಸುಬೇದಾರ, ಅಂಜ್ಳಿಹಾಳ ಸುಬೇದಾರ ನರಬೋಳ ಸುಬೇದಾರ, ದೋರನಹಳ್ಳಿ, ಸುಬೇದಾರ ಇವರಿಗೆ ೧೨ ನೂರು ಜನ, ಕುದುರೆ ಸವಾರರ ಪಡೆ ಇತ್ತು. ಈತನ ರಾಜ್ಯದಲ್ಲಿ ೧೨ ಸಾವಿರ ನುರಿತ ಬೇಡರ ಸೈನಿಕ ಪಡೆ ಇತ್ತು. ಈ ಸೈನಿಕ ವಾಗಣಗೇರ ಶಹಾಪುರದ ರಕ್ಷಣೆ ಇತ್ತು ಅಮ್ಮಾಪೂರ ಮತ್ತು ಮಲ್ಲಿಭಾವಿ ಇದೇ ಸಮಯದಲ್ಲಿ ಅಭಿವೃದ್ಧಿಗೊಂಡವು.'[೧೧] ರಾಜನು ಜಾಲಿಬೆಂಚಿ ಬೋನಾಳ ಕೆರೆಗಳು ಆದಿಲಶಾಹಿ ಕಾಲದಲ್ಲಿ ಕಟ್ಟಿದ್ದು. ಅವು ಪೂರ್ಣ ಹಾಳಾಗಿದ್ದು, ಅವುಗಳನ್ನು ದುರಸ್ತಿ ಮಾಡಿಸಿ ಇನ್ನೊಂದು ಹೊಸಕೆರೆ ಬದಮಿತಲ್ ಕಟ್ಟಿಸಿದ. ಚಿಕ್ಕನಹಳ್ಳಿಯಲ್ಲಿ ಒಂದು ಗೋಪುರ ಕಟ್ಟಿಸಿದ್ದಲ್ಲದೆ ವಾಗಣಗೇರಿಯಲ್ಲಿ ಮತ್ತೊಂದು ಹೊಸ ಕೋಟೆ ಕಟ್ಟಿಸಿ ಅವುಗಳಲ್ಲಿ ೪ ತೋಪುಗಳನ್ನು ಅಳವಡಿಸಿ ಮತ್ತೆ ಎರಡು ಕೆರೆಗಳನ್ನು ಮೂರು ಭಾವಿಗಳನ್ನು ವಾಗಣಗೇರಿಯಲ್ಲಿ ಜನತೆಯ ಅನುಕೂಲಕ್ಕಾಗಿ ನಿರ್ಮಿಸಿದ. ರಾಜನು ಮಿತ್ರತ್ವ ಸಂಕೇತವಾಗಿ ಬಿಜಾಪೂರಕ್ಕೆ ತನ್ನ ಸೈನ್ಯದೊಂದಿಗೆ ಆಗಾಗ ಭೇಟಿ ಕೊಡುತ್ತಿದ್ದ. ಬಿಜಾಪೂರದ ರಾಜರ ಪರವಾಗಿ ಯುದ್ಧ ಮಾಡಿ ಸಾಕಷ್ಟು ಗೆಲವು ತಂದು ಕೊಟ್ಟು ೨೦ವರ್ಷ ರಾಜ್ಯವಾಳಿದ ಇತನ ಕಾಲದ ಅವಿಸ್ಮರಣೀಯ ಘಟನೆಯೆಂದರೆ ಕ್ರಿ. ಶ. ೧೬೮೦ ಫೆಬ್ರವರಿ ೨೦, ೨೧ರಂದು ಶಹಾಪುರದ ಕೋಟೆಯ ಮೇಲೆ ಹಿಂದೂಸ್ಥಾನದ ಸಾಮ್ರಾಟ ಔರಂಗಜೇಬನ ನಾಮಾಂಕಿತ ಸರದಾರ, ದಿಲೇರಖಾನ, ಕ್ರಿ. ಶ. ೧೬೬೪ ಪುರಂದರಗಡದ ಯುದ್ಧದಲ್ಲಿ ಸ್ವತ: ಶಿವಾಜಿ ಮಹಾರಾಜರನ್ನು ಸೋಲಿಸಿದ ಶೂರ ಪಠಾಣನ ಸೇನಾಪತಿಯು ಆಕ್ರಮಣ ಮಾಡಿದ. ಕಿಲ್ಲೆಯು ಪಾಮನಾಯಕ ಅಧೀನದಲ್ಲಿತ್ತು. ದಿಲೇರಿಖಾನ್ ಶಹಾಪೂರದಿಂದ ೧೦ ಕಿ.ಮಿ. ದೂರದಲ್ಲಿರುವ ಗೋಗಿಯಲ್ಲಿ ತನ್ನ ಬಿಡಾರವನ್ನು ಹೂಡಿ ರಾಜಾ ಪಾಮನಾಯಕನಿಗೆ ೧೫ ಲಕ್ಷ ದಿನಾರ ಕಪ್ಪನ್ನು ಕಳುಹಿಸಲು ಸಂದೇಶ ಕಳುಹಿಸಿದ. ಸ್ವಾಭಿಮಾನಿ ರಾಜಾ ಪಾಮನಾಯಕ ಇದನ್ನು ಒಪ್ಪಲು ಸಾಧ್ಯವೇ. ಅದರಂತೆ ಖಾನನನ್ನು ಯುದ್ಧಕ್ಕೆ ಆಮಂತ್ರಿಸಿದ. ಆಗ ಇಡೀ ದಕ್ಷಿಣ ಭಾರತದಲ್ಲಿ ಬೇಡರ ಜನಾಂಗ ಮಹಾ ಶೂರರೆಂದು ಪ್ರಸಿದ್ಧಿ ಪಡೆದಿತ್ತು. ಇಂತಹ ಪ್ರಬಲ ಶಕ್ತಿಶಾಲಿ ಹಾಗೂ ಇಡೀ ಭಾರತದಲ್ಲಿ ಗೆರಿಲ್ಲಾ ಯುದ್ಧದಲ್ಲಿ ಪ್ರಸಿದ್ಧಿ ಪಡೆದ ಸೈನ್ಯ ಪಾಮನಾಯಕನದಾಗಿತ್ತು. ಕ್ರಿ. ಶ. ೧೬೮೦ ಫೆಬ್ರವರಿ ೨೦ ರಂದು ದಿಲೇರಖಾನ ತನ್ನ ಸೈನ್ಯವನ್ನು ೨ ಭಾಗಗಳಲ್ಲಿ ವಿಂಗಡಿಸಿ

ಅವುಗಳ ನೇತೃತ್ವದಲ್ಲಿ ದೇಶದಲ್ಲಿ ಹೆಸರುವಾಸಿ ಸೇನಾಪತಿಗಳಾದ ಅಬ್ದುಲಗಫರ ಇಕ್ಲಾಸ ಖಾನ್‌ನಿಗೆ ವಹಿಸಿ ಮಧ್ಯಭಾಗದ ಸೈನ್ಯದ ನೇತೃತ್ವ ತಾನೇ ವಹಿಸಿಕೊಂಡು ಶಹಾಪುರದ ಕೋಟೆಯ ಮೇಲೆ ಇಡೀ ದಿನ ಭೀಕರ ಅಕ್ರಮಣ ಮಾಡಿದ. ರಾತ್ರಿಯವರೆಗೆ ಯಾವುದೇ ಪ್ರಯೋಜನವಾಗದೆ ತನ್ನ ಸೈನ್ಯವನ್ನು ಗೋಗಿ ಬಿಡಾರಕ್ಕೆ ಕಳುಹಿಸಿದ ೨ನೇಯ ದಿನ ಫೆಬ್ರವರಿ ೨೧ ರಂದು ತನ್ನ ಪೂರ್ಣ ಶಕ್ತಿಯೊಂದಿಗೆ ಶಹಾಪುರ ಪಟ್ಟಣದ ಮೇಲೆ ಆಕ್ರಮಣ ಮಾಡಿದ. ಪಟ್ಟಣದ ಮುಚ್ಚಿದ ಮಹಾದ್ವಾರದ ಮುಂದೆ, ದಿಗ್ಗಿ ಅಗಸಿ ಇಂದಿಗೂ ಸುಸಜ್ಜಿತವಾಗಿದೆ. ಖಾನನು ಸ್ವತ: ಆನೆಯ ಮೇಲೆ ಕುಳಿತು ತೋಪಿನಿಂದ ದ್ವಾರದ ಬಾಗಿಲನ್ನು ಹೊಡೆದುರುಳಿಸಲು ಆಜ್ಞಾಪಿಸಿದ. ಮೊಘಲರ ಭಾರಿ ತೋಪಿನ ಹೊಡೆತಕ್ಕೆ ಮಹದ್ವಾರ ಮುರಿದು ಬಿತ್ತು. ಮೊಘಲರ ಸೈನ್ಯದ ಸಂತೋಷಕ್ಕೆ ಪಾರವೇ ಇಲ್ಲ. ಇನ್ನೇನು ಲೂಟಿ ಪ್ರಾರಂಭಿಸಬೇಕು ಅನ್ನುವಷ್ಟರಲ್ಲಿ ಗುಡ್ಡದ ಬದಿಯಲ್ಲಿ ಅಡಗಿ ಕುಳಿತ ಬೇಡರ ಪಡೆಯು ಮೊಘಲ ಸೈನ್ಯಕ್ಕೆ ಗುಂಡಿನ ಸುರಿಮಳೆ ಸುರಿಸಲು ಪ್ರಾರಂಭಿಸಿತು. ಒಂದೇ ಒಂದು ಗುಂಡು ಗುರಿತಪ್ಪದ ಹಾಗೆ ಸೈನಿಕರು ಹೊಡೆಯುತ್ತಿದ್ದರು. ಗುಂಡಿನ ಹೊಡೆತ ತಾಳಲಾರದೆ ಮೊಘಲ ಸೇನೆ ಗೋಗಿಯ ಕಡೆ ಪಲಾಯನ ಮಾಡತೊಡಗಿತು. ದಿಲೇರಖಾನನಿಗೆ ತನ್ನ ಅಪಾರ ಸೈನ್ಯದ ಹಾನಿಗಿಂತಲೂ ತನ್ನ ಸೈನಿಕರ ಮನೋಬಲ ಕುಗ್ಗಿದ್ದನ್ನು ಕಂಡು ದಿಗ್ಭ್ರಮೆಯಾಯಿತು. ಪಲಾಯನ ಗೈಯುತ್ತಿದ್ದ ಮೊಘಲ ಸೈನ್ಯಕ್ಕೆ ವಿಪರೀತ ಹಣದ ಆಮೀಷ ತೋರಿಸಿ ಹುರಿದುಂಬಿಸಲು ಪ್ರಯತ್ನಿಸಿದ. ಆದರೆ ಮೊಘಲ ಸೈನ್ಯ ಪಾಮನಾಯಕನ ಸೈನ್ಯದ ಹೊಡೆತದ ಮುಂದೆ ಸಂಪೂರ್ಣ ಶರಣಾಗತಿಯಾದುದರಿಂದ ಯಾವುದೇ ಪ್ರಯೋಜನವಾಗಲಿಲ್ಲ. ಗೋಗಿಯ ಕಡೆ ಪಲಾಯನ ಗೈಯುತ್ತಿರುವ ಮೊಘಲ ಸೈನ್ಯಕ್ಕೆ ಹಾದಿಯ ಎರಡು ಬದಿಯಿಂದ ನಾಯಕನ ಸೈನ್ಯವು ಅಕ್ರಮಣ ಮಾಡಿತು. ಈ ಭೀಕರ ಯುದ್ಧದಲ್ಲಿ ದಿಲೇರಖಾನ ಹೇಗೋ ಜೀವಂತ ಪಾರಾದ. ಮಹಾಸೇನಾಪತಿ ದಿಲೇರಖಾನ ಹಾಗೂ ಆತನ ಸೈನ್ಯ ಜೀವದಿಂದ ಉಳಿಯಲು ಪಾಮನಾಯಕನ ಅನುಗ್ರಹಕ್ಕಾಗಿ ವಿನಂತಿಸುವ ದೃಶ್ಯ ಇತಿಹಾಸಕಾರರನ್ನೇ ದಿಗ್ಭ್ರಮೆಗೊಳಿಸುವುದಿಲ್ಲವೆ? ಮೊಘಲ ಸಾಮ್ರಾಟ ಔರಂಗಜೇಬನ ದುರಂಧರ ಸೇನಾಪತಿ ಒಂದು ಸಣ್ಣ ಸಂಸ್ಥಾನದ ರಾಜನಿಂದ ಸಂಪೂರ್ಣ ಸೋಲನ್ನು ಅನುಭವಿಸಿ. ಜೀವ ಬಿಕ್ಷೆ ಪಡೆದು ಅವಮಾನಿತನಾದದ್ದು ಇತಿಹಾಸದ ಸತ್ಯ ಘಟನೆಯಾಗಿದೆ. ಇಂತಹ ಅವಮಾನಿತ ಮುಖವನ್ನು ನೋಡಬಾರದೆಂದು ಔರಂಗಜೇಬನು ದಿಲೇರಖಾನನ್ನು ದಿಲ್ಲಿ ಮುಟ್ಟುವ ಮೊದಲೇ ವಿಷ ಕೊಟ್ಟು ಕೊಲ್ಲಿಸಿದ. ಅಂದು ಗೋಗಿಯಿಂದ ಶಹಾಪೂರ ಕೋಟೆಯ ಮೇಲೆ ಆಕ್ರಮಣ ಮಾಡಿದಾಗ ಹಾದಿಯಲ್ಲಿ ಬರುವ ಅಂಬ್ಲಿಪುರ, ರಾಜಾಪೂರ, ಖಾನಾಪೂರ ಕಂಚಲಕಾಯಿ ಇತ್ಯಾದಿ ಹಳ್ಳಿಗಳ ಕ್ರೌರ್ಯಕ್ಕೆ ಹೆಸರಾದ ಮೊಘಲ ಸೈನ್ಯಕ್ಕೆ ಹೆದರಿ ಸರ್ವನಾಶ ಆದವು. ಆ ಹಳ್ಳಿಗಳ ಅಧಿದೇವನೇ ಬಲಭೀಮ, ಹನುಮಾನ ಭೀಮರಾಯ.

ಈ ಮಂದಿರವು ಯುದ್ಧಗಳಲ್ಲಿ ಭಗ್ನಗೊಂಡು ಮೂರ್ತಿಯು ನೆಲದಲ್ಲಿ ಹೂತು ಹೋಯಿತು. ಮುಂದೆ ಇದು ರೈತನ ನೇಗಿಲಿಗೆ ಸಿಕ್ಕು ಹೊರ ಬಂದಾಗ ರೈತರು ಈ ವಿಷಯ ಪಾಮನಾಯಕನಿಗೆ ತಿಳಿಸಿದರು. 'ಸುರಪುರ ರಾಜರ ಧ್ವಜವು ಕೂಡ ಹನುಮ ಧ್ವಜವೇ ರಾಜರು ಭಕ್ತಿಯಿಂದ ಸುಂದರವಾದ ಬಲಭೀಮರಾಯನಗುಡಿ ಕಟ್ಟಿಸಿದರು. ಅದೇ ಇಂದಿನ ಭೀಮರಾಯನಗುಡಿ.'[೧೧]

**ಪಿತಂಬರ ಬಹರಿ ಪಿಡ್ಡನಾಯಕ (೧೬೭೨-೧೭೨೬)**

ಪಾಮನಾಯಕನ ದತ್ತು ಪುತ್ರ ಪಿತಾಂಬರ ಬಹರಿ ಪಿಡ್ಡ ನಾಯಕನು ವಾಗಿಣಗೇರಾದ (ಸುರಪುರ ಸಂಸ್ಥಾನ) ರಾಜನಾದ. ರಾಜನು ಮಹಾ ಪರಾಕ್ರಮಿ ಹಾಗೂ ದೈವಿ ಭಕ್ತನಾಗಿದ್ದ. ಈತನ ಅವಧಿಯಲ್ಲಿಯೇ ಮೊಘಲ್ ಸಾಮ್ರಾಟ್ ಔರಂಗಜೇಬನ ಅಪಾರ ಸೈನ್ಯವನ್ನು ಹಾಗೂ ಸ್ವತ: ಔರಂಗಜೇಬನನ್ನೇ ಇದುರಿಸುತ್ತಾ ತನ್ನ ವಿಲಕ್ಷಣವಾದ ಯುಕ್ತ-ಚಾತುರ್ಯ, ಶೌರ್ಯ ಸಾಮರ್ಥ್ಯದಿಂದ ತನ್ನ ಜನಾಂಗದ ಹಾಗೂ ಇಡೀ ದಕ್ಷಿಣ ಭಾರತದ ಅಸ್ಥಿತ್ವವನ್ನೇ ಕಾಪಾಡಿದ ಮಹಾ ಪುರುಷ, ನಿಜಾಮನಿಗಿಂತ ಎಷ್ಟೋ ಪಾಲು ಶೌರ್ಯ ಸಾಹಸದಲ್ಲಿ ಮುಂದಿದ್ದರೂ ಬೇರೆಯವರ ರಾಜ್ಯಗಳನ್ನು ಗೆಲ್ಲಬೇಕೆನ್ನುವ ಮಹಾತ್ವಾಕಾಂಕ್ಷಿಯಾಗಿರಲಿಲ್ಲ.

ಪಿಡ್ಡ ನಾಯಕನ ತಂದೆ ಪಾಮನಾಯಕನ ಶೌರ್ಯ ಸಾಹಸವನ್ನು ಕೇಳಿ ಸಹಿಸದ ಔರಂಗಜೇಬ ತನ್ನ ದುರಂಧರ ಸೇನಾಪತಿ ದಿಲೇರಖಾನನ್ನು ಕಿಲ್ಲೆಯ ಮೇಲೆ ಆಕ್ರಮಣ ಮಾಡಲು ಕಳುಹಿಸಿ, ಆತ ದಯನೀಯವಾಗಿ ಸೋತ ಬಗ್ಗೆ ಹಿಂದಿನ ಭಾಗದಲ್ಲಿ ವಿವರಿಸಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ. ತಂದೆಗಿಂತಲೂ ಹೆಚ್ಚಿನ, ಮಗನ ಶೌರ್ಯ, ಸಾಹಸ ಅದರ ಜೊತೆಗೆ ವಿಲಕ್ಷಣವಾದ ಬುದ್ಧಿ ಚಾತುರ್ಯವನ್ನು ಮೈಗೂಡಿಸಿಕೊಂಡಿದ್ದ. ಪಿಡ್ಡನಾಯಕನನ್ನು ಹದ್ದು ಬಸ್ತಿನಲ್ಲಿಡಲು ಔರಂಗಜೇಬನು ೧೬೯೪ರಲ್ಲಿ ೨ನೇ ಬಾರಿ ವಾಗಣಗೇರಿಯ ಮೇಲೆ ಆಕ್ರಮಣ ಮಾಡಲು ತನ್ನ ಮಗ ಶಹಾಜಾದ ರಾಮಭಕ್ಷ, ಶಹಜಾದ ಅಜಬ ಹಾಗೂ ದೇಶದಲ್ಲಿಯೇ ನಾಮಾಂಕಿತ ಸರದಾರರಾದ ಹಾಗೂ ಅಭೇದ್ಯವಾದ ಸಹ್ಯಾದ್ರಿಯ ಒಂದೊಂದು ಕೋಟೆಗಳನ್ನು ಲೀಲಾಜಾಲವಾಗಿ ವಶಪಡಿಸಿಕೊಂಡು ಬೈರಾಮಖಾನ್, ಅಮಿರಉದ್ದೀನ್, ರೋಹಿಲ್ಲಾಖಾನ್, ಫಿರೋಜಜಂಗ ಮೊದಲಾದವರು ತಮ್ಮ ಅಪಾರ ಸೈನ್ಯದೊಂದಿಗೆ ವಾಗಣಗೇರಿಯನ್ನು ಮುತ್ತಿ ತಿಂಗಳು ಗಟ್ಟಲೆ ಕೊಟೆಯ ಮೇಲೆ ಅಕ್ರಮಣ ಮಾಡಿದ್ರೂ ಪಿಡ್ಡನಾಯಕನ ಬೇಡರ ಪಡೆಯು ಧೈರ್ಯ ಸಾಹಸದಿಂದ ಇವರೆಲ್ಲರನ್ನು ಹಿಮ್ಮೆಟ್ಟಿಸಿತು. ನಿರಾಶರಾದ ಈ ಎಲ್ಲಾ ಅಥಿರಥ ಮಹಾರಥರು ತಲೆ ತಗ್ಗಿಸಿ ಹಿಂದಿರುಗಬೇಕಾಯಿತು. ಸಾಮ್ರಾಟ ಔರಂಗಜೇಬನು ೧೭೮೧ರಲ್ಲೇ ತನ್ನ ಪ್ರಚಂಡ

ಸೈನ್ಯದೊಂದಿಗೆ ದಕ್ಷಿಣದೆಡೆಗೆ ದಿಗ್ವಿಜಯಕ್ಕೆ ಹೊರಟು ಇಡೀ ಭಾರತದ ಸಾಮ್ರಾಟನಾಗುವ ಕನಸನ್ನು ಕಂಡಿದ್ದ. ಈ ಪ್ರಚಂಡ ಮೊಘಲ ಸೇನೆಯ ಹೊಡೆತಕ್ಕೆ ಸಿಕ್ಕ ದಕ್ಷಿಣದ ಶಕ್ತಿಶಾಲಿ ರಾಜ್ಯಗಳಾದ ಗೊಲ್ಕೊಂಡ ಹಾಗೂ ಬಿಜಾಪುರದ ಆದಿಲಶಾಹಿ ಪರಾಭವಗೊಂಡರು. ಸಂಪೂರ್ಣ ದಕ್ಷಿಣ ಭಾರತ ತನ್ನದಾಯಿತೆಂದು ಅಹಂಕಾರದಿಂದ ಇರುವಾಗಲೇ ವಾಗಣಗೇರಿಯ ಸಮಾಚಾರವು ಔರಂಗಜೇಬನಿಗೆ ತಲುಪಿ ವಿಚಲಿತನಾದ. ಇನ್ನು ಸೇನಾಪತಿಗಳನ್ನು ಕಳಿಸುವುದರಲ್ಲಿ ಯಾವುದೇ ಅರ್ಥವಿಲ್ಲ ಎಂದು ತಿಳಿದು ಸಾಮ್ರಾಟ ಔರಂಗಜೇಬನೇ ತನ್ನ ಪ್ರಚಂಡ ಸೈನ್ಯದೊಂದಿಗೆ (ಅಂದರೆ ಇತಿಹಾಸಕಾರರು ಹೇಳುವಂತೆ ಔರಂಗಜೇಬನು ಹೊರಟರೆ ಆತನೊಂದಿಗೆ ೧೦ ಲಕ್ಷ ಸೈನ್ಯ ಇರುತ್ತಿತ್ತು) ೨ನೇ ಜನವರಿ ೧೭೦೫ರಂದು ಪಂಡರಾಪುರದಿಂದ ಪ್ರಯಾಣವನ್ನು ಪ್ರಾರಂಭಿಸಿದ. ಫೆಬ್ರುವರಿ ೨, ೧೭೦೫ರಂದು ಸಿಂದಿಗಿ ಮತ್ತು ವಾಗಣಗೇರಾ ಮಧ್ಯದಲ್ಲಿರುವ ಮಳ್ಳಿಯಲ್ಲಿ ಬಿಡಾರ ಹೂಡಿದ. ನಂತರ ವಾಗಣಗೇರಾದಿಂದ ದಕ್ಷಿಣಕ್ಕೆ ೪ ಮೈಲಿ ದೂರದಲ್ಲಿರುವ ಕೃಷ್ಣ ನದಿ ದಂಡೆಯಲ್ಲಿರುವ ದೇವಾಪುರದಲ್ಲಿ ತನ್ನ ಬಿಡಾರವನ್ನು ಹೂಡಿದ. ೨೯ ಮಾರ್ಚ್ ೧೭೦೫ರಂದು ಮೊಘಲ ಸರಸೇನಾಪತಿ ಜುಲ್ಫೀಕರಖಾನನಿಗೆ ವಾಗಣಗೇರಾ ಕೋಟೆಯ ಹೊರಭಾಗಗಳನ್ನು ಪರೀಕ್ಷಿಸಲು ಅಪ್ಪಣೆ ಮಾಡಿದ್ದಲ್ಲದೇ ಅದೇ ದಿನವೇ ಇನ್ನೊಬ್ಬ ಸೇನಾಪತಿ ರೆಹಮಾನ ಭಕ್ಷನಿಗೆ ವಾಗಣಗೇರಾದ ಮೇಲೆ ೨ನೇ ಬಾರಿ ಆಕ್ರಮಣ ಮಾಡಲು ಆಜ್ಞೆ ನೀಡಿದ. ಈ ಯುದ್ಧವೇ ಔರಂಗಜೇಬನ ಜೀವನದ ಕೊನೆ ಯುದ್ಧವಾಯಿತು. ಈ ಯುದ್ಧವು ನಿರಂತರವಾಗಿ ೨ ತಿಂಗಳು ನಡೆಯಿತು. ಇದರಲ್ಲಿ ವಿಜಾಪುರದ ಸುಬೇದಾರನೆಂದು ನೇಮಕಗೊಂಡ ಚಿನಕುಲಿಖಾನ್ ಈತನೇ ಮುಂದೆ ನಿಜಾಮ ಜುಲ್ ಮುಲ್ಕನದ ತಮಿಳುನಾಡಿನ ದಾವುದ್ ಖಾನ ಮಹಾಪರಾಕ್ರಮಿ ರಜಪೂತ ಸರದಾರನಾದ ರಾವದಲಪತ್ ಬುಂದೆಲಾ ರಾಮಸಿಂಗಹಾಡಾ ಹಾಗೂ ತೋಪಖಾನಿಯ ಅಧಿಕಾರಿಗಳಾದ ತುರಬತ್ ಖಾನ್, ಮೊಹ್ಮದ ಅಮಿಖಾನ್, ಅಸದ್‌ಖಾನ್, ಜಿಂಜಿ ಹಾಗೂ ಪ್ರಚಂಡ ಗಿರಿಕೋಟೆಯಾದ ರಾಯಗಢವನ್ನು ಗೆದ್ದ ಮೊಘಲ್ ಶೂರ ಸೇನಾಪತಿ ನಸರತಜಂಗ್ ಔರಂಗಜೇಬನ ತುಂಬಾ ಪ್ರೀತಿಗೆ ಪಾತ್ರನಾದ ಅಮೀರವುದ್ದೀನ್‌ಖಾನ್ ಇವರೆಲ್ಲರೂ ಈ ಯುದ್ಧದಲ್ಲಿ ಭಾಗವಹಿಸಿದರು. ತಿಂಗಳುಗಟ್ಟಲೆ ಯುದ್ಧ ಮಾಡಿದರು. ಕೋಟೆ ಕೈವಶವಾಗದ್ದು ಇತಿಹಾಸಕಾರರನ್ನೇ ದಿಗ್ಭ್ರಮೆಗೊಳಿಸುತ್ತದೆ. ಏಕೆಂದರೆ ವಾಗಣಗೇರಿಯು ಒಂದು ಚಿಕ್ಕ ಕೋಟೆಯಾಗಿದ್ದು ಅದರ ವಿಸ್ತೀರ್ಣ ೧೭ ಎಕರೆ ೧೩ ಗುಂಟೆಯಾಗಿದ್ದು ನೆಲದಿಂದ ಕೇವಲ ೨೫೦ ಅಡಿ ಎತ್ತರದಲ್ಲಿದೆ. ಅಂದರೆ ಇಂತಹ ಪ್ರಬಲ ಮೊಘಲ ಸೇನೆಯ ದುರಂದರ ಸೇನಾಪತಿಗಳು ಹಾಗೂ ಸ್ವತಃ ಔರಂಗಜೇಬನೇ ತನ್ನ ಎಲ್ಲಾ ಉಪಯೋಗಗಳಿಂದ ಕಿಲ್ಲೆಯನ್ನು ಕೈವಶ ಮಾಡಿಕೊಳ್ಳುವಲ್ಲಿ ವಿಫಲನಾಗಿದ್ದನಲ್ಲದೇ, ತನ್ನ ವಿಚಿತ್ರ ಕೌಶಲ್ಯ

ಹಾಗೂ ಚಾತುರ್ಯದಿಂದ ಮಹಾಚತುರ, ಮೋಸಗಾರ, ಕ್ರೂರಿ ಔರಂಗಜೇಬನನ್ನೇ ಮೋಸಗೊಳಿಸಿದ್ದನ್ನು ನೋಡಿದಾಗ, ಪಿಡ್ಡನಾಯಕನ ಧೈರ್ಯ, ಸಾಹಸವನ್ನು ವರ್ಣಿಸಲು ಶಬ್ದಗಳೇ ಸಾಲದಂತಾಗುತ್ತದೆ.

ಈ ಯುದ್ಧದಲ್ಲಿ ಔರಂಗಜೇಬನ ಮಹಾ ಪರಾಕ್ರಮಿ ಸೇನಾಪತಿಗಳಾದ ರಾವ್‌ದಲಪತ್ ಬುಂದೇಲಾ, ರಾಮಸಿಂಗ್‌ಹಾಡಾ, ಖಾನ್ ನಸರತ್‌ಜಂಗ್, ಮುಸರದ್‌ಖಾನ್, ಜಮಶದ್ ಖಾನ್, ಅಮೀನುದ್ದೀನ್ ಖಾನ್, ಹಾಗೂ ಅಪಾರ ಸೈನ್ಯವನ್ನು ಕಳೆದುಕೊಂಡಿದ್ದಲ್ಲದೇ, ಈ ಯುದ್ಧಕ್ಕಾಗಿ ಕೋಟ್ಯಾಂತರ ರೂಪಾಯಿ ಖರ್ಚು ಮಾಡಿಯೂ ಜಯ ಸಂಪಾದಿಸಲಿಲ್ಲ ಎನ್ನುವ ಈ ಉದ್ಗಾರವು ಔರಂಗಜೇಬನ ಸರದಾರರಿಂದಲೇ ಬಂದಿದೆ. ಪಿಡ್ಡನಾಯಕನು ತನ್ನ ವಿಲಕ್ಷಣವಾದ ಯುಕ್ತಿಯಿಂದ ಹಾಗೂ ಈ ಯುದ್ಧದಲ್ಲಿ ಧನ್ನಾಜಿ ಜಾದವ ಹಾಗೂ ಸಂತಾಜಿ ಘೋರ್ಪಡೆಯವರ ಬೆಂಬಲ ಪಡೆದು ದಿಲ್ಲಿಯ ಸಾಮ್ರಾಟನನ್ನೇ ಹತಾಶಗೊಳಿಸಿದ. ಕೊನೆಗೆ ಪಿಡ್ಡನಾಯಕನು ಮರಣ ಶಯ್ಯದಲ್ಲಿದ್ದ ಔರಂಗಜೇಬನ ದೈನ್ಯ ಸ್ಥಿತಿಯನ್ನು ಕಂಡು ಇನ್ನು ಯುದ್ಧ ಮಾಡುವುದರಲ್ಲಿ ಯಾವುದೇ ಪ್ರಯೋಜನವಿಲ್ಲವೆಂದು ಏಪ್ರಿಲ್ ೧೭೦೫ ರಂದು ಸಂಪೂರ್ಣ ಕೋಟೆಯನ್ನು ಖಾಲಿ ಮಾಡಿ ಕಗ್ಗತ್ತಿನಲ್ಲಿ ಮರಾಠರ ಹಾಗೂ ತನ್ನ ಪರಿವಾರ ಜನರೊಂದಿಗೆ ಕಾನನದಲ್ಲಿ ಮಾಯವಾದ. ಮೊಘಲ್ ಸೈನ್ಯವು ಕಿಲ್ಲೆಯಲ್ಲಿ ಗುಂಡಿನ ಶಬ್ದವು ಸ್ತಬ್ಧವಾಗಿದ್ದನ್ನು ಕಂಡು ಆಶ್ಚರ್ಯ ಹಾಗೂ ಆತಂಕಗಳಿಂದ ಅಂಜುತ್ತಾ, ಅಳುಕುತ್ತಾ, ಕೋಟೆಯನ್ನು ಪ್ರವೇಶಿಸಿದಾಗ ಒಂದು ಬೆಕ್ಕಿನ ಮರಿಯೂ ಅಲ್ಲಿ ಕಾಣಲಿಲ್ಲ. ಮೊಘಲ ಸೈನ್ಯದ ಹುಚ್ಚುತನವನ್ನು ಅರಿತು ಬೇಡರ ಪಡೆಯು ತನ್ನ ಎಲ್ಲಾ ಮದ್ದಿನ ಮನೆಗಳನ್ನು ಸುಸಜ್ಜಿತವಾಗಿಟ್ಟ ಪರಿಣಾಮ ಅಲ್ಲಿ ಬೆಂಕಿ ಬಿದ್ದು ತಕ್ಷಣ ಕೋಟೆಯನ್ನು ಲೂಟಿ ಮಾಡಲು ಸಾವಿರಾರು ಮೊಘಲ ಸೈನ್ಯವು ನುಗ್ಗಿದಾಗ ಒಂದರ ಮೇಲೆ ಒಂದು ಮದ್ದಿನ ಸ್ಫೋಟಗಳಿಂದ ೧೧ ಸಾವಿರ ಸೈನಿಕರ ದೇಹಗಳು ಛಿದ್ರ ಛಿದ್ರವಾಗಿ ಗಾಳಿಯಲ್ಲಿ ತೇಲಾಡಿದವು. ಈ ಯುದ್ಧದಲ್ಲಿ ಅಪಾರ ನಷ್ಟದಿಂದ ಸಾಮ್ರಾಟನ ಮಾರಣಾಂತಿಕ ಬೇನೆಯು ಇನ್ನಷ್ಟು ಉಲ್ಬಣಿಸಿತು. ಆತನ ಮೈಸೂರು ಹಾಗೂ ತಂಜಾವೂರನ್ನು ಗೆಲ್ಲುವಾಸೆ ಕೊನೆಗೂ ಕನಸಾಗಿ ಉಳಿಯಿತು. ಇಂತಹ ಅಸಹಾಯಕ ಸ್ಥಿತಿಯಲ್ಲಿದ್ದ ಔರಂಗಜೇಬ ಪಿಡ್ಡನಾಯಕನ ವೈರತ್ವದಿಂದ ಇನ್ನು ಮುಂದೆ ಶಾಂತಿ ಅಸಾಧ್ಯವೆಂದು ಬಗೆದು ಪಿಡ್ಡನಾಯಕನಿಗೆ ಶಾಂತಿಯ ಫರಮಾನನ್ನು ಕಳುಹಿಸಿ ಅದರಲ್ಲಿ ನಿನ್ನ ಎಲ್ಲಾ ತಪ್ಪುಗಳನ್ನು ಮನ್ನಿಸಿ ನಸರತ್‌ಗಡ್ ಸಗರ ಸರದೇಶಮುಖಿ ಪ್ರಧಾನ ಮಾಡಿದ್ದಾಗ ವಚನ ಕೊಟ್ಟಿದ್ದಲ್ಲದೇ, ನೀನು ಮುಸಲ್ಮಾನನಾಗಿದ್ದರೆ ನಿನ್ನನ್ನು ಸಹೋದರ ಅನ್ನುತ್ತಿದ್ದೆ; ಹಾಗೂ ಇತರ ಅನಾನುಕೂಲಗಳಿಂದ ನಿನ್ನನ್ನು ರಕ್ಷಿಸುತ್ತಿದ್ದೆ. ಆದರೆ ಮುಸ್ಲಿಂನಲ್ಲವೆಂದು ವಿಷಾದಿಸಿದ ಔರಂಗಜೇಬ ನಿನ್ನ ಮಗ ಪಾಮನಾಯಕನನ್ನು ಶ್ರೇಯಾ ಸೂಚಕವಾಗಿ ರಾಜಸನ್ನಿಧಿಗೆ ಕಳುಹಿಸಿ ಹೆಚ್ಚಿನ ಮಾನ

ಸೌಲಭ್ಯಗಳನ್ನು ಪಡೆಯಲು ಫರಮಾನಿನಲ್ಲಿ ಹೇಳಿದ್ದಾನೆ. ಈ ಫರಮಾನಿಗೆ ಸ್ವತಃ ಔರಂಗಜೇಬನೇ ತನ್ನ ಹಸ್ತವನ್ನು ಶ್ರೀಗಂಧದಲ್ಲಿ ಎದ್ದಿ ಮೊಹರು ಹಾಕಿದ ಈ ಅಪರೂಪದ ಔರಂಗಜೇಬನ ಹಸ್ತದ ಪ್ರತಿ ಇಂದಿಗೂ ಸುರಕ್ಷಿತವಾಗಿ ಪಿಡ್ಡನಾಯಕನ ವಂಶಜರ ದರಬಾರಿನಲ್ಲಿ ನೋಡಬಹುದಾಗಿದೆ. ಮಹಾಕ್ರೂರಿ ಹಾಗೂ ಹಿಂದುಗಳ ದ್ವೇಷಿಯಾದ ಔರಂಗಜೇಬ ಈ ರೀತಿಯ ಸಂದೇಶವನ್ನು ಕಳುಹಿಸಲು ಸಾಧ್ಯವೇ? ಸಾಧ್ಯವೆಂದಾಗ ಎಂತಹ ಅಸಹಾಯಕ ಪರಿಸ್ಥಿತಿಯಲ್ಲಿ ದಿಲ್ಲಿ ಸಾಮ್ರಾಟ ಫರಮಾನು ಹೊರಡಿಸಿದ್ದನ್ನು ಸ್ವಲ್ಪ ಆಲೋಚಿಸಿದಾಗ ದಿಲ್ಲೇಶ್ವರನು ಪಿಡ್ಡನಾಯಕನಿಂದ ಸಾಕಷ್ಟು ದೈಹಿಕ ಮತ್ತು ಮಾನಸಿಕ ಆಘಾತಕ್ಕೆ ಒಳಗಾಗಿ ಮರಣ ಶಯ್ಯೆಯಲ್ಲಿದ್ದನೆಂದು ಒಪ್ಪಲೇಬೇಕಾಗುವುದು. ಅಂದರೆ ಮರಣ ವಾಗಣಗೇರಾದ ಸಮೀಪದಲ್ಲಿಯೇ ಆಯಿತು. ಹಾಗಿದ್ದರೂ ಕೂಡಾ ಅಂದಿನ ಪರಿಸ್ಥಿತಿಯಲ್ಲಿ ದಿಲ್ಲಿಯಲ್ಲಿ ಸಿಂಹಾಸನಕ್ಕಾಗಿ ಭಾರೀ ಯುದ್ಧವೇ ನಡೆಯುವುದೆನ್ನುವ ಭಯದಿಂದ ಸಾವನ್ನು ಗುಪ್ತವಾಗಿಟ್ಟು ಸೂಕ್ತ ಸಮಯದಲ್ಲಿ ಬಹಿರಂಗಪಡಿಸಲಾಯಿತೆ? 'ಪ್ರಸಿದ್ಧ ಸಂಶೋಧನಕಾರರಾದ ಆದ್ಯ ರಾಮಾಚಾರ್ಯರು ಇತ್ತೀಚಿನ ತಮ್ಮ ಒಂದು ಪ್ರಕಟಣೆಯಲ್ಲಿ ಮರಣವು ವಾಗಣಗೇರದ ಸಮೀಪವೇ ಆಗಿದೆಯೆಂದು ತಿಳಿಸಿದ್ದಾರೆ.'[೧೨]

ಇಂತಹ ದಕ್ಷಿಣ ಭಾರತದ ಮಹಾಪರಾಕ್ರಮಿ ರಾಜನ ಶೌರ್ಯ ಸಾಹಸವನ್ನು ಅರಿತ ಹಿಂದೂ ವಿಶ್ವರಾಜ್ಯದ ಮರಾಠ ಶೂರರು, ಶಿವಾಜಿ ಹಾಗೂ ಸಂಭಾಜಿ ಮಹಾರಾಜರ ಮರಣದ ನಂತರ ಚೆಲ್ಲಾಪಿಲ್ಲಿಯಾದ ಹಾಗೂ ಸದಾ ಮೊಗಲ ಸೈನ್ಯದ ಭೀತಿಯಿಂದ ತತ್ತರಿಸಿದ ಮರಾಠ ಸರದಾರರ ಪರಿವಾರಗಳಿಗೆ ಹಾಗೂ ಸ್ವತಃ ರಾಜ ಮಹಾರಾಜರಿಗೆ ರಕ್ಷಣೆ ನೀಡಿದ ಕೀರ್ತಿ ಸುರಪುರದ್ದಾಗಿದೆ.

ಇನ್ನೊಂದು ಮಹತ್ವದ ಸಂಗತಿಯೆಂದರೆ ಮಹಾಕ್ರೂರಿ, ಹಿಂದೂ ದ್ವೇಷಿ ಹಾಗೂ ತನ್ನ ಖಡ್ಗದಿಂದ ಇಡೀ ಭಾರತವನ್ನೇ ಇಸ್ಲಾಂಮಯ ಮಾಡಬೇಕೆನ್ನುವ ದುರುದ್ದೇಶದಿಂದ ದಕ್ಷಿಣ ಭಾರತದ ಮೇಲೆ ದಿಗ್ವಿಜಯ ಸಾಧಿಸಲು ಹೊರಟ ಔರಂಗಜೇಬನನ್ನು ಒಂದು ವೇಳೆ ಸುರಪುರದ ರಾಜಾ ಪಿಡ್ಡನಾಯಕನು ಪ್ರಸಿದ್ಧ ವಾಗಣಗೇರಾ ಯುದ್ಧದಲ್ಲಿ ಹಿಮ್ಮೆಟ್ಟಿಸದಿದ್ದರೆ ಮೊಘಲ ಸೇನೆ ಲೀಲಾಜಾಲವಾಗಿ ಮೈಸೂರು–ತಂಜಾವೂರು ತಲುಪಿ ದಕ್ಷಿಣದ ಪ್ರಸಿದ್ಧ ಮಂದಿರಗಳನ್ನು ಉತ್ತರದ ಕಾಶಿ, ಮಥುರಾ, ಅಯೋಧ್ಯಗಳಂತೆ ನಾಶಮಾಡುತ್ತಿದ್ದ ಬಗ್ಗೆ ಯಾವುದೇ ಸಂಶಯವಿಲ್ಲ. ಹಾಗಾದರೆ ಇಂದು ನಾವು ನೋಡುವ ದಕ್ಷಿಣದ ಶ್ರೇಷ್ಠ ಹಿಂದೂ ಪರಂಪರೆಯ ಮಂದಿರಗಳ ಶಿಲ್ಪ ವೈಭವವನ್ನು ಉಳಿಸಿದ ಕೀರ್ತಿ ಸುರಪುರದ ರಾಜರಿಗೆ ಸಲ್ಲುತ್ತದೆ ಎಂದರೆ ಅತಿಶಯೋಕ್ತಿ ಯಾಗಲಾರದು. ಪೀತಾಂಬರ ಬಹರಿ ಪಿಡ್ಡನಾಯಕರೇ ಸುರಪುರದ ಸಂಸ್ಥಾಪಕ. ಸುರಪುರದ ಸ್ಥಾಪನೆಯ ಸಮಯದಲ್ಲಿ ರಾಜನು ತನ್ನ ಗುರು ಗೋಪಣ್ಣ ಜಂಗಮರೊಂದಿಗೆ ಹೊರಟಾಗ ಮೊಲವೇ ನಾಯಿಯನ್ನು

ಹಿಡಿಯುವ ವಿಲಕ್ಷಣ ದೃಶ್ಯವನ್ನು ಕಂಡು ಇದೇ ಸುರಪುರ ಸಂಸ್ಥಾನದ ಸ್ಥಾಪನೆಗೆ ಸೂಕ್ತ ಸ್ಥಳವೆಂದು ಗುರುತಿಸಿ ಭೂಮಿಯನ್ನು ಸರ್ವೆ ಮಾಡಿ ೧೩ ಭಾಗಗಳಲ್ಲಿ ವಿಂಗಡಿಸಿ ಅವುಗಳನ್ನು ಅಭಿವೃದ್ಧಿಗೊಳಿಸಿದ್ದನು.

- 'ಮ್ಯಾಗೇರಿ : ಅಲ್ಲಿ ಒಂದು ಅಶ್ರುಖಾನ್ ಕಟ್ಟಿಸಿ ೩೦೦ ಬೇಡರ ಪಡೆಯನ್ನು ಕಾಯಲು ನೇಮಿಸಿದ.
- ನಡುಗೇರಿ : ಅಲ್ಲಿ ೫೦೦ ಜನ ಬೇಡರ ಪಡೆಯನ್ನೇ ಕಾಯಲು ಇಟ್ಟ.
- ವಜೀರ ಮೊಹಲ್ಲಾ : ೨೫೦ ಜನ ಧನಗಾರರನ್ನಿಟ್ಟ.
- ಜಗ್ಗದಗೇರಿ : ೪೫೦ ಜನ ಬೇಡರ ಪಡೆಯನ್ನಿಟ್ಟ.
- ಬೈಲ ಹಣಮಂತಕೇರಿ : ೨೫೦ ಜನ ಬೇಡರ ಪಡೆ ನೇಮಿಸಿದ.
- ಹಲಕಲ್ ಕೇರಿ : ೬೦೦ ಜನ ಕೂಟಗಾರರನ್ನು ನೇಮಿಸಿದ್ದ.
- ಡೊಣ್ಣಿಗೇರಿ : ೨೦೦ ಬೇಡ ಪಡೆ ೧೦೦ ಜನ ಭೋಯಗಳನ್ನಿಟ್ಟ.
- ಪಾಳೆದಕೇರಿ : ೩೦೦ ಜನ ಗರ್ದಿ ಕೋಟಿಗಾರರನ್ನಿಟ್ಟ.
- ಗೋಗಿಕೇರಿ : ೨೦೦ ಕೂಟಗಾರರು ೩೦೦ ಬೇಡರನ್ನು ನೇಮಿಸಿದ.
- ಕಲಕೇರಿ : ೫೦೦ ಧನಗಾರನ್ನಿಟ್ಟಿದ್ದ.
- ರಾಮಪುರಗೇರಿ: ೮೦೦ ಬೇಡರ ಪಡೆ ಹಾಗೂ ೧೦೦ ಕೂಟಗಾರರ ಪಡೆಯನ್ನಿಟ್ಟ.'[೧೩]

ಈ ಎಲ್ಲಾ ಕೇರಿಗಳಲ್ಲಿ (ಓಣಿ) ಒಂದೊಂದು ಹನುಮಾನ ಮಂದಿರ ಹಾಗೂ ಅಶ್ರುಖಾನಾಗಳನ್ನು ಕಟ್ಟಿಸಿದ. ಊರಿನ ಮಧ್ಯದಲ್ಲಿ ತನ್ನ ಆರಾಧ್ಯ ದೈವ ಗೋಪಾಲನ ಮಂದಿರ ಕಟ್ಟಿಸಿ ಪುಷ್ಕರಣಿಯನ್ನು ತೋಡಿಸಿದ. ಮಂದಿರದ ವ್ಯವಸ್ಥೆಗಾಗಿ ೫ ಗ್ರಾಮಗಳನ್ನು ಅಂದರೆ ಭಾವಗಿರಿ, ಕನಕಗಿರಿ, ಸೆಟ್ಟಾಗಿರಿ, ಹರವಾಳ ಮತ್ತು ಹತ್ತಿಗೂಡೂರ ಜಾಗೀರ ಕೊಡಲಾಯಿತು. ಸೇವೆಗಾಗಿ ೧೨೦ ಜನರನ್ನು ನೇಮಿಸಲಾಯಿತು. ಇವರಲ್ಲಿ ಪೂಜಾರಿ, ಹವಲ್ದಾರ್, ಕುಲಕರ್ಣಿ, ಮುಜಮದಾರ್, ಇಮಾರತಮಲ, ಕಾರಕೂನ, ಕೋರಿಕಾರಕೂನ, ನಗರಿಖಾನಾ ಉಸ್ತುವರಿಗಾಗಿ ಹಾಗೂ ವಿವಿಧ ಕಾರ್ಯಗಳಿಗಾಗಿ ನೇಮಿಸಿ ಅಂದಿನ ಕಾಲದಲ್ಲಿ ದೇವಾಲಯಗಳ ವ್ಯವಸ್ಥೆಗಾಗಿ ಇಂತಹ ಸುಸಜ್ಜಿತ ವ್ಯವಸ್ಥೆ ಮಾಡಿದ್ದನ್ನು ಇದರಿಂದ ಗುರುತಿಸಬಹುದಾಗಿದೆ. ಇದೇ ಸಮಯದಲ್ಲಿ ಇಂದಿಗೂ ನೋಡಲು ಸಿಗುವ ದರಬಾರ ಭವನವನ್ನು (ಹಳೆ ದರಬಾರ) ಕಟ್ಟಿಸಲಾಯಿತು. ಸುರಪುರದ ಈ ಸ್ಥಳಕ್ಕೆ ೭ ಊರಿನ ಸೀಮೆಗಳು ಹತ್ತಿದ್ದು ಒಂದು ವಿಶೇಷತೆ ಅವೆಂದರೆ, ಗೋನಾಲ, ತಳವಾರಗೇರಿ,

ಹಸನಾಪುರ, ಖಾನಾಪುರ, ರುಕ್ಮಾಪುರ, ಕವಡಿಮಟ್ಟಿ, ವನಕಿಹಾಳ ಮತ್ತು ನಾಗಲಾಪುರ ರಾಜನ ದಿವಾನರಾದ ನಿಷ್ಠಿ ಮಲ್ಕಪ್ಪನವರು ಈ ಎಲ್ಲಾ ಅಭಿವೃದ್ಧಿ ಕಾರ್ಯಗಳನ್ನು ಕಾರ್ಯಗತಗೊಳಿಸುವಲ್ಲಿ ಸಕ್ರೀಯವಾಗಿ ಪಾತ್ರವಹಿಸಿ ತುಂಬಾ ದಕ್ಷ ದಿವಾನನೆಂದು ಹೆಸರು ಪಡೆದಿದ್ದರು.

**ಪಾಮ ನಾಯಕ (೧೭೭೬ – ೧೭೪೧)**

ಪಿತಾಂಬರ ಬಹರಿ ಪಿಡ್ಡ ನಾಯಕನ ಮರಣದ ನಂತರ ಹಿರಿಯ ಮಗ ಪಾಮನಾಯಕನು ಸುರಪುರ ಸಂಸ್ಥಾನದ ರಾಜನಾದ. ಈತನು ಮಹಾ ಪರಾಕ್ರಮಿ ರಾಜನಾಗಿದ್ದು, ೪೦,೦೦೦ ಬೇಡರ ಸುಸಜ್ಜಿತ ಪಡೆಯನ್ನು ಹೊಂದಿದ್ದ. ಇದೇ ಸಮಯದಲ್ಲಿ ಸವಾಯಿ ಮಾಧವರಾವ್ ಪೇಶ್ವೆ ೧,೨೫,೦೦೦ ಸೈನ್ಯದೊಂದಿಗೆ ಪಾಮನಾಯಕನೊಂದಿಗೆ ಯುದ್ಧ ಮಾಡಿ ಕೊನೆಗೆ ಯುದ್ಧವು ಒಪ್ಪಂದದಲ್ಲಿ ಮುಕ್ತಾಯವಾಯಿತು. ನಿಜಾಮನ ಆಡಳಿತದಲ್ಲಿದ್ದ ಮುದಗಲ್ಲ ಕಿಲ್ಲೆದಾರ ತೋಪರಡ್ಡಿಯನ್ನು ಆನೆಗುಂದಿಯ ಅರಸು ತಿರುಮಲ ದೇವರಾಯನು ಸೋಲಿಸಿ ಆನೆಗುಂದಿಗೆ ಸೆರೆಹಿಡಿದು ಒಯ್ದನು. ನಿಜಾಮನು ಪಾಮನಾಯಕನಿಗೆ ಆನೆಗುಂದಿ ರಾಜನನ್ನು ಸೆರೆಹಿಡಿದು ತಂದು ಒಪ್ಪಿಸುವಂತೆ ತಿಳಿಸಿದಾಗ ಪಾಮನಾಯಕನು ೨೧ ದಿನ ಯುದ್ಧಮಾಡಿ ರಾಜಾ ತಿರುಮಲದೇವನನ್ನು ಸೆರೆಹಿಡಿದು ಹೈದ್ರಾಬಾದಿಗೆ ಕಳಿಸಿದನು. ನಿಜಾಮ ಸಂತೋಷಪಟ್ಟು ತನ್ನ ಬಲಗಡೆಯ ಕುರ್ಚಿಯನ್ನು ಪಾಮನಾಯಕನಿಗೆ ಕೊಟ್ಟು ಸನ್ಮಾನಿಸಿದ. ಆನೆಗುಂದಿ ಸಂಸ್ಥಾನದಲ್ಲಿದ್ದ ಗಂಗಾವತಿ ಯಲಬುರ್ಗಾಗಳನ್ನು ತನ್ನ ವಶಕ್ಕೆ ತೆಗೆದುಕೊಂಡು ರಾಜನನ್ನು ೧ ವರ್ಷ ಜೈಲಿನಲ್ಲಿಟ್ಟು ನಂತರ ನಿಜಾಮನು ೩ ಲಕ್ಷ ರೂಪಾಯಿ ರೂಸಮ್ ಪಡೆದು ರಾಜನನ್ನು ಬಿಡುಗಡೆ ಮಾಡಿ ಆತನ ಉಪಜೀವನಕ್ಕಾಗಿ ೧೬ ಗ್ರಾಮಗಳನ್ನು ಬಿಟ್ಟು ಮುಂದೆ ನಿಜಾಮನ ಬಗ್ಗೆ ಯಾವುದೇ ವಿರೋಧದ ಚಟುವಟಿಕೆ ನಡೆಸಬಾರದೆಂದು ಷರತ್ತು ಹಾಕಿದ.

ಅಂದು ಕನಕಗಿರಿಯ ರಾಜನಾಗಿದ್ದ ಹಿರೇನಾಯಕ ಮಹಾ ಕ್ರೂರಿಯಾಗಿದ್ದು, ಸ್ತ್ರೀಲಂಪಟನಾಗಿದ್ದ. ಪ್ರಜೆಗಳನ್ನು ಪೀಡಿಸುತ್ತಾ ಹಣ ವಸೂಲಿ ಮಾಡುತ್ತಿದ್ದ. ಈತನ ಸ್ವಾಧೀನದಲ್ಲಿ ಕುಷ್ಟಗಿ, ಸಿಂಧನೂರು, ಗಂಗಾವತಿ, ಹರಿಹರ, ದಾವಣಗೇರಿಗಳಿದ್ದವು. ತನ್ನ ಕಾಮತೃಷೆಗಾಗಿ ಮುಂಡರಗಿ ದೇಸಾಯಿಯ ಮಗಳನ್ನು ಹಾಗೂ ಬಾದುರ ಬಂಟ ದೇಸಾಯಿಯ ಪತ್ನಿಯನ್ನು ಅಪಹರಿಸಿದ್ದನು. ಈ ಎಲ್ಲಾ ಸಮಾಚಾರಗಳು ನಿಜಾಮನಿಗೆ ತಲುಪಿದಾಗ ನಿಜಾಮರ ಮಂತ್ರಿ ಮೀರ್ ಆಲಮ್ ಪಾಮನಾಯಕರಿಗೆ ತಕ್ಷಣ ಅವನನ್ನು ಹಿಡಿದು ಬಂದಿಯಾಗಿ ತರಬೇಕೆಂದು ಹಾಗೂ ಆತನ ಹಳ್ಳಿಗಳನ್ನು ಜಪ್ತ ಮಾಡಲು ತಿಳಿಸಿದಂತೆ ಪಾಮನಾಯಕನು ೪೦,೦೦೦ ಸೈನ್ಯದೊಂದಿಗೆ ಕನಕಗಿರಿಗೆ ಹೋಗಿ ೩ ತಿಂಗಳು ಯುದ್ಧ ಮಾಡಿ ತನ್ನ ೭,೦೦೦ ಸೈನಿಕರನ್ನು ಹಾಗೂ ತನ್ನ ಅಳಿಯ ದೇವದುರ್ಗದ

ರಾಜ ಕೃಷ್ಣಪ್ಪ ನಾಯಕ ಹಾಗೂ ಇಬ್ಬರೂ ಸೇನಾಪತಿಗಳಾದ ಕೋಶಾಲಪ್ಪ ಸರನೌಬತ್ತ, ಕುಂಜನಾರಾಯಣ ಗುರೆಕಾರರನ್ನು ಕಳೆದುಕೊಂಡ. ಈ ಸುದ್ದಿ ನಿಜಾಮನಿಗೆ ಮುಟ್ಟಿದ ಕೂಡಲೇ ೨ ಲಕ್ಷ ಹಣ ಹಾಗೂ ತನ್ನ ೧೦,೦೦೦ ಸೈನಿಕರನ್ನು ಕಳಿಸಿದ. ಮತ್ತೆ ೯ ದಿನಗಳವರೆಗೆ ಯುದ್ಧ ಮುಂದುವರೆದರೂ ಹಿರೇನಾಯಕ ಬಂದಿಯಾಗಲಿಲ್ಲ. ಆಗ ಪಾಮನಾಯಕನ ಕೂಟಗಾರ ಯೋಧರು ನಮಗೆ ಆತನನ್ನು ಹಿಡಿಯಲು ಪರವಾನಗಿ ಕೊಡೆಂದು ವಿನಂತಿಸಿದಾಗ ರಾಜನು ಸಮ್ಮತಿಸಿದ. ಅಂದೇ ರಾತ್ರಿ ನಶೆಯಲ್ಲಿದ್ದ ಹಿರೆನಾಯಕನನ್ನು ಬಂಧಿಸಿ ಸರಪಳಿಯಿಂದ ಬಿಗಿದು ಹೈದ್ರಾಬಾದಕ್ಕೆ ಕಳಿಸಲಾಯಿತು. ನಿಜಾಮನು ಆತನ ಎಲ್ಲಾ ಜಾಗಿರನ್ನು ಜಪ್ತಿ ಮಾಡಿ ಕನಕಗಿರಿಯನ್ನು ಪಾಮನಾಯಕನಿಗೆ ಒಪ್ಪಿಸಿದ. ಪಾಮನಾಯಕ ನಿಜಾಮನ ವಿಶೇಷ ಆಮಂತ್ರಣದ ಮೇರೆಗೆ ಹೈದ್ರಾಬಾದ ತಲುಪಿದ. ನಿಜಾಮನು ಹಿರೇನಾಯಕನನ್ನು ತೋಪಿನಿಂದ ಹಾರಿಸಲು ಪಾಮನಾಯಕನಿಗೆ ತಿಳಿಸಿದಾಗ ಹಿರೇನಾಯಕ ತನ್ನ ಸಂಬಂಧಿ, ನಾನು ಈ ಕೆಲಸ ಮಾಡುವುದಿಲ್ಲ ಎಂದಾಗ ತೋಪಿನ ಅಧಿಕಾರಿಗಳು ತೋಪನ್ನು ಹಾರಿಸಿದರೂ ಮೂರು ಸಲ ಅದು ಹಾರಲಿಲ್ಲ. ಆಗ ಪಾಮನಾಯಕ ಹಿರೇನಾಯಕನ ಕೊರಳಲ್ಲಿದ್ದ ತಾಯಿತವನ್ನು ತೆಗೆದು ಹಾರಿಸಿ ಎಂದಾಗ ಅದನ್ನು ತೆಗೆದು ಹಾರಿಸಿದಾಗ ತೋಪ್ ಹಾರಿ ದೇಹವು ಚೂರು ಚೂರಾಗಿ ಬಿತ್ತು. ಪಾಮನಾಯಕನ ಈ ಶೌರ್ಯಕ್ಕಾಗಿ ನಿಜಾಮನ ದರಬಾರದಲ್ಲಿ ಯಾವ ದ್ವಾರಪಾಲಕರು ಸುರಪುರದ ರಾಜನನ್ನು ತಡೆಯಬಾರದೆಂದು ಬರೆದು ಸನ್ನದು ನೀಡಿದ್ದ. ಹಾಗೂ ಯುದ್ಧದ ಖರ್ಚೆಂದು ರುಸಮ್ಮನ್ನು ಸುರಪುರದ ಸೈನಿಕರು ಹೈದ್ರಾಬಾದ ತಲುಪಿದ ದಿನದಿಂದಲೇ ಭತ್ತ ಪಡೆಯುವ ವಿಶೇಷ ಸವಲತ್ತನ್ನು ನೀಡಲಾಯಿತು. ಪಾಮನಾಯಕನು ಅತ್ಯಂತ ದಕ್ಷತೆಯಿಂದ ೧೪ ವರ್ಷ ರಾಜ್ಯಭಾರವನ್ನು ಮಾಡಿ ೧೭೪೧ರಲ್ಲಿ ಮರಣ ಹೊಂದಿದ.

**ರಾಜಾ ಪಿಡ್ಡನಾಯಕ (೧೭೪೧ ರಿಂದ ೧೭೪೬)**

ಇಮ್ಮಡಿ ಪಾಮನಾಯಕನ ಮರಣದ ನಂತರದಲ್ಲಿ ಅವರ ಹಿರಿಯ ಮಗನಾದ ಪಿಡ್ಡನಾಯಕನು ಸುರಪುರ ಸಂಸ್ಥಾನದ ರಾಜನಾದ. ಈ ಮುಮ್ಮಡಿ ಪಿಡ್ಡನಾಯಕನು ೪ ವರ್ಷ ರಾಜ್ಯವಾಳಿದ. ಈತನ ಕಾಲದಲ್ಲಿ ಅಂತಹ ಮಹತ್ವದ ಘಟನೆಗಳೇನೂ ನಡೆಯಲಿಲ್ಲ. ರಾಜನು ಪ್ರಜಾ ಪ್ರೇಮಿಯಾಗಿದ್ದು, ಒಳ್ಳೆಯ ಆಡಳಿತ ನಡೆಸಿ ವನದುರ್ಗದಲ್ಲಿ ಕೋಟೆ ಕಟ್ಟಿಸಿ, ಸಂಸ್ಥಾನದ ಸುರಕ್ಷತೆಗೆ ಭದ್ರ ಬುನಾದಿಯನ್ನು ಹಾಕಿ ೧೭೪೬ರಲ್ಲಿ ಮರಣಹೊಂದಿದ.

**ಮಂಡಗೈ ವೆಂಕಟಪ್ಪ ನಾಯಕ (೧೭೪೭ ರಿಂದ ೧೭೫೨)**

ಮುಮ್ಮಡಿ ಪಿಡ್ಡನಾಯಕನಿಗೆ ಮಕ್ಕಳಿಲ್ಲದ್ದರಿಂದ ಆತನ ತಮ್ಮನಾದ ವೆಂಕಟಪ್ಪನಾಯಕನು ಸಂಸ್ಥಾನದ ಗದ್ದುಗೆಯನ್ನೇರಿದ. ಈತನ ಎಡ ಮುಂಗೈ ಕತ್ತರಿಸಿದ್ದರಿಂದ ಈ ರಾಜನಿಗೆ

ಮುಂಡಗೈ ವೆಂಕಟಪ್ಪ ನಾಯಕನೆಂದು ಹೆಸರು ರೂಢಿಯಾಯಿತು. ಈತನು ತನ್ನ ಕೈಗೆ ಒಂದು ಕಬ್ಬಿಣದ ಮುಂಗೈಯನ್ನು ಮಾಡಿಸಿಕೊಂಡಿದ್ದು, ಅದು ಇಂದಿಗೂ ಇವರ ವಂಶಜರಲ್ಲಿ ನೋಡಲು ಸಿಗುತ್ತದೆ. ಇದರಿಂದ ರಾಜನು ಮೊಂಡಗೈಯವನು ಎಂಬಲ್ಲಿ ಯಾವ ಸಂಶಯವಿಲ್ಲ. ಈ ಕಬ್ಬಿಣದ ಅಪ್ಪುಗೆಗೆ ಹಸ್ತ ಮತ್ತು ಐದು ಬೆರಳುಗಳಿವೆ. ಈ ಕಬ್ಬಿಣದ ಕೈಯಿಂದ ಢಾಲು ಹಿಡಿದರೆ ಹಸ್ತದ ಬೆರಳುಗಳು ತಾನಾಗಿಯೇ ಮಣಿದು ಢಾಲನ್ನು ಹಿಡಿತವಾಗಿ ಹಿಡಿದುಕೊಳ್ಳುವವು. ಇಂತಹ ಅಪ್ಪುಗೆಯನ್ನು ಆ ಕಾಲದಲ್ಲೇ ಮಾಡಿದವನ ಬುದ್ಧಿ, ಕೌಶಲ್ಯವನ್ನು ಮೆಚ್ಚಲೇ ಬೇಕು. ಕೈ ಕಡಿದು ಹೋದ ವಿಚಾರದಲ್ಲಿ ಹೇಳುವ ಕಥೆ ಹೀಗಿದೆ. ಒಬ್ಬ ಮುಸಲ್ಮಾನ ಸರದಾರನಿಗೆ ಮತ್ತು ರಾಜನಿಗೆ ಸರದಾರನಿಗೆ ಚಾಲಕ್ ಕುದುರೆಯ ಬಗ್ಗೆ ಬಾಜಿಯಾಗಿ ಅದನ್ನು ತೆಗೆದುಕೊಂಡು ಹೋಗುವುದಾಗಿ ವೆಂಕಟಪ್ಪ ನಾಯಕರು ಪಂದ್ಯ ಕಟ್ಟಿದರು. ಸರದಾರನು ಕುದುರೆಯನ್ನು ವಿಶೇಷ ಪಹರೆಯಲ್ಲಿಟ್ಟ, ಒಂದು ದಿನ ರಾತ್ರಿ ಕುದುರೆಯನ್ನು ತರಲುಹೋಗಿ, ಅದರ ಮುಂದಿನ ಮೇವಿನಲ್ಲಿ ನಿಧಾನವಾಗಿ ತೂರಿಕೊಂಡು ಕಾವಲುಗಾರರಿಗೆ ಕಾಣದ ಹಾಗೆ ಅದರ ಗೂಟವನ್ನು ಕಿತ್ತಿದ. ಆಗ ಕುದುರೆ ಬೆದರಿದ್ದನ್ನು ಕಂಡು, ಕಾವಲುಗಾರ ನೋಡಿದಾಗ ಆದರ ಗೂಟವನ್ನು ಕಿತ್ತಿದ್ದು ಕಂಡುಬಂತು. ತಕ್ಷಣವೇ ಕಾವಲುಗಾರನು ಗೂಟವನ್ನು ಹಾಗೇ ನೆಲದಲ್ಲಿ ಜೋರಾಗಿ ಬಡಿದ. ಕಸದಲ್ಲಿ ಅಡಗಿದ್ದ ವೆಂಕಟಪ್ಪನಾಯಕನ ಕೈಯಲ್ಲಿ ಗೂಟ ಹೋಗಿ ನೆಲದಲ್ಲಿಳಿಯಿತು. ಕಾವಲುಗಾರರು ಮಲಗಿದ ನಂತರ ತನ್ನ ಕೈಯನ್ನೇ ಕಡಿದುಕೊಂಡು ಕುದುರಯನ್ನು ತಂದು ಬಾಜಿ ಗೆದ್ದನಂತೆ.

ರಾಜನು ಮಹಾಧರ್ಮಿಷ್ಠನಿದ್ದು, ವೆಂಕಟರಮಣನ ಭಕ್ತನಾಗಿದ್ದು ಕರಡಕಲ್‌ನಲ್ಲಿ ಗೋಪಾಲಸ್ವಾಮಿ ಗುಡಿ ಕಟ್ಟಿಸಿ, ಅದರ ವ್ಯವಸ್ಥೆಗಾಗಿ ೬೦ ಬಿಗೆ ಜಮೀನನ್ನು ಹಾಗೂ ಪ್ರತಿವರ್ಷ ಶ್ರಾವಣದಲ್ಲಿ ಜಾತ್ರೆ ನಡೆಯಲು ೧೧೦ ರೂ. ದೇಣಿಗೆಯನ್ನು ನೀಡಿದ. ಇದೇ ರೀತಿ ಮುದನೂರಲ್ಲೂ ಗೋಪಾಲಸ್ವಾಮಿ ಮಂದಿರ ಕಟ್ಟಿಸಿ ೧೧೦ ಬಿಗೆ ಜಮೀನನ್ನು ವ್ಯವಸ್ಥೆಗಾಗಿ ಪೂಜಾರಿಗೆ ಇನಾಮ ಹಾಕಿಕೊಟ್ಟದ್ದಲ್ಲದೇ, ಪ್ರತಿವರ್ಷ ಶ್ರಾವಣದಲ್ಲಿ ಜಾತ್ರೆ ನಡೆಸಲು ೧೧೦ ರೂ. ಖಜಾನೆಯಿಂದ ಕೊಡಲು ಆಜ್ಞೆ ಮಾಡಿದ. ಆಶ್ಚರ್ಯವೆಂದರೆ ಇಲ್ಲಿಯ ಅಂತರ್ಜಲವನ್ನು ಗುರುತಿಸಿ, ಪ್ರಸಿದ್ಧವಾದ ರಾಮತೀರ್ಥ ಹಾಗೂ ಲಕ್ಷ್ಮಣ ತೀರ್ಥಗಳನ್ನು ಕಟ್ಟಿಸಿ ರೈತರ ಜಮೀನುಗಳಿಗೆ ಸದಾ ನೀರು ಹರಿಯುವ ಹಾಗೇ ವ್ಯವಸ್ಥೆಗೊಳಿಸಿ ಜನತೆಯ ವಿಶ್ವಾಸಕ್ಕೆ ಪಾತ್ರನಾದ. ಇನೇ ಗೋಪಾಲಸ್ವಾಮಿ ಮಂದಿರವನ್ನು ಮುಡಬುಳದಲ್ಲಿ ಕಟ್ಟಿಸಿ ಅಲ್ಲಿಯೂ ೬೦ ಬಿಗೆ ಜಮೀನನ್ನು ಪೂಜಾರಿಗೆ ಹಾಗೂ ಶ್ರಾವಣದಲ್ಲಿ ಪ್ರತಿವರ್ಷ ಜಾತ್ರೆ ನಡೆಯಲು ೧೨೦ ರೂ. ಖಜಾನೆಯಿಂದ ಕೊಡಲು ಆದೇಶಿಸಿದ. ತನ್ನ ತಾಯಂದಿರ ಹೆಸರಿಂದ ಸತ್ಯಂಪೇಟ ಹಾಗೂ ರುಕ್ಮಾಪುರ ಗ್ರಾಮಗಳನ್ನು ಅಭಿವೃದ್ಧಿಗೊಳಿಸಿದ. ಈತನ

ಶೌರ್ಯ ಸಾಹಸಕ್ಕಾಗಿ ಈತನು "ವಾಲ್ಮೀಕಾಧೀಶ"ನೆಂದು, ನಿಜಾಮನ ಬಲಗಡೆ ಕೂಡುವ ವಿಶೇಷ ಮರ್ಯಾದೆ ಪಡೆದದ್ದೇ ಅಲ್ಲದೆ ಹಲವಾರು ಬಗೆಯ ಗೌರವಕ್ಕೆ ಪಾತ್ರನಾಗಿದ್ದ. ಈತನ ಕಾಲದ ಅವಿಸ್ಮರಣೀಯ ಘಟನೆಯೆಂದರೆ ಪ್ರಸಿದ್ಧವಾದ ಪುದುಚೇರಿ ಕಾಳಗ. ಇಂದಿನ ಪಾಂಡಿಚೇರಿಯು ಅಂದು ಅತಿ ಬಲಿಷ್ಠವು ಉನ್ನತವೂ ಆದ ಅಭೇದ್ಯವಾದ ಕೋಟೆಯಾಗಿತ್ತು. ಅದರ ಸುತ್ತಲೂ ಆಳ ಅಗಲ ಕಂದಕಗಳು ಇದ್ದು ಅವು ಯಾವಾಗಲೂ ನೀರಿನಿಂದ ತುಂಬಿರುತ್ತಿದ್ದವು. ಆ ಕೋಟೆಗೆ ೫೬ ಹುಡೆಗಳು ಇದ್ದು ಒಂದು ಒಂದು ಹುಡೆಗಳ ಮೇಲೆ ಬೆಂಕಿಯನ್ನು ಕಾರಿ ನರಕ ಕುಂಡವನ್ನು ನಿರ್ಮಿಸಬಲ್ಲ ಒಂದೊಂದು ತೋಪನ್ನು ಏರಿಸಿದ್ದರು. ಕೋಟೆಯಲ್ಲಿ ಸೈನಿಕರ ೩೦ ಚೌಕಿಗಳು ಇದ್ದು ಒಂದೊಂದು ಚೌಕಿಗಳಲ್ಲಿ ಕೋಟೆಯ ಮುತ್ತಿಗೆಯನ್ನು ಮೊದಲೇ ಗುರುತಿಸಿ ಸುತ್ತ ಪ್ರದೇಶದ ಕೆರೆ ಬಾವಿಗಳ ನೀರನ್ನು ಮೊದಲೇ ಬತ್ತಿಸುತ್ತಿದ್ದರು. ಈ ಕೋಟೆಯನ್ನು ಮಹಾ ಸಾಹಸಿಗಳಾದ ಯುಂತ್ರ ವಿದ್ಯೆ ಕುಶಲರಾದ ದ್ವೀಪಾಂತರದಿಂದ ಬಂದ ತಾಮ್ರ ಮುಖಿಗಳಾದ ಫ್ರೆಂಚರು ತಮ್ಮ ವಶದಲಿಟ್ಟುಕೊಂಡಿದ್ದರು. ಹೈದ್ರಾಬಾದ ನಿಜಾಮನ ಸಂಬಂಧಿಕ ಮುಜಫರಜಂಗ ಹಾಗೂ ಚಂದಾ ಸಾಹೇಬರು ಹೇಗಾದರೂ ಮಾಡಿ ಹೈದ್ರಾಬಾದ ವಶಪಡಿಸಿಕೊಳ್ಳುವ ದುರುದ್ದೇಶದಿಂದ ಫ್ರೆಂಚರ ಜೊತೆ ಮೈತ್ರಿ ಬೆಳೆಸಿಕೊಂಡರು. ಇದನ್ನು ಅರಿತ ಹೈದ್ರಾಬಾದ ನಿಜಾಮ ನಾಸರಜಂಗ, ಕರ್ನೂಲದ ಹಿಮ್ಮತ್ ಖಾನ, ಸವಣೂರಿನಲ್ಲಿ ಅಬ್ದುಲ್ ಕರೀಮ್ ಖಾನ್, ಕಡಪದ ಮಾದಿಮಯ್ಯ ಮುಂತಾದ ಮಾಂಡಲಿಕರನ್ನು ತನ್ನ ಜೊತೆಗೆ ಸೇರಿಸಿಕೊಂಡಿದ್ದಲ್ಲದೇ ಇಂಗ್ಲೀಷರನ್ನು ತನ್ನ ಜೊತೆಗೆ ಕೂಡಿಸಿಕೊಂಡು ಈ ದುರ್ಗದ ಮೇಲೆ ಆಕ್ರಮಣ ಮಾಡಿ ತಿಂಗಳುಗಟ್ಟಲೆ ಕೋಟೆ ಸುತ್ತುವರೆದು ಕುಳಿತರು. ನಿಜಾಮ ಮತ್ತು ಬ್ರಿಟೀಷ ಸೈನಿಕರಿಗೆ ಕೋಟೆಯ ಮೇಲೆ ಆಕ್ರಮಣ ಮಾಡಲು ಸಾಧ್ಯವಾಗಲಿಲ್ಲ. ಕಾರಣ ಕೋಟೆಯ ಮೇಲಿನ ತೋಪುಗಳು ಸದಾ ಗರ್ಜಿಸುತ್ತಿದ್ದವು.

ನಾಸರ್‌ಜಂಗ್‌ನ ಸೈನ್ಯ ೧ ಲಕ್ಷ ಇದ್ದು ಈಗಾಗಲೇ ೩೨ ಸಾವಿರ ಸೈನ್ಯ ೯ ದಿನಗಳ ಯುದ್ಧದಲ್ಲಿ ಕಳೆದು ಕೊಂಡದ್ದಲ್ಲದೆ, ಬ್ರಿಟೀಷರ ಯುದ್ಧ ಕೌಶಲ್ಯವು ಅವರ ತೋಪುಗಳು ಯಾವುದೇ ಕೆಲಸಕ್ಕೆ ಬಾರದೇ ಇದ್ದಾಗ ತನ್ನ ಆಪ್ತರ ಸಲಹೆಯಂತೆ ಸುರಪುರ ವೆಂಕಟಪ್ಪ ನಾಯಕನನ್ನು ಸಹಾಯಕ್ಕಾಗಿ ಬರಲು ಆಮಂತ್ರಣ ಕಳಿಸಿದ ಸಮಾಚಾರವು ಸುರಪುರಕ್ಕೆ ಮುಟ್ಟಿ ವೆಂಕಟಪ್ಪ ನಾಯಕ ಸಹಾಯಕ್ಕಾಗಿ ಬರಲು ಒಪ್ಪಿಕೊಂಡ.

ಆದರೆ ಷರತ್ತು ಮುಂದಿಟ್ಟ ಮೊದಲನೆಯದು ಸುರಪುರ ಬಿಟ್ಟಂದಿನಿಂದ ತಿರುಗಿ ಸುರಪುರ ಮುಟ್ಟುವವರೆಗೆ ಸೈನ್ಯದ ಸಂಪೂರ್ಣ ಖರ್ಚನ್ನು ನಾಸರಜಂಗ ವಹಿಸತಕ್ಕದ್ದು. ಎರಡನೆಯದು ಸುರಪುರದವರು ಏಕಾಂಗಿಯಾಗಿ ಯುದ್ಧ ಮಾಡುವರು. ಅವರು ಯುದ್ಧ

ಮಾಡುವಾಗ ಇತರರು ಯಾರೂ ಯುದ್ಧದಲ್ಲಿ ಸೇರಬಾರದು. ಈ ಷರತ್ತಿನಿಂದ ನಾಸರಜಂಗನು ಮನಸ್ಸಿನಲ್ಲಿ ಅವಮಾನಿತರಾದರೂ ಕೂಡಾ ಅನಿವಾರ್ಯವಾಗಿ ಎರಡೂ ಷರತ್ತುಗಳನ್ನು ಒಪ್ಪಿದ. ಅರಸು ೧೨ ಸಾವಿರ ಆಯ್ದ ಬೇಡರ ಪಡೆ ಮತ್ತು ವಿಶೇಷವಾದ ೯೦೦ ಕೂಟಗಾರರನ್ನು ಹೊಂದಿದ್ದ. ಇವರು ಹೊಲೆಯ ಜಾತಿಯವರಾಗಿದ್ದು ಪ್ರತಿಯೊಬ್ಬರಲ್ಲಿ ಒಂದೊಂದು ಉಡವು, ಅದಕ್ಕೆ ಕಟ್ಟುವ ರೇಷ್ಮೆ ಹಗ್ಗಗಳು, ಹಾಗೂ ಮರಗಾಲುಗಳು ಇರುತ್ತಿದ್ದವು. ಅಗಲವಾದ ಕತ್ತಿ, ಖಡ್ಗ ದೊರೆಯಿಂದಲೇ ಪಡೆಯುತ್ತಿದ್ದರು. ಇವರ ಮೇಲೆ ಯಾವ ಸರಕಾರದ ಅಧಿಕಾರ ಇರಲಿಲ್ಲ. ಇವರೆಲ್ಲರೂ ರಾಜನಿಗೆ ನೇರ ಅಧೀನರು. ಯುದ್ಧ ಕಾಲದಲ್ಲಿ ರಾಜನ ಸುತ್ತ ಮುತ್ತ ಇದ್ದು ತಮ್ಮ ಭಲ್ಲೆಗಳನ್ನು ರಾಜನ ಮೇಲೆ ಹಿಡಿದು ಅಂಗ ರಕ್ಷಣೆ ಮಾಡುತ್ತಿದ್ದರು. ಇವರೇ ಇಂದಿನ ಕಮಾಂಡೋಗಳು. ಸುರಪುರದಲ್ಲಿ ಬರಲು ಇವರಿಗೆ ನಿರ್ಬಂಧವಿತ್ತು. ಇವರಿಂದ ಊರ ಜನರಿಗೆ ಉಪಟಳವಾಗಬಾರದೆಂದು ಬಿಚ್ಚುಗತ್ತಿಯ ಬೇಡರ ಪಡೆಯು ಯಾವಾಗಲೂ ಇವರನ್ನು ಯುದ್ಧದಲ್ಲಿ ಒಂದೊಂದು ಕೈಯಿಂದ ಒಬ್ಬೊಬ್ಬರನ್ನು ಹಿಡಿದು ತಲೆ ಕತ್ತರಿಸಿ ತಲೆ ಬುರುಡೆಗಳನ್ನು ಒಡೆದು ಮುಂದೆ ಸಾಗುತ್ತಿದ್ದರು. ಇವರು ರಾಜನ ಪ್ರಾಣ ಸಂಗಾತಿಗಳು ಆಗಿದ್ದರು. ಇಂಥ ಅಪ್ರತಿಮ ಸೈನ್ಯದೊಂದಿಗೆ ಅರಸು ಪಾಂಡಿಚೇರಿ ತಲುಪಿದ. ತಾನು ಪಾಂಡಿಚೇರಿಗೆ ಹೋಗುವಾಗ ತನ್ನ ಕಕ್ಕನ ಮಗನಾದ ರಮಣಪ್ಪ ನಾಯಕನಿಗೆ ಸಂಸ್ಥಾನದ ಕಾರುಬಾರುಗಳನ್ನು ನೋಡಿಕೊಳ್ಳಲು ನೇಮಿಸಿದ. ಪಾಂಡಿಚೇರಿ ತಲುಪಿದ ಒಂದೆರಡು ದಿವಸ ಯಾರೂ ಇವರನ್ನು ಕರೆಯಲಿಲ್ಲ. ಪರಿಸ್ಥಿತಿ ವಿಕೋಪಕ್ಕೆ ಹೋಗುವುದನ್ನು ಕಂಡು ನಾಸರಜಂಗನ ತಮ್ಮ ಸಲಾಬತ್ ಜಂಗ್ ವೆಂಕಟಪ್ಪ ನಾಯಕನಿಗೆ ನಾಳೆಯಿಂದಲೇ ನೀವು ಯುದ್ಧ ಮಾಡಬೇಕೆಂದು ವಿವರಿಸಿದ. ನಾವು ಯುದ್ಧ ಕಾರ್ಯನಿರ್ವಹಿಸಿಕೊಳ್ಳುವ ಮೊದಲು ನಮ್ಮ ನಿಮ್ಮ ಕರಾರಿನಂತೆ ನಿಮ್ಮವರು ಯಾರೂ ಯುದ್ಧದಲ್ಲಿ ಭಾಗವಹಿಸಕೂಡದೆಂದು ಹೇಳಿದ. ಅಂದರೆ ಕಿಲ್ಲೆಯನ್ನು ಗೆಲ್ಲುವೆವು. ಇಲ್ಲವೇ ಸಾಯುವೆನು ಎಂದು ನುಡಿದ ನಾಯಕ ಯುದ್ಧ ಪೂರ್ವ ತಯಾರಿಗಾಗಿ ಎರಡು ದಿವಸ ಬೇಕೆಂದು ಮಾರನೆಯ ದಿನ ಯುದ್ಧ ಪ್ರಾರಂಭ ಮಾಡುವುದಾಗಿ ಹೇಳಿ ತಮ್ಮ ಛಾವಣಿಗೆ ಹಿಂದಿರುಗಿದ.

ಅದೇ ದಿನ ರಾತ್ರಿ ತನ್ನೆಲ್ಲ ಸೈನಿಕ ಪ್ರಮುಖರನ್ನು ಕೂಡಿ ಆಲೋಚನೆ ನಡೆಸಿದ. ಅದರಲ್ಲಿ ತಳ್ಳಳ್ಳಿ ಮಲ್ಲಪ್ಪ, ಚತ್ತಿಯ ದಂಡಪ್ಪ, ಸರ್ನೌಬತ್ ಸರಹವಾಲ್ದಾರ, ಗುರಿಕಾರ, ಮುಂತಾದ ಎಲ್ಲಾ ಸೇನಾ ನಾಯಕರು ಭಾಗವಹಿಸಿದ್ದರು. ಎರಡು ದಿನದ ಅವಧಿಯಲ್ಲಿ ಕಿಲ್ಲೆಯ ಮರ್ಮಸ್ಥಳವನ್ನು ಅರಿತುಕೊಳ್ಳಲು ಕೂಟಗಾರರನ್ನು ಕಳುಹಿಸಿದರೆ ಇತರರು ಎರಡು ದಿನ ತಿರುಗಾಡಿ ಕಣಕಿಯ ಹೊರೆಗಳನ್ನು ತಯಾರು ಮಾಡಿದರು. ನಿಜಾಮನ ಸೈನ್ಯಕ್ಕೆ ಸಂಕೇತ ಮಾಡಿದ ಸ್ಥಳದಿಂದ ಸೂಚನೆಯ ಪ್ರಕಾರ ತೋಪುಗಳನ್ನು ಹಾರಿಸಲು

ಆದೇಶಿಸಿದ. ಕೂಟಗಾರರು ಕಣಕಿಯ ಹೊರೆಗಳನ್ನು ತಮ್ಮ ಬೆನ್ನ ಮೇಲೆ ಕಟ್ಟಿಕೊಂಡು ಕಂದಕದ ನೀರಿನಲ್ಲಿ ತೇಲಿ ಬೀಳಬೇಕು. ಸೈನ್ಯವು ಅವರ ಮೇಲಿಂದ ವೈರಿಗಳ ತೋಪುಗಳನ್ನು ಲೆಕ್ಕಿಸದೇ ಕಂದಕವನ್ನು ಕ್ಷಣಾರ್ಧದಲ್ಲಿ ದಾಟಬೇಕೆಂದು ಗೊತ್ತು ಮಾಡಿಕೊಂಡರು. ಮಾರನೆಯ ದಿನ ರಾತ್ರಿಯಲ್ಲಿ ಸುರಪುರದ ಎಲ್ಲಾ ಸೈನಿಕರು ಅಲ್ಪಹಾರ ಮುಗಿಸಿಕೊಂಡು ಕೆಲವು ಜನ ಕೂಟಗಾರರು ರೇಷ್ಮೆಯ ಹಗ್ಗಗಳಿಂದ ಕಟ್ಟಿದ ಉಡುವುಗಳನ್ನು ತೆಗೆದುಕೊಂಡು ಹೊರಟರು. ಕೋಟೆಯ ಹಿಂದಿನ ಭಾಗದ ಕಂದಕವನ್ನು ಮುಟ್ಟುವಷ್ಟರಲ್ಲಿ ಕೋಟೆಯ ಮುಂಭಾಗದಲ್ಲಿದ್ದ ನಿಜಾಮರ ಪಾಳೆಯವರು ತೋಪುಗಳನ್ನು ಹಾರಿಸತೊಡಗಿದರು. ಕೋಟೆಯವರ ಲಕ್ಷ್ಯ ಹಾರುವ ತೋಪುಗಳ ಕಡೆ ತಮ್ಮ ಉಡುವಿನ ಸಹಾಯದಿಂದ ಮರಗಾಲಿನಿಂದ ಕಿಲ್ಲೆಯ ಕೋಟೆಯ ಗೋಡೆಯನ್ನು ಏರಲು ಆರಂಭಿಸಿದರು. ಉಳಿದ ಕೂಟಗಾರರು ಕಣಕಿಯ ಹೊರೆಯನ್ನು ಕಟ್ಟಿಕೊಂಡು ಕಂದಕದ ನೀರಿನಲ್ಲಿ ತೇಲಿ ಬಿದ್ದು ಮಾನವ ಸೇತುವೆ ನಿರ್ಮಿಸಿ ವೆಂಕಟರಮಣನ ಹೆಸರಿನಿಂದ ಸೈನ್ಯವು ಜಯಘೋಷ ಪ್ರಾರಂಭಿಸಿತ್ತು. ಈ ರೀತಿಯಲ್ಲಿ ಕೋಟೆಯ ನಾಲ್ಕೂ ಕಡೆ ಗದ್ದಲ ಎದ್ದಿತು. ಈ ಗದ್ದಲದ ಸಮಯವನ್ನು ಸಾಧಿಸಿ ಕೂಟಗಾರರು ಹೇಗೋ ತಪ್ಪಿಸಿಕೊಂಡು ಕೋಟೆ ಗೋಡೆಯನ್ನು ಏರಿ ಒಳಗೆ ಕಾವಲುಗಾರರ ಕಣ್ಣು ತಪ್ಪಿಸಿ ಮದ್ದಿನ ಮನೆಗೆ ಬೆಂಕಿ ಹಚ್ಚಿದಾಗ ಸಿಡಿಲು ಗರ್ಜನೆಯಾಗಿ ಎಷ್ಟೋ ಜನರು ಕ್ಷಣಾರ್ಧದಲ್ಲಿ ಮಡಿದರು. ಅದರಲ್ಲಿ ಕೂಟಗಾರರೂ ಸೇರಿದ್ದರು. ಇಷ್ಟಾದರೂ ಫ್ರೆಂಚರ ಧೈರ್ಯ ಕುಂದಲಿಲ್ಲ. ಇಷ್ಟರಲ್ಲಿ ಬೆಳಗಾಯಿತು. ಕೋಟೆಯಿಂದ ಬಿಟ್ಟು ಬಿಡದ ತೋಪುಗಳ ನಿರಂತರ ಗುಂಡಿನ ಮಳೆ ಸುರಿಯ ಹತ್ತಿತು. ಎಷ್ಟು ಪ್ರಯತ್ನ ಪಟ್ಟರೂ ಕಂದಕದ ಸಮೀಪಕ್ಕೆ ಬೇಡರ ಪಡೆಗೆ ಹೋಗಲು ಆಗಲಿಲ್ಲ. ಬಿಸಿಲೇರುತ್ತಾ ಬಂತು. ಈ ಕೋಲಾಹಲದಲ್ಲಿ ತನ್ನ ಜೀವದ ಜೀವವಾದ ಕೂಟಗಾರರು ವ್ಯರ್ಥವಾಗಿ ಸಾಯುವವರೆಂದು ತಿಳಿದು ವೆಂಕಟಪ್ಪ ನಾಯಕ ಜೀವದ ಆಸೆ ತೊರೆದು ತೋಪುಗಳ ಗುಂಡಿನ ಹೊಡೆತವನ್ನು ಲೆಕ್ಕಿಸದೇ ತಾನೇ ಸ್ವತಃ ಮುಂದಾಗಿ ಧುಮುಕಿದ. ತಮ್ಮ ರಾಜನು ಈ ರೀತಿ ಮುನ್ನುಗ್ಗುವುದನ್ನು ನೋಡಿ ಬೇಡ ಪಡೆಗೆ ಆನೆ ಶಕ್ತಿ ಬಂದಿತು. ಈ ಹೋರಾಟದ ಬಗ್ಗೆ ಜನಪದ ಕವಿಯ ವರ್ಣನೆ ಹೀಗಿದೆ

"ಗುಂಡಿಗಂಜದೆ ವೆಂಕಟೇಂದ್ರನು

ತುಂಡುಗಡಿದನು, ತಾಮ್ರ ಮುಖರನು

ದಂಡ, ಧರನಂದದಲಿ, ವರಕೋದಂಡ, ರುದ್ರನೊಲು

ಚಂಡತರ, ಮಾರ್ತಾಂಡನೆಗೆ, ರಣ ಮಂಡಲದಿ,

ಅರಿಗಡಣ, ರುಂಡವ ಚಂಡನಾಡಿನ ಬಹರಿ ವೆಂಕಟ ಮಂಡಲಾಧಿಪನು"[೧೪]

ತೋಪಿನ ಹೊಡೆತನದಿಂದ ಸುರಪುರದ ಸೈನ್ಯ ಹೆಜ್ಜೆ ಹೆಜ್ಜೆಗೂ ಸಿಡಿದು ಬೀಳುತ್ತಿದ್ದರು. ಯಾವ ಸೈನಿಕರ ದೃಷ್ಟಿಯೂ ಅತ್ತ ಹರಿಯದೆ ಕೇವಲ ಕಂದಕದ ಕಡೆ ಮಾತ್ರ ಇತ್ತು. ಮಧ್ಯಾಹ್ನದವರೆಗೆ ಒಬ್ಬರನ್ನೊಬ್ಬರು ಸಾಲು ಹಿಡಿದ ತಮ್ಮ ಕಣಕಿಯ ಹೊರೆಗಳ ಕೆಳಗೆ ನೀರೊಳಗೆ ತೇಲಾಡುತ್ತಿರುವ ಕೂಟಗಾರರ ಮೇಲೆ ಕಾಲಿಟ್ಟು ಕಂದಕವನ್ನು ದಾಟಿದ ಸುರಪುರದ ಪಡೆ ಕಿಲ್ಲೆಯ ಬಾಗಿಲನ್ನು ಸುಟ್ಟರೆ ಮತ್ತೊಂದು ಕಡೆ ಬಾಗಿಲಿಗೆ ಆನೆಯನ್ನು ಹಾಯಿಸಿ ಅದನ್ನು ಮುರಿದರು. ಇನ್ನೂ ಕೆಲವರು ಹಗ್ಗಗಳ ನಿಚ್ಚಣಿಕೆಯಿಂದಲೂ ಉಡಗಳ ಹಗ್ಗದಿಂದಲೂ ಕೋಟೆಯನ್ನು ಏರಿ ಒಳ ಹೊಕ್ಕ ಬೇಡರ ಪಡೆಯು ಶತೃಗಳನ್ನು ಜೋಳದ ದಂಟನ್ನು ಕೊಯ್ಯುವಂತೆ ಕತ್ತರಿಸಿ ಹಾಕಿತು. ಫ್ರೆಂಚರ ಸೈನ್ಯವು ನಿಸ್ತೇಜವಾಗಿ, ತೋಪುಗಳು ನಿಶಬ್ದವಾದವು. ನೋಡು ನೋಡುತ್ತಲೇ ವೆಂಕಟಪ್ಪ ನಾಯಕನು ತನ್ನ ಹನುಮ ಧ್ವಜವನ್ನು ಕಿಲ್ಲೆಯ ಮೇಲೆ ಹಾರಿಸಿ ನಂತರ ತನ್ನ ಸೈನ್ಯದ ಕಡೆ ನೋಡಿದಾಗ ಉಳಿದವರು ಕೇವಲ ೬೦೦ ಸೈನಿಕರು ಮಾತ್ರ. ಈ ಭಯಂಕರ ಯುದ್ಧದಲ್ಲಿ ನಾಯಕನ ಜೀವದ ಜೀವವಾದ ಕೂಟಗಾರರ ಯೋಧರೆಲ್ಲರೂ ಮಡಿದಿದ್ದನ್ನು ತಿಳಿದು ಆ ರಣಭೈರವನ ಹೃದಯವೇ ಕಿತ್ತು ಬಂದಿತು.

ಇಷ್ಟು ಅಲ್ಪಾವಧಿಯಲ್ಲಿ ಸುರಪುರದ ಹನುಮ ಧ್ವಜವು ಕಿಲ್ಲೆಯ ಮೇಲೆ ಹಾರಾಡುವುದನ್ನು ಕಂಡು ನಿಜಾಮ ಮತ್ತು ಬ್ರಿಟೀಷ ಸೈನಿಕರಿಗೆ ನಂಬಿಕೆಯಾಗಲಿಲ್ಲ. ಸ್ವತಃ ನಾಸಿರಜಂಗ್ ಬಂದು ವೆಂಕಟಪ್ಪ ನಾಯಕನನ್ನು ಬಿಗಿದಪ್ಪಿ ಆತನ ಗಾಯಗಳನ್ನು ತೊಳೆದನಂತೆ. ನಂತರ ನಿಜಾಮನು ಖಜಾನೆ ಲೂಟಿಯನ್ನು ವೆಂಕಟಪ್ಪ ನಾಯಕನಿಗೆ ಊರ ಲೂಟಿಯನ್ನು ಸೈನಿಕರಿಗೆಂದು ಗೊತ್ತುಪಡಿಸಲಾಯಿತು. ನಂತರ ವೆಂಕಟಪ್ಪ ನಾಯಕ ವಿಜಯೋತ್ಸವದೊಂದಿಗೆ ಪುದುಚೇರಿಯಿಂದ ವಿಪರೀತ ಧನವನ್ನು ಸಂಗ್ರಹಿಸಿಕೊಂಡು ಬರುವಾಗ ತಿರುಪತಿಯ ಮೇಲೆ ಫ್ರೆಂಚರು ಆಕ್ರಮಣ ಮಾಡುವ ಸುದ್ದಿ ಕೇಳಿ ತನ್ನ ಆರಾಧ್ಯ ದೈವದ ರಕ್ಷಣೆಗಾಗಿ ಸ್ವತಃ ತಿರುಪತಿಗೆ ಹೋಗಿ ಅವರನ್ನು ಅಲ್ಲಿಂದ ಹಿಮ್ಮೆಟ್ಟಿಸಿ ತಿರುಪತಿ ದೇವಾಲಯಕ್ಕೆ ವಜ್ರ, ವೈಢೂರ್ಯ, ಬಂಗಾರವನ್ನು ಅರ್ಪಿಸಿದ.

**ರಾಘವ ಪಾಮನಾಯಕ (೧೭೫೨ – ೧೭೭೪)**

ಮೊಂಡಗೈ ವೆಂಕಟಪ್ಪ ನಾಯಕನ ಆಳ್ವಿಕೆಯ ನಂತರ ರಾಘವ ಪಾಮನಾಯಕ ಪಟ್ಟಕ್ಕೆ ಏರಿದನು. ಈತನ ಆಳ್ವಿಕೆಯನ್ನು ಸಗರನಾಡಿನ ಸುವರ್ಣಯುಗವೆಂದು ಕರೆಯುವ ಜೊತೆಗೆ ಈ ಅರಸನನ್ನು ಸುರಪುರದ ಕೃಷ್ಣದೇವರಾಯನೆಂದು ಕರೆಯಲಾಗಿದೆ. ಇವರು ಪಂಡಿತ ಪ್ರೇಮಿ. ಭಾರ್ಗವ ಪುರಾಣವೆಂಬ ಮಹಾಕಾವ್ಯವನ್ನು ಬರೆದು ಪಂಡಿತ ಶ್ರೇಷ್ಠನೆಂದು ಬಿರುದು ಪಡೆದಿದ್ದಾರೆ. ರಾಜರು ಬರೆದ ಭಾರ್ಗವ ಪುರಾಣವು ತೆಲುಗಿನಲ್ಲಿ ಮುದ್ರಿಸಲಾಗಿದೆ ಎಂದು ಪಿ. ಗುಂಡಾಚಾರ್ ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ವಿಶೇಷವೆಂದರೆ ಈತನ

ಕಾಲದಲ್ಲಿ ವೈದ್ಯರಿಗೆ ಜಮೀನುಗಳನ್ನು, ಇನಾಮುಗಳನ್ನು ಹಾಕಿಕೊಟ್ಟು ಪ್ರಜೆಗಳ ಆರೋಗ್ಯದ ವ್ಯವಸ್ಥೆಗೆ ಅನುಕೂಲ ಮಾಡಿಕೊಟ್ಟಿದ್ದ.

**ರಾಜಾ ದೇವಿಂದ್ರ ವೆಂಕಟಪ್ಪ ನಾಯಕ (೧೭೭೪-೧೮೦೧)**

ಪಾಮನಾಯಕನು ಮರಣ ಹೊಂದಿದ ನಂತರ ಆತನ ಮಗನಾದ ದೇವಿಂದ್ರ ವೆಂಕಟಪ್ಪ ನಾಯಕ ರಾಜ್ಯಭಾರವನ್ನು ಮಾಡತೊಡಗಿದ. ಬಿಜಾಪೂರ ಪ್ರಾಂತದ ದರದೇಶಗತ್ತಿ, ಸಗರನಾಡು ಗೌಡಕಿ ಮುಂತಾದ ಮೂರು ಸುಮಿನ ಬಾಬುಗಳ ಸಲುವಾಗಿ ಪೇಶ್ವೆ ಮತ್ತು ವೆಂಕಟಪ್ಪನಾಯಕನ ನಡುವೆ ಯುದ್ಧ ಪ್ರಾರಂಭವಾಯಿತು. ಯಾಕೆಂದರೆ ಸಗರ ನಾಡಿನ ಈ ದೊರೆ ಹೆಚ್ಚು ಹೆಚ್ಚು ರುಸುಮ ವಸೂಲಿ ಮಾಡಲು ಹತ್ತಿದ್ದು ಆ ಕಾಲದಲ್ಲಿ ಪೇಶ್ವೆ ರಾಜ್ಯದ ಪರಿಸ್ಥಿತಿ ಚೆನ್ನಾಗಿ ಇರಲಿಲ್ಲ. ಆಗ ಪೇಶ್ವೆ ಸರದಾರನಾದ ಪರಶುರಾಮ ಭಾವು ಪ್ರಭುವರ್ಧನ ಅಪಾರ ಸೈನ್ಯದೊಂದಿಗೆ ಸಗರನಾಡಿಗೆ ಬಂದು ಅಲ್ಲಿಂದ ಎಲ್ಲಾ ಹಳ್ಳಿಗಳನ್ನು ನಿರ್ಮೂಲ ಮಾಡುತ್ತಾ ಗುಡುಗುಂಟಿಗೆ ತೆರಳಿದ್ದ. ಆಗ ವೆಂಕಟಪ್ಪ ನಾಯಕನು ತನ್ನ ಸೈನ್ಯವನ್ನು ಗುಡುಗುಂಟಿಗೆ ಕಳಿಸಿದ್ದ. ಅಲ್ಲಿ ಘೋರ ಯುದ್ಧವಾಯಿತು. ಈ ಯುದ್ಧದಲ್ಲಿ ರಾಜನ ಬೆಂಬಲಿಗರು ವೀರಸ್ವರ್ಗ ಪಡೆದರು. ಕೊನೆಗೆ ಪೂರ್ವ ಸನ್ನಿಧಿಗಳಂತೆ ನಡೆದುಕೊಳ್ಳಬೇಕೆಂದು ಒಪ್ಪಂದವಾಯಿತು. ಮುಂದೆ ರಾಜನು ಆಧ್ಯಾತ್ಮಿಕ ಪುರುಷನಾಗುವನಲ್ಲದೆ ಅವರ ಧರ್ಮ ಪತ್ನಿ ರಂಗಮಾಂಬಾ ಗೋಪಾಲನ ಭಕ್ತೆಯಾದಳು. ಈ ದಂಪತಿಗಳ ಭಕ್ತಿಗೆ ಮೆಚ್ಚಿ ಗೋಪಾಲನೇ ಸ್ವತಃ ದರ್ಶನ ನೀಡಿ ನಿಮ್ಮ ವಂಶಜರು ಯಾರೂ ತಿರುಪತಿಗೆ ಬರುವುದು ಬೇಡ. ನೀವಿದ್ದಲ್ಲಿ ನಾನು ಇರುತ್ತೇನೆಂದು ವರ ನೀಡಿದ, ಪರಿಣಾಮವೇ ಇಂದಿಗೂ ಕೂಡ ಸುರಪುರದ ಬೇಡ ದೊರೆಗಳು ತಿರುಪತಿಗೆ ಹೋಗದೇ ಸುರಪುರದಲ್ಲಿಯೇ ಇರುವ ಭವ್ಯ ಗೋಪಾಲನ ಮಂದಿರದಲ್ಲಿ ಪೂಜೆ ಸಲ್ಲಿಸುತ್ತಿದೆದಾರೆ.

'**ರಾಣಿ ಕಾಂತಮ್ಮ (೧೮೦೧-೧೮೦೨)** ರಾಜಾ ದೇವಿಂದ್ರ ವೆಂಕಟಪ್ಪ ನಾಯಕ ಮರಣದ ನಂತರ ಧರ್ಮಪತ್ನಿ ರಾಣಿಕಾಂತಮ್ಮ ತನ್ನ ಮಗ ಮೃತ ಬಾಪುಸಾಹೇಬನ ಮಗಳಾದ ವೆಂಕಟರಂಗಮ್ಮಳನ್ನು ಸಿಂಹಾಸನದ ಮೇಲೆ ಕೂರಿಸಿ ರಾಜ್ಯದ ಕಾರುಭಾರವನ್ನು ತಾನು ವಹಿಸಿಕೊಂಡಳು. ರಾಜಪರಿವಾರದವರು ಎಲ್ಲಾ ಸೈನಿಕ ಸರದಾರರು ಸುತ್ತಮುತ್ತ ವೈರಿಗಳಿರುವಾಗ ಸ್ತ್ರೀ ರಾಜ್ಯವಾಗಿ ಸಂಸ್ಥಾನಕೆ ಕೇಡಾಗಿತ್ತೆಂದು ಭಯಪಟ್ಟು ಸಂಪದ್ರಾಯದ ವಿರುದ್ಧವಾಗಿ ಗದ್ದುಗೆ ಮೇಲೆ ಕೂರಿಸುವುದು ಉಚಿತವಲ್ಲವೆಂದು ವಿರೋಧಿಸಿದಾಗ, ತನ್ನ ಸಂಬಂಧಿಯಾದ ಪಿಡ್ಡನಾಯಕನಿಗೆ ರಾಜ್ಯಭಾರವಹಿಸಿದಳು.'[೧೫]

**ರಾಜಾ ಪಿಡ್ಡನಾಯಕ (೧೮೦೨-೧೮೧೮)**

ಪಿಡ್ಡನಾಯಕನು ರಾಣಿ ಕಾಂತಮ್ಮಳ ಅನುಮತಿಯಂತೆ ರಾಜ್ಯಭಾರವನ್ನು ಪ್ರಾಂಭಿಸಿದಾಗ, ಈತನು ದೇವದುರ್ಗ, ಇಜೇರಿ ಕಿಲ್ಲೆಗಳನ್ನು ೧೮೧೧ರಲ್ಲಿ ಜೀರ್ಣೋದ್ಧಾರ ಮಾಡಿಸಿದ.

ಸಂಸ್ಥಾನದ ಹೆಮನೂರು, ಕೊಡೇಕಲ್, ಸಮತುಗಳ ಸಗರನಾಡ ಗೌಡಕಿಯನ್ನು ವೆಂಕಟರಾಯನಿಗೆ ಕೊಟ್ಟಿದ್ದಲ್ಲದೇ ಮರಿಯಪ್ಪನ ಮಗನಾದ ಬಸ್ಸಪ್ಪನಿಗೆ ಅಂದೇಲಿ, ಜೇವರ್ಗಿ, ಶಿರವಾಳ್, ರಸ್ತಾಪುರ, ಮದ್ರಿಕಿ ಮುಂತಾದ ಏಳು ಸಮತುಗಳ ದೇಸಗತಿಯನ್ನು ಹಾಕಿಕೊಟ್ಟ, ಹಾಗೂ ೧೮೧೨ ದೇವಪೂರದ ಸರನಾಡ ಗೌಡಕಿಯನ್ನು ಗೋವಿಂದರಾವ್ ಭಾಸ್ಕರ್ ಮುಜುಂದಾರನಿಗೆ ಕೊಡಲ್ಪಟ್ಟಿತ್ತು. ಕ್ರಿ.ಶ. ೧೮೧೮ರಲ್ಲಿ ಪಿಡ್ಡನಾಯಕನು ಮೃತಪಟ್ಟ.

**ರಾಜಾ ವೆಂಕಟಪ್ಪ ನಾಯಕ (೧೮೧೮ - ೧೮೨೮)**

ಪಿಡ್ಡನಾಯಕನ ಮರಣದ ನಂತರ ಅವನ ಹಿರಿಯ ಮಗನಾದ ವೆಂಕಟಪ್ಪ ನಾಯಕ ರಾಜ್ಯಭಾರವನ್ನು ವಹಿಸಿಕೊಂಡ. ರಾಜನು ಶೂರ ಮತ್ತು ದೇಶಪ್ರೇಮಿಯಾಗಿದ್ದನಲ್ಲದೇ ಬ್ರಿಟೀಷರ ಕುಟಿಲ ನೀತಿಯನ್ನು ಅರ್ಥಮಾಡಿಕೊಂಡಿದ್ದ. ೧೮೨೪ರಲ್ಲಿ ಕಿತ್ತೂರಿನ ಪತನದ ಬಗ್ಗೆ ತುಂಬಾ ದುಃಖಿತನಾಗಿದ್ದ. ಆಗ ಸಂಗೊಳ್ಳಿ ರಾಯಣ್ಣನು ಸುರಪುರಕ್ಕೆ ಸಹಾಯ ಕೇಳಿಕೊಂಡು ಬಂದು ೩೦೦ ಜನ ಬೇಡ ಸೈನಿಕರನ್ನು ಕೊಡಬೇಕೆಂದು ಕೇಳಿಕೊಂಡು, ಬ್ರಿಟೀಷರ ವಿರುದ್ಧ ಹೋರಾಡಲು ಮುಂದಾಗುತ್ತಾನೆ. ಸುರಪುರ ಬೇಡ ಸೈನಿಕರನ್ನು ಮುಂದಿಟ್ಟುಕೊಂಡು ಬ್ರಿಟೀಷರನ್ನು ೫ ವರ್ಷ ತಲ್ಲಣಗೊಳಿಸಿದ. ಕೊನೆಗೆ ಬ್ರಿಟೀಷರ ಮೋಸಕ್ಕೆ ಬಲಿಯಾಗಿ ಸಂಗೊಳ್ಳಿರಾಯಣ್ಣ ಗಲ್ಲಿಗೇರಬೇಕಾಯಿತು. ರಾಜನು ಪಂಡಿತ ಪ್ರೇಮಿಯಾಗಿದ್ದು, ವಿದ್ವತ್ ಜನರ ಗುಂಪೇ ಈತನ ಆಸ್ಥಾನದಲ್ಲಿತ್ತು. ಮತ್ತು ತನ್ನ ಧರ್ಮಪತ್ನಿ ರಂಗಮ್ಮನ ಹೆಸರಿನಿಂದ ೧೮೨೨ರಲ್ಲಿ ರಂಗಂಪೇಟವನ್ನು ಸ್ಥಾಪಿಸಿ ಅಭಿವೃದ್ಧಿ ಪಡಿಸಿದ. ಅದೇ ಇಂದಿನ ರಂಗಂಪೇಟ ಆಗಿದೆ.

**ರಾಜಾ ಕೃಷ್ಣಪ್ಪ ನಾಯಕ (ಕ್ರಿ ಶ. ೧೮೨೮-೧೮೪೩)** ವೆಂಕಟಪ್ಪ ನಾಯಕನ ಮಗನಾದ ಕೃಷ್ಣಪ್ಪ ನಾಯಕ ಸಂಸ್ಥಾನದ ಅಧಿಕಾರವನ್ನು ವಹಿಸಿಕೊಳ್ಳುತ್ತಾನೆ. ಆಗ ಬಹುದೊಡ್ಡ ಬದಲಾವಣೆಯಾಗಿ ದೇಶದಲ್ಲಿ ಸ್ವದೇಶಿ ರಾಜ್ಯವು ಅಳಿದು ವಿದೇಶಿ ರಾಜ್ಯವು ಪ್ರಾರಂಭವಾದ ಅತಿ ಕೆಟ್ಟ ಘಳಿಗೆ. ಅಂದರೆ ಪೇಶ್ವೆ ರಾಜ್ಯವು ಅಳಿದು ಬ್ರಿಟೀಷರು ಅವರ ಸ್ಥಾನದಲ್ಲಿ ಬಂದದ್ದು. ಮತ್ತು ನಿಜಾಮನು ಇಂಗ್ಲೀಷರ ಅಂಕಿತಕ್ಕೊಳಗಾದ ಘಟನೆಗಳ ಪರಿಣಾಮ ಸುರಪುರ ಸಂಸ್ಥಾನದ ಮೇಲೆ ಆಗದೇ ಇರಲಿಲ್ಲ. ಅಲ್ಲದೇ ಅಣ್ಣ ತಮ್ಮಂದಿರ ಕಲಹದಿಂದ ನಿಜಾಮ ಬ್ರಿಟೀಷರಿಗೆ ಸಂಸ್ಥಾನದಲ್ಲಿ ಇನ್ನಷ್ಟು ಆಟ ಆಡಲು ಅವಕಾಶ ಸಿಕ್ಕಿತ್ತು. ಬ್ರಿಟೀಷ ಮತ್ತು ನಿಜಾಮರ ಅವ್ಯವಹಾರವನ್ನು ಧರ್ಮಪತ್ನಿಯಾದ ಮಹಾ ಬುದ್ಧಿವಂತೆ ರಾಣಿ ಈಶ್ವರಮ್ಮ ಉಗ್ರವಾಗಿ ಪ್ರತಿಭಟಿಸಿದಳು. ಇವಳ ಪ್ರತಿಭಟನೆಯಿಂದ ಬ್ರಿಟೀಷರು ಮತ್ತು ನಿಜಾಮರು ಹೆದರಿದರು. ತಮ್ಮ ಕುಟಿಲ ನೀತಿಯಿಂದ ಹೇಗಾದರೂ ಮಾಡಿ ರಾಣಿಯ ಶಕ್ತಿಯನ್ನು ಕುಂದಿಸಬೇಕೆಂದು ಇವಳ ಮೇಲೆ ಸುಳ್ಳು ಚಾರಿತ್ರ್ಯವಧೆಗೆ ಪ್ರಯತ್ನಿಸಲಾಯಿತು. ಇಂತಹ ಒಂದು ಕಷ್ಟದ ಪರಿಸ್ಥಿತಿಯಲ್ಲಿಯೇ ಕೃಷ್ಣಪ್ಪ ನಾಯಕರು ೧೮೪೩ರಲ್ಲಿ ಮರಣ

ಹೊಂದಿದರು. ಆಗ ರಾಣಿ ಈಶ್ವರಮ್ಮ ತನ್ನ ಮುದ್ದು ಮಗನಾದ ರಾಜಾ ನಾಲ್ವಡಿ ವೆಂಕಟಪ್ಪ ನಾಯಕನನ್ನು ಬ್ರಿಟೀಷರ ವಿರುದ್ಧ ತಿರುಗಿ ಬೀಳುವಂತೆ ಮಗನನ್ನು ಬೆಳೆಸಿದಳು.

**ರಾಜಾ ನಾಲ್ವಡಿ ವೆಂಕಟಪ್ಪ ನಾಯಕ (೧೮೩೪ – ೧೮೫೮)**

ಭಾರತಾಂಬೆ ಮಡಿಲಿನಲ್ಲಿ ಹಲವಾರು ಶೂರರು, ವೀರರು ಮತ್ತು ದೇಶ ಪ್ರೇಮಿಗಳು ಜನ್ಮ ತಾಳಿದ್ದಾರೆ. ಹಿಂದೂ ಸಂಸ್ಕೃತಿಯನ್ನು ರಕ್ಷಿಸಲು ಛತ್ರಪತಿ ಶಿವಾಜಿ ಮಹಾರಾಜನು ಹೇಗೆ ಪ್ರಮುಖ ಪಾತ್ರವಹಿಸಿದ್ದನೋ, ಅದರಂತೆಯೇ ಅಥವಾ ಅದಕ್ಕಿಂತಲೂ ಒಂದು ಕೈ ಮಿಗಿಲಾಗಿ ಸುರಪುರ ಸಂಸ್ಥಾನದ ದೊರೆಗಳು ಹಿಂದೂ ಸಂಸ್ಕೃತಿಯ ರಕ್ಷಕರಾಗಿಯೂ, ಸರ್ವ ಧರ್ಮ ಸಹಿಷ್ಣುಗಳಾಗಿಯೂ ಈ ನಾಡನ್ನು ಆಳಿದ್ದಾರೆ. ಸಗರ ನಾಡಿನ ಕೇಂದ್ರ ಸ್ಥಳವಾದ ಸುರಪುರದ ಐತಿಹಾಸಿಕತೆಯ ಹಿರಿಮೆ ಗರಿಮೆಯನ್ನು ನೆನೆದಾಗ ಸುಪ್ತ ಚೇತನವು ಸೆಟೆದು ನಿಲ್ಲುತ್ತದೆ.

ಗಂಡು ಮೆಟ್ಟಿದ ಸ್ಥಳ ಸುರಪುರದ ಗೋಸಲ ವಂಶದ ಐತಿಹಾಸಿಕ ಪರಂಪರೆಯಲ್ಲಿ ಮೆರೆದು ಹೋದ ಇಲ್ಲಿನ ನಾಡ ನಾಯಕನಾಗಿದ್ದ ಬೇಡ ದೊರೆಗಳ ಸಾಹಸ, ಶೌರ್ಯ, ಧೈರ್ಯ ಮತ್ತು ರಾಷ್ಟ್ರ ಪ್ರೇಮವನ್ನು ಈ ನೆಲವು ಎಂದಿಗೂ ಮರೆಯದು. ಅಂತಹ ಪರಾಕ್ರಮಿಗಳ ವಂಶದಲ್ಲಿ ಹುಟ್ಟಿದ ರಾಜಾ ನಾಲ್ವಡಿ ವೆಂಕಟಪ್ಪ ನಾಯಕನ ಕ್ರಾಂತಿಕಾರಕ ಮನೋಭಾವನೆ, ಅಪ್ರತಿಮ ಹೋರಾಟದ ಸ್ಫೂರ್ತಿಯಿಂದ ಬ್ರಿಟೀಷ್ ಸಾಮ್ರಾಜ್ಯದ ಭದ್ರ ಬುನಾದಿ ಅಲುಗಾಡಿತು. ಇಂತಹ ವೀರರಿಗೆ ಜನ್ಮ ಕೊಟ್ಟ ಕನ್ನಡ ನಾಡಿನ ಹಿರಿಮೆ ಗರಿಮೆಗಳು, ಘನತೆ ಗೌರವಗಳು ಭಾರತೀಯ ಇತಿಹಾಸದಲ್ಲಿ ಚಿರಸ್ಮರಣೀಯವಾಗಿವೆ.

**ರಾಜಾ ನಾಲ್ವಡಿ ವೆಂಕಟಪ್ಪ ನಾಯಕ ಬಾಲ್ಯ ಜೀವನ**

೧೮೩೪ರಲ್ಲಿ ರಾಜಾ ಕೃಷ್ಣಪ್ಪ ನಾಯಕ ಮತ್ತು ರಾಣಿ ಈಶ್ವರಮ್ಮನವರ ಗರ್ಭದಲ್ಲಿ ರಾಜಾ ನಾಲ್ವಡಿ ವೆಂಕಟಪ್ಪ ನಾಯಕನು ಸುರಪುರ ಸಂಸ್ಥಾನದಲ್ಲಿ ಜನಿಸಿದನು. ಬಾಲ್ಯದಿಂದಲೇ ಎಲ್ಲ ಯುದ್ಧ ಕಲೆಗಳನ್ನು ಕಲಿತುಕೊಂಡಿದ್ದನು. ಬಾಲಕ ವೆಂಕಟಪ್ಪ ನಾಯಕನ ಕಕ್ಕ ಅವನಿಗೆ ಯುದ್ಧ ಕಲೆಗಳನ್ನು ಕಲಿಸಿಕೊಡುತ್ತಿದ್ದನು. ಒಮ್ಮೆ ಕುದುರೆ ಸವಾರಿ ಮಾಡುವಾಗ ಕಕ್ಕನು ಬೇಕೆಂದು ಓಡುವ ಕುದುರೆಯಿಂದ ಅವನನ್ನು ಕೆಳಗೆ ನೂಕಿಬಿಟ್ಟನು. ದೊಪ್ಪೆಂದು ಕೆಳಗೆ ಬಿದ್ದ ಬಾಲಕ ವೆಂಕಟಪ್ಪ ನಾಯಕನ ಕೈ ಕಾಲುಗಳು ಬೇನ್ನು ನೋವಿನಿಂದ ಹಾಗೂ ಹಣೆಯಿಂದ ತುಸು ರಕ್ತಸ್ರಾವವಾಯಿತು. ಪೆಚ್ಚು ಮೋರೆ ಮಾಡಿಕೊಂಡನು. ಆಗ ಅವನ ಕಕ್ಕ "ಎಲೆ ಹೆಡಿ ಹೀಗೇಕೋ ನೋವು ಸಾವುಗಳಿಗೆ ಹೆದರುವವನು ಸಾಮ್ರಾಜ್ಯವನ್ನು ಹೇಗೆ ರಕ್ಷಿಸಿಕೊಳ್ಳುವನು?" ಎಂದು ಹಿಯಾಳಿಸಿದನು. ಈ ಮಾತನ್ನು ಕೇಳಿದ ತಕ್ಷಣ ಬಾಲಕನು ಚಂಗನೆ ಹಾರಿ ಕುದುರೆಯನ್ನೇರಿ ಕುಳಿತು ಅದನ್ನು ಓಡಿಸಿದನಂತೆ. ಇಂತಹ

ಕೆಚ್ಚೆದೆಯ ಮನೋಭಾವನೆ ಬಾಲ್ಯದಿಂದಲೇ ರಾಜಾ ವೆಂಕಟಪ್ಪ ನಾಯಕನು ಬೆಳೆಸಿಕೊಂಡಿದ್ದನು.

ಕರ್ನಲ್ ಮೆಡೋಸ್ ಟೇಲರನು ಬಾಲಕ ವೆಂಕಟಪ್ಪ ನಾಯಕನ ಎಲ್ಲಾ ರೀತಿಯ ಹೊಣೆಗಾರಿಕೆಯನ್ನು ಹೊತ್ತು ಅವನ ವಿದ್ಯಾಭ್ಯಾಸಕ್ಕಾಗಿ ಮುರ್ರೆ ಎಂಬ ಡಾಕ್ಟರನನ್ನು ನೇಮಿಸಿದ್ದನು. ಇಂಗ್ಲೀಷ ಭಾಷೆಯನ್ನು ಅಭ್ಯಾಸ ಮಾಡಿದ ರಾಜಾ ವೆಂಕಟಪ್ಪ ನಾಯಕನಿಗೆ ಲೌಕಿಕ ವಿಷಯಗಳನ್ನು ಅರಿತುಕೊಂಡು ಸ್ವಾತಂತ್ರ್ಯ ಹೋರಾಟದ ಅರಿವಾಯಿತು. ಇಂಗ್ಲೀಷ್, ಸಂಸ್ಕೃತ, ಕನ್ನಡ, ತೆಲುಗು, ಮತ್ತು ಫಾರ್ಸಿ ಭಾಷೆಗಳನ್ನು ಸರಿಯಾಗಿ ಕಲಿತುಕೊಂಡನು.

ಒಮ್ಮೆ ರಾಣಿ ಈಶ್ವರಮ್ಮ ಗೃಹ ಬಂಧನದಲ್ಲಿ ರೋಗ ಪೀಡಿತಳಾಗಿದ್ದಾಗ ನೋಡಲು ವೆಂಕಟಪ್ಪ ನಾಯಕನನ್ನು ಟೇಲರನು ಸಿಪಾಯಿಗಳ ಜೊತೆಗೆ ಕಳುಹಿಸಿದನು. ತಾಯಿ ರಾಣಿ ಈಶ್ವರಮ್ಮನಿಗೆ ನಮಿಸಿ ನಿಂತುಕೊಂಡನು. ಆಗ ರಾಣಿ ಈಶ್ವರಮ್ಮನು ಮಗನನ್ನು ಕುರಿತು ಈ ರೀತಿ ನುಡಿದಳು. ಕಂದಾ ಅಲ್ಲಿ ನೋಡು. ನಿನ್ನ ಹಿರಿಯರ ಭಾವಚಿತ್ರಗಳನ್ನು ಅವರ ಮರ್ಯಾದೆಯನ್ನು ಉಳಿಸಬೇಕು. ಆ ಕೆಂಪು ಕೋತಿಗಳಿಂದ ರಾಜ್ಯವನ್ನು ಕಸಿದುಕೊಂಡು ಗೋಸಲ ವಂಶದ ವೀರರ ಕೀರ್ತಿಯನ್ನು ಉಳಿಸು ಎಂದು ರಾಣಿ ಈಶ್ವರಮ್ಮ ತನ್ನ ಮಗನಿಗೆ ಪ್ರೇರೇಪಿಸಿದಳು.

**ವೆಂಕಟಪ್ಪ ನಾಯಕ ರಾಜ್ಯಾರೋಹಣ**

ಲಾರ್ಡ್ ಡಾಲ್ ಹೌಸಿಯು ೧೮೫೩ರಲ್ಲಿ ಭಾರತದಲ್ಲಿ ಗವರ್ನರ್ ಜನರಲ್ ಆಗಿ ನೇಮಕಗೊಂಡನು. ಅವನ ಸಂದೇಶದ ಮೇರೆಗೆ ಟೇಲರನು ತಾನೇ ರಾಜಾ ವೆಂಕಟಪ್ಪ ನಾಯಕನಿಗೆ ಪಟ್ಟ ಕಟ್ಟಿಸಿದನು. ಆದರೆ ಪಿಡ್ಡನಾಯಕನು ಆ ಕಾರ್ಯಕ್ಕಾಗಿ ಅನೇಕ ಅಡಚಣೆಗಳನ್ನು ತೋರಿಸಿದನು. ಕೊನೆಗೆ ಇಂಗ್ಲೀಷ ಸರಕಾರದ ಅಪ್ಪಣೆಯಾಗಿದೆ ಎಂದು ಹೇಳಿ ಅವನನ್ನು ಸಮ್ಮತಪಡಿಸಿದರು. ಈ ಕಾರ್‍ಯ್ಕೆ ಸಿದ್ಧತೆಗಳು ಪ್ರಾರಂಭವಾದವು. ರಾಜನ ಆಪ್ತರಿಗೆ ಪತ್ರಗಳನ್ನು ಬರೆದು ಕಳಿಸಲಾಯಿತು. ಅರಸು ಮನೆತನದ ಪದ್ಧತಿಯಂತೆ ಉಡುಗೋರೆಗಳು, ನಾಚು ರಂಗುಗಳು ನಡೆದವು. ಟೇಲರನು ವೆಂಕಟಪ್ಪ ನಾಯಕನನ್ನು ಸಂಸ್ಥಾನ ಗಾದಿಯ ಮೇಲೆ ಕೂಡಿಸಿದನು. ದರ್ಬಾರದ ಜನರು ತಮ್ಮ ತಮ್ಮ ಮರ್ಯಾದೆಗಳಿಗನುಸಾರವಾಗಿ ಕಾಣಿಕೆಗಳನ್ನು ಕೊಟ್ಟು ಸಲಾಮು, ಮುಜರೆ (ವಂದಿಸಿ) ಮಾಡಿದರು. ಸಂಸ್ಥಾನದ ಎಲ್ಲ ಬಂಧು ಬಾಂಧವರಿಗೆ ಸಂತೋಷವಾಯಿತು. ರಾಜಕೀಯ ದರ್ಬಾರವನ್ನು ನೆರೆಯಿಸಿ ರಾಜನ ಕೊರಳೊಳಗೆ ಹೂ ಮಾಲೆಯನ್ನು ಹಾಕಿ ಟೇಲರನು ರಾಜ ಮುದ್ರೆಯನ್ನು ರಾಜನಿಗೆ ಕೊಟ್ಟು ಅರಸನಿಗೆ ಬುದ್ಧಿವಾದವನ್ನು ಹೇಳಿದನು. ಆಂಗ್ಲರಿಗೂ, ನಿಜಾಮನಿಗೂ ವಿಧೇಯನಾಗಿರಲು ಹೇಳಿ ತಾನು ಸುರಪುರವನ್ನು ಬಿಟ್ಟು ಹೈದರಾಬಾದಿಗೆ ತೆರಳಿದನು.

"Women wealth and wine are main causes for the failure a man" ಎಂಬಂತೆ ರಾಜಾ ವೆಂಕಟಪ್ಪ ನಾಯಕನು ಇದರಿಂದ ಹೊರತಾಗಿರಲಿಲ್ಲ. ಇದರಿಂದ ಅವನ ಅವನತಿ ಪ್ರಾರಂಭವಾಯಿತು. ರಾಜ್ಯ ಸೂತ್ರ ಬಂದ ಕೂಡಲೇ ರಾಜಾ ವೆಂಕಟಪ್ಪ ನಾಯಕನು ತನ್ನ ತಂದೆಗೆ ಸಂಬಂಧಿಸಿದ ಓರ್ವ ವೈಶ್ಯಾಂಗನೆಯ ಮಗಳನ್ನು ಬಲಾತ್ಕಾರದಿಂದ ವಶಮಾಡಿಕೊಂಡು, ಅವಳನ್ನು ಮದುವೆಯಾಗಲು ರಾಜ ಭಂಡಾರದ ಹಣವನ್ನು ಉಪಯೋಗಿಸಿ, ದುಂದು ವೆಚ್ಚ ಮಾಡಿದನು.'[೧೬] ಈ ರೀತಿಯಾಗಿ ಸುರಪುರ ಸಂಸ್ಥಾನದ ರಾಜ ಭಂಡಾರ ಖಾಲಿಯಾಗಿ, ಸೈನಿಕರಿಗೆ ಕೊಡಬೇಕಾಗಿರುವ ಸಂಬಳ ಸಹಿತ ರಾಜನು ಬಾಕಿ ಉಳಿಸಿದನು. ಇದರಿಂದ ೧೨,೦೦೦ ಬೇಡ ಸೈನಿಕರು ವೆಂಕಟಪ್ಪ ನಾಯಕನಿಂದ ಅಸಂತುಷ್ಟರಾದರು. ಹೇಗಾದರೂ ಪರಿಸ್ಥಿತಿಯನ್ನು ಸುಧಾರಿಸಲು ರಾಜನು ಸಾಕಷ್ಟು ಪ್ರಯತ್ನ ಮಾಡಿದನು. ಕೊನೆಗೆ ತನ್ನ ಆಸ್ಥಾನದಲ್ಲಿ ಹಲವಾರು ವರ್ಷ ಸೇವೆ ಸಲ್ಲಿಸಿದ್ದ ಅನುಭವವುಳ್ಳ ನೌಕರನನ್ನು ಬದಲಿಸಿ ಬೇರೆ ನೌಕರರನ್ನು ನೇಮಕ ಮಾಡಿಕೊಳ್ಳತೊಡಗಿದನು. ಅದೇ ವೇಳೆಗೆ ಮದ್ಯದ ವ್ಯಸನ, ಸ್ತ್ರೀಲೋಲುಪತೆ ಮುಂತಾದವುಗಳು ಅರಸನಲ್ಲಿ ಮನೆ ಮಾಡಿಕೊಂಡಿದ್ದವು. ಇದೇ ಕಾಲಕ್ಕೆ ದೇಶದಲ್ಲಿ ನಾಲ್ಕೂ ಕಡೆ ಬ್ರಿಟೀಷರ ವಿರುದ್ಧ ಬಂಡಾಯವೆದ್ದಿತ್ತು. ಅರಸನು ಇದನ್ನು ಸರಿಪಡಿಸುವುದರಲ್ಲಿ ಹೆಣಗುತ್ತಿದ್ದನೇ ವಿನಃ ಪ್ರಜೆಗಳ ಬಗ್ಗೆ ಮತ್ತು ಹೊರಗಿನ ವೈರಿಗಳ ದಾಳಿ ಬಗ್ಗೆ ಗಮನ ಹರಿಸುತ್ತಿರಲಿಲ್ಲ. ಉತ್ತರ ಭಾರತದಲ್ಲಿ ಬ್ರಿಟೀಷರನ್ನು ದೇಶ ಬಿಟ್ಟು ಹೊರಹಾಕಬೇಕೆಂದು ತೀವ್ರ ಹೋರಾಟ ಪ್ರಾರಂಭವಾಗಿತ್ತು.

**೧೮೫೭ರ ದಂಗೆ ರಾಜಾ ನಾಲ್ವಡಿ ವೆಂಕಟಪ್ಪ ನಾಯಕ:** ಟಿಪ್ಪು ಸುಲ್ತಾನನಿಂದಲೂ ಆಂಗ್ಲರಿಂದಲೂ ಅಪಜಯವನ್ನು ಪಡೆದವರು ಸುರಪುರಕ್ಕೆ ಬಂದರು. ಅವರೆಲ್ಲರೂ ರಾಜಾ ವೆಂಕಟಪ್ಪ ನಾಯಕನಿಗೆ ಸಹಾಯ ಮಾಡಲು ವಾಗ್ದಾನ ಮಾಡಿದರು. ಸ್ವಲ್ಪ ದಿನದಲ್ಲಿಯೇ ಅಪಾರವಾದ ಸೈನ್ಯವು ಸಜ್ಜಾಗಿ ಬ್ರಿಟೀಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸಿದ್ಧವಾಯಿತು. ವೀರ ರಾಣೀ ಚೆನ್ನಮ್ಮ ಮತ್ತಿತರರು ಸ್ವಾತಂತ್ರ್ಯ ಯುದ್ಧದಲ್ಲಿ ಬಲಿಯಾಗಿದ್ದರು. ಸುರಪುರ ಸಂಸ್ಥಾನದ ಕ್ರಾಂತಿಕಾರಿ ರಾಜಾ ನಾಲ್ವಡಿ ವೆಂಕಟಪ್ಪ ನಾಯಕನು ಬ್ರಿಟೀಷರ ವಿರುದ್ಧ ರೊಚ್ಚಿಗೆದ್ದು ಅವರ ಆಡಳಿತ ಬೇರು ಸಹಿತ ಕಿತ್ತು ಹಾಕಲು ಕಂಕಣ ತೊಟ್ಟನು.

ಸುರಪುರದ ದೊರೆ ರಾಜಾ ನಾಲ್ವಡಿ ವೆಂಕಟಪ್ಪ ನಾಯಕನು ಬ್ರಿಟೀಷರ ವಿರುದ್ಧ ಹೋರಾಡಲು ಯತ್ನಿಸಿರುವುದಾಗಿ ಮತ್ತು ಕೂಟಕಾರರ ಸಿಪಾಯಿಗಳಾದ ರೋಹಿಲೇ ಮತ್ತು ಅರಬ್ಬರನು ತನ್ನ ನೌಕರಿಯಲ್ಲಿಟ್ಟುಕೊಂಡದ್ದು, ಇತ್ಯಾದಿ ದೂರುಗಳು ಹೈದರಾಬಾದಿನ ರೆಸಿಡೆಂಟನ ದ್ವಾರಾ ಗವರ್ನರ್ ಜನರಲ್‌ನಿಗೆ ತಲುಪಿತು. ಈ ಎಲ್ಲಾ ವಿಷಯಗಳಿಗೆ ರೆಸಿಡೆಂಟನು ವೆಂಕಟಪ್ಪ ನಾಯಕನಿಗೆ ವಿವರಣೆಯನ್ನು ಕೇಳಿದನು. ಗವರ್ನರ್ ಆಜ್ಞಾಪತ್ರಕ್ಕೆ

ದೊರೆಯ ಉತ್ತರ ಈ ರೀತಿ ಇದೆ. "ನಾನೇನೂ ಅಂತಹ ತಪ್ಪನ್ನು ಮಾಡಿಲ್ಲ. ಮಾಡುವುದೂ ಇಲ್ಲ." ಅದೇ ವೇಳೆಗೆ ಬ್ರಿಟೀಷರಿಂದ ಅವಮಾನಿತನಾದ ನಾನಾ ಸಾಹೇಬನು ದಕ್ಷಿಣ ಭಾರತಕ್ಕೆ ಬಂದು ಎಲ್ಲಾ ಸಂಸ್ಥಾನಿಕರನ್ನು ಸಂಘಟಿಸಲು ಯತ್ನಿಸಿದನು. ಅಲ್ಲದೇ ಅವರನ್ನು ವಿಚಾರಿಸಲಾಗಿ ಅವರ ಕೈಗಳು ವೀರ ಬೇಡರನ್ನು ತೋರಿಸಿದವು. ನಾನಾಸಾಹೇಬ ಗುಪ್ತವಾಗಿ ವೆಂಕಟಪ್ಪ ನಾಯಕನೊಡನೆ ಸಮಾಲೋಚನೆಗೈದನು. ನಾನಾ ಸಾಹೇಬನಿಂದ ಪ್ರೇರಿತನಾದ ರಾಜ ವೆಂಕಟಪ್ಪ ನಾಯಕನು ಒಳಗಿಂದೊಳಗೆ ಸಿಪಾಯಿಗಳನ್ನು ಭರ್ತಿ ಮಾಡತೊಡಗಿದನು. ಬ್ರಿಟೀಷರನ್ನು ತಾಯ್ನಾಡಿನಿಂದ ಹೊರಹಾಕಲು ಮದ್ದು ಗುಂಡುಗಳ ಸಂಗ್ರಹ ಭರದಿಂದ ನಡೆಯಿತು. ಉತ್ತರ ಭಾರತದಲ್ಲಿ ೧೮೫೭ರ ಸ್ವಾತಂತ್ರ್ಯದ ಕಿಡಿ ಬಹಳ ಬಿರುಸಾಗಿ ನಡೆದಿತ್ತು.



ಬ್ರಿಟೀಷರು ದಕ್ಷಿಣ ಸಂಸ್ಥಾನಿಕರ ಚಲನವಲನಗಳನ್ನು ಗಮನಿಸುತ್ತಿದ್ದರು. ರಾಜ ವೆಂಕಟಪ್ಪ ನಾಯಕನ ಚಟುವಟಿಕೆಗಳ ಮೇಲೆ ವಕ್ರ ದೃಷ್ಟಿ ಬಿದ್ದಿತು. ನಾಲ್ಕು ದಿಕ್ಕುಗಳಿಂದಲೂ ಸೈನ್ಯವನ್ನು ಬರಮಾಡಿಕೊಂಡು ಸುರಪುರ ಸಂಸ್ಥಾನವನ್ನು ಮುತ್ತಿದ್ದರು. ಆಗ ರಾಜಾ ವೆಂಕಟಪ್ಪ ನಾಯಕ ಸಿಡಿಮದ್ದು ಇನ್ನೂ ಕಾದಿರಲಿಲ್ಲ. ಕೋವಿಯಲ್ಲಿ ಇನ್ನೂ ಮದ್ದಿನ ಪುಡಿ ತುಂಬಿರಲಿಲ್ಲ. ಕರ್ನಲ್ ಹ್ಯೂಗ್ ಮತ್ತು ವಿಂಡ್ ಹ್ಯಾಮ್ ಕಬಾಡಗೇರಾ ಕೋಟೆ ದ್ವಾರದ ಮೂಲಕ ನಗರದಲ್ಲಿ ನುಗ್ಗಿದರು. ಬೇಡರ ಸಾಮರ್ಥ್ಯಕ್ಕೆ ಇದೊಂದು ಪರೀಕ್ಷಾ ಕಾಲವೆಂದು ಭಾವಿಸಿ ರಾಜಾ ವೆಂಕಟಪ್ಪ ನಾಯಕನು ಹುಲಿಯಂತೆ ಗರ್ಜಿಸುತ್ತಾ ತನ್ನ ಸೈನಿಕರಿಗೆ ಪ್ರೇರಣೆ ಗೈಯುತ್ತಾ ಸಿಂಹದ ಮರಿಯಂತೆ ವೈರಿಗಳ ಮೇಲೆ ಎರಗಿದನು. ಕ್ಯಾಪ್ಟನ್ ನ್ಯೂಬೇರಿಯನ್ನು ಕೊಲ್ಲಲಾಯಿತು. ಸ್ಟೂ ಆರ್ಟನ್‌ನ ಮೂಳೆ ಮುರಿದು ಮೂರ್ಛೆಗೊಳಿಸಲಾಯಿತು. ಬೇಡ ವೀರರ ಮುಂದೆ ಆಂಗ್ಲರ ಆಟ ನಡೆಯಲಿಲ್ಲ. ಅಭೇದ್ಯವಾದ ಸುರಪುರ ಕೋಟೆಯು ಆಂಗ್ಲರಿಗೆ ಪ್ರಶ್ನೆಯಾಗಿಯೇ ಉಳಿಯಿತು. ಎಷ್ಟೋ ಆಂಗ್ಲ ಸೈನಿಕರು ಮತ್ತು ನಿಜಾಮನ ಸೈನಿಕರು ಯುದ್ಧದಲ್ಲಿ ಸತ್ತರು.

ಅಸೂಯೆ, ಅಂತಃಕಲಹ, ಲಂಚಗುಳಿತನ ನಮ್ಮ ದೇಶಕ್ಕೆ ಅಂಟಿಕೊಂಡ ಜಾಡ್ಯಗಳು. ಇದರಿಂದ ವೆಂಕಟಪ್ಪ ನಾಯಕನ ಸೈನ್ಯವು ಸೋಲಬೇಕಾಯಿತು. ಹೆಚ್ಚಿನ ಸೈನ್ಯವನ್ನು ತರಲು ಗುಪ್ತವಾಗಿ ವೆಂಕಟಪ್ಪ ನಾಯಕನು ಹೈದರಾಬಾದಿಗೆ ಹೋದನು. ಅದು ಅಫಜಲುದ್ದೌಲನ ಕಾಲ, ಇವನು ಸುರಪುರದ ಮಹಾದ್ವೇಷಿ. ಆದ್ದರಿಂದ ವೆಂಕಟಪ್ಪ ನಾಯಕನನ್ನು ಬಂಧಿಸಿ ಬ್ರಿಟೀಷರಿಗೆ ಒಪ್ಪಿಸಿದನು. ರಾಜನನ್ನು ಟೇಲರನು ಬಂಧನದಲ್ಲಿ ಕಂಡನು. ಬಂಧನದಲ್ಲಿರುವಾಗಲೂ ನಾಯಕನು "ನಾನೇನು ತಪ್ಪು ಮಾಡಿಲ್ಲ. ವೀರನಂತೆ ಸಾಯಲು ಸಿದ್ಧ. ಹೇಡಿಯಂತೆ ಬಾಳುವುದಿಲ್ಲ." ಹೈದರಾಬಾದಿನಲ್ಲಿ ರೆಸಿಡೆಂಟನು ನಾಯಕ ವೆಂಕಟಪ್ಪನನ್ನು ಭೇಟಿಯಾಗಲೂ ಬರುವೆನೆಂದು ತಿಳಿಸಿದನು. ಆಗ ವೆಂಕಟಪ್ಪ ನಾಯಕನ ಸ್ವಾಭಿಮಾನವನ್ನು ಕುರಿತು ಹೀಗೆ ಹೇಳುತ್ತಾನೆ.

"ನಾನು ನನ್ನ ಜೀವನದ ಸಲುವಾಗಿ ಬೇಡಿಕೊಳ್ಳುವನೆಂದು ರೆಸಿಡೆಂಟಿನ ಇಚ್ಛೆ ಇದ್ದಿರಬಹುದು. ಅದೆಂದಿಗೂ ಆಗದ ಮಾತು. ಜೀವವನ್ನು ಉಳಿಸಿಕೊಳ್ಳುವ ಹೇಡಿಯಂತೆ ನಾನು ಅವರನ್ನು ಬೇಡಿಕೊಳ್ಳಲಾರೆನು ಮತ್ತು ನನ್ನವರೊಡನೆ ವಿಶ್ವಾಸ ಘಾತುಕತನ ಮಾಡಲಾರೆನು."

ರಾಜಾ ವೆಂಕಟಪ್ಪ ನಾಯಕನ ಮಾತುಗಳನ್ನು ಟೇಲರನು ರೆಸಿಡೆಂಟನಿಗೆ ತಿಳಿಸಲು ರಾಜನ ವಿಷಯದಲ್ಲಿ ಕೇಳಿದ ಸಂಗತಿಗಳಿಗಿಂತ ಈ ಮಾತುಗಳು ಮಾತ್ರ ಅವನ ಮನಸ್ಸಿನಲ್ಲಿ ನೆಟ್ಟಂತಾಯಿತು. ರಾಜನ ಧೈರ್ಯ ಮತ್ತು ದೇಶಪ್ರೇಮವನ್ನು ಮೆಚ್ಚಿಕೊಂಡ ರೆಸಿಡೆಂಟನು ಈ ರೀತಿಯಾಗಿ ನುಡಿದನು. "ಪಾಪ ಹುಡುಗನಲ್ಲಿ ಇನ್ನೂ ಧೈರ್ಯವಿದೆ, ನೀನು ಹೇಳಿದ ಮಾತನ್ನು ನಾನು ಎಂದಿಗೂ ಮರೆಯಲಾರೆ" ಎಂದನಂತೆ. ಬಂಧನದಲ್ಲಿ ಇರಿಸಿದ್ದನ್ನು ಸಹಿಸದ ವೆಂಕಟಪ್ಪ ನಾಯಕನು ಈ ರೀತಿ ಘರ್ಜಿಸುತ್ತಾನೆ. ನನ್ನನ್ನು ಬೇಕಾದರೆ ತೋಪಿನ ಬಾಯಿಗೆ ಕಟ್ಟಿದರೆ ನಾನು ಅಂಜುವುದಿಲ್ಲ. ಒಂದೇ ಮಾತು ಕಳ್ಳನಂತೆ ಗಲ್ಲಿಗೆ ಹಾಕಬಾರದು. ಗಲ್ಲಿಗೇರಿಸುವಂತಹ ಕೆಲಸವೇನು ನಾನು ಮಾಡಿಲ್ಲ. ರೆಸಿಡೆಂಟನಿಗೆ ನಾನು ಬಯಸುವ ಅನುಗ್ರಹ ಇಷ್ಟೇ ಎಂದು ರೆಸಿಡೆಂಟನಿಗೆ ಹೇಳು" ಎಂದು ಟೇಲರನಿಗೆ ಬೇಡಿಕೊಂಡನು.

ಹೈದರಾಬಾದಿನ ರೆಸಿಡೆಂಟನಲ್ಲಿ ವಿಚಾರಣೆ ನಡೆಯಿತು. ಸೈನ್ಯ ನ್ಯಾಯಾಲಯದಲ್ಲಿ ವೆಂಕಟಪ್ಪ ನಾಯಕ ರಾಜದ್ರೋಹದ ಕಾರಣ ಮರಣ ದಂಡನೆ ವಿಧಿಸಲಾಯಿತು. ಟೇಲರನ ಪ್ರಯತ್ನದಿಂದಾಗಿ ಈ ನಾಲ್ಕು ವರ್ಷಗಳ ಬಂಧನವಾಗಿ ತೀರ್ಮಾನವಾಯಿತು. ದೊರೆಯನ್ನು ಮದ್ರಾಸಿನ ಸಮೀಪದ ಚೆಂಗಲ್ ಪೇಟೆಗೆ ಕರೆದುಕೊಂಡು ಹೋದರು.

ಬ್ರಿಟೀಷ್ ಅಧಿಕಾರಿಗಳ ರಕ್ಷಣೆಯಲ್ಲಿ ಪ್ರಯಾಣ ಸಾಗಿತು. ಬ್ರಿಟೀಷರು ಇಷ್ಟು ಹೊತ್ತಿಗಾಗಲೇ ಸ್ವಾತಂತ್ರ್ಯ ವೀರರಿಂದ ಸಾಕಷ್ಟು ಕಹಿಯನ್ನುಂಡಿದ್ದರು. ಅವರ ನಾಯಕನಾದ ಕರ್ನಾಟಕದ ಕ್ರಾಂತಿ, ಹುಲಿ, ವೀರಾಧಿವೀರ ರಾಜಾ ವೆಂಕಟಪ್ಪ ನಾಯಕನು ಜೀವಿಸಿದ್ದರೆ, ಕೇಡು ತಪ್ಪಿದ್ದಲ್ಲವೆಂದು ಮನಗಂಡು ಮೊದಲನೇ ಮೊಕ್ಕಾಂ ಎಂದರೇ ಕರ್ನೂಲ್‌ನಲ್ಲಿ ಆತನನ್ನು ಗುಂಡು ಹಾಕಿ ಕೊಲ್ಲಲಾಯಿತು. ನಿಜಾಂಶ ಬಯಲಿಗೆ ಬಾರದಂತೆ ಯಾರು ಇಲ್ಲದ ಸಮಯ ನೋಡಿ ಪಿಸ್ತೂಲನ್ನು ಪರಿಕ್ಷಿಸುತ್ತಿದ್ದ ನಾಯಕನು ಅದರ ಬಟನನ್ನು ಅದುಮಿದಾಗ ಗುಂಡು ತಾಗಿ ಮೃತಪಟ್ಟನೆಂದು ಇತಿಹಾಸ ಸೃಷ್ಟಿಯಾಯಿತು. ಈ ರೀತಿ ರಾಜಾ ವೆಂಕಟಪ್ಪ ನಾಯಕನು ವೀರ ಸ್ವರ್ಗ ಹೊಂದಿದನು./ ಸ್ವಾತಂತ್ರ್ಯದೇವಿಯ ಅಡಿದಾವರೆಗಳಿಗೆ ತನ್ನ ಜೀವನ ಪುಷ್ಪವನ್ನರ್ಪಿಸಿ ಅಮರನಾದನು.

ರಾಜಾ ವೆಂಕಟಪ್ಪ ನಾಯಕನು ನಾಡಾಡಿಗರ ಮಗನೇ ಅವನು ಅರಸು ಸಿಂಹವೆಂಬುದನ್ನು ನಾವೆಂದೂ ಮರೆಯಕೂಡದು. ಸ್ವಾತಂತ್ರ್ಯ ಸಂಗ್ರಾಮಕ್ಕೆ ನಾಂದಿ

ಹಾಡಿದ ಮಹಾಪುರುಷ. ಭಾರತದ ಇತಿಹಾಸದ ಪುಟಗಳಲ್ಲಿ ಸದಾ ಜೀವಂತವಾಗುಳಿದ ನಾವು ಜೀವಂತಿಕೆಯನ್ನು ಸಾಧಿಸಲು ಸ್ಫೂರ್ತಿ ಪುಂಜದ ಪುರುಷ ಮಣಿಯಾಗಿದ್ದಾನೆ.

**ಬ್ಯಾರಿಸ್ಟರ್ ರಾಜಾ ವೆಂಕಟಪ್ಪ ನಾಯಕ**

ಭಾರತ ದೇಶವು ಗಂಡುಗಲಿಗಳ ಬೀಡು. ಕೆಚ್ಚೆದೆಯ ಶೂರರ ನೆಲವೀಡು. ಭಾರತ ದೇಶದ ಕರ್ನಾಟಕದ ಸಗರ ನಾಡು ಗಂಡು ಮೆಟ್ಟಿದ ನೆಲವೆಂದೇ ಪ್ರಖ್ಯಾತಿ ಪಡೆದಿದೆ. ಅದರಲ್ಲಿ ಸಗರ ನಾಡಿನ ಸುರಪುರದ ಸಂಸ್ಥಾನವಂತೂ "ಎಂಟೆದೆಯ ಭಂಟರ ಭೂಮಿ" ಎಂದು ಖ್ಯಾತಿ ಪಡೆದಿದೆ. ಬ್ರಿಟೀಷರ ದರ್ಪದ ದುರಾಡಳಿತ ದೌರ್ಜನ್ಯದ ಅಟ್ಟಹಾಸವನ್ನು ಮಟ್ಟ ಹಾಕುವಲ್ಲಿ ಸುರಪುರದ ಬೇಡರ ಪಡೆಯು ದಿಟ್ಟತನದ ಹೋರಾಟ ಕೈಗೊಂಡಿದೆ.

ಬ್ರಿಟೀಷರ ಅಟ್ಟಹಾಸದ ತರುವಾಯ ಈ ನಾಡಿನಲ್ಲಿ ನಿಜಾಮನ ದುಷ್ಟ ಆಡಳಿತ ಮೇರೆ ಮೀರಿ ನಡೆಯಿತು. ಅನ್ಯಾಯ, ಅಸಮಾನತೆ, ದೌರ್ಜನ್ಯ, ದುರ್ನಡತೆಗಳಿಂದ ನಿಜಾಮ ಅಟ್ಟಹಾಸದಿಂದ ಮೆರೆಯುತ್ತಿದ್ದ. ಸುರಪುರ ಸಂಸ್ಥಾನದ ಬೇಡ ದೊರೆಗಳೂ ನಿಜಾಮನಿಗೆ ತಕ್ಕ ಪಾಠ ಕಲಿಸಲು ಕಂಕಣ ಬದ್ಧರಾಗಿ ನಿಂತರು. ಶೂರರ ಎದೆಯಾಳದಲ್ಲಿ ರಾಷ್ಟ್ರ ಪ್ರೇಮದ ಕಿಚ್ಚನ್ನು ಹಚ್ಚಿದರು. ರಾಷ್ಟ್ರೀಯತೆಯ ಅಸ್ತ್ರ ಹಿಡಿದು ಜನತೆಯನ್ನು ಜಾಗೃತಗೊಳಿಸಿದರು. ಬ್ರಿಟೀಷರ ರುಂಡ ಚಂಡಾಡಿದ ಈ ಗಂಡುಗಲಿಗಳಿಗೆ ನಿಜಾಮನ ಹಿಂಡನ್ನು ಸೋಲಿಸಲು ಬಹಳ ಕಾಲ ಬೇಕಾಗಲಿಲ್ಲ. ಈ ನಾಡಿನ ಪರಾಕ್ರಮಿಗಳ ಕಲಿತನಕ್ಕೆ ನಿಜಾಮ ತಲೆ ಬಾಗಲೇಬೇಕಾಯಿತು. ಅಂತಹ ಅಪ್ರತಿಮ, ಅನುಪಮ ವೀರ ಸಂಸ್ಥಾನ ಸುರಪುರದ ದೊರೆಗಳ ವಂಶದಲ್ಲಿ ರಾಜಾ ವೆಂಕಟಪ್ಪ ನಾಯಕರು ಜನ್ಮವೆತ್ತಿರುವುದು ಸಗರ ನಾಡಿನ ಜನರ ಪುಣ್ಯವೆಂದೇ ಹೇಳಬೇಕು. ಒಂದು ವೇಳೆ ಇಂತಹ ವೀರ ವ್ಯಕ್ತಿ ಜನಿಸದೇ ಹೋಗಿದ್ದಲ್ಲಿ ಇಂದು ನಾವು ಉಳಿಯಲು ಸಾಧ್ಯವಿರುತ್ತಿರಲಿಲ್ಲ.

**ರಾಜಾ ವೆಂಕಟಪ್ಪ ನಾಯಕರ ಜೀವನ ಚರಿತ್ರೆ**

ರಾಜಾ ಕೃಷ್ಣಪ್ಪನಾಯಕ ಮತ್ತು ರಾಣಿ ಶೇಷಮ್ಮನವರ ಗರ್ಭದಲ್ಲಿ ರಾಜಾ ವೆಂಕಟಪ್ಪ ನಾಯಕ ೨೯-೦೧-೧೯೧೦ ರಲ್ಲಿ ಸುರಪುರದ ವೀರ ಸಂಸ್ಥಾನದಲ್ಲಿ ಗೋಸಲ ವಂಶದ ಶೂರ ದೊರೆಗಳ ಮನೆತನದಲ್ಲಿ ಜನಿಸಿದರು. ರಾಜಾ ವೆಂಕಟಪ್ಪ ನಾಯಕರಿಗೆ ದಿಟ್ಟತನ, ಶೂರತನ, ಅಪ್ರತಿಮ ಕ್ರಾಂತಿಕಾರಿ ವಿಚಾರಗಳು ಹುಟ್ಟಿನಿಂದಲೇ ಅಂಟಿಕೊಂಡು ಬಂದಿದ್ದವು. ಸ್ವಾತಂತ್ರ್ಯ ದೇಶಪ್ರೇಮ ಹಾಗೂ ಭಾವೈಕ್ಯತೆಯ ಭಾವನೆಗಳು ನಾಯಕರಲ್ಲಿ ರಕ್ತಗತವಾಗಿದ್ದವು. ಬ್ರಿಟೀಷರ ಕಪಿ ಮುಷ್ಟಿಯಿಂದ ದೌರ್ಜನ್ಯದ ದುರಾಡಳಿತದಿಂದ ದೂರಾಗುವ ಕುರಿತು ಬಾಲ್ಯದಲ್ಲಿಯೇ ಚಿಂತಿಸುತ್ತಿದ್ದರು. ಬೆಳೆಯುವ ಪೈರು ಮೊಳಕೆಯಲ್ಲಿ ಎಂಬಂತೆ ಬಾಲಕನಾದ ರಾಜಾ ವೆಂಕಟಪ್ಪ ನಾಯಕರ ಮೈಯಲ್ಲಿ ಹರಿಯುವ ರಕ್ತ ರಾಜ ವಂಶದ್ದಾಗಿದ್ದು ಹಲವಾರು ಉನ್ನತ ವಿಚಾರಗಳು ಅವರಲ್ಲಿ ಕರಗತವಾಗಿದ್ದವು. ಅರಸುಕುಮಾರರಿಗೆ

ಅವಶ್ಯವಾದ ಎಲ್ಲಾ ಅರ್ಹತೆಗಳು ಅವರಲ್ಲಿ ಕಂಡು ಬರುತ್ತಿದ್ದವು. ಓದು-ಬರಹ, ಆಟ-ಓಟಗಳಲ್ಲಿ ಸ್ಪರ್ಧಾತ್ಮಕ ಮನೋಭಾವನೆ ವ್ಯಕ್ತವಾಗುತ್ತಿತ್ತು. ಇವರ ಆರಂಭದ ಶಿಕ್ಷಣವು ಸುರಪುರ ಸಂಸ್ಥಾನದ ದರ್ಬಾರ ಶಾಲೆಯಲ್ಲಿಯೇ ಪ್ರಾರಂಭವಾಯಿತು. ಇವರ ಪ್ರತಿಭೆ ಮತ್ತು ಬುದ್ಧಿವಂತಿಕೆಯನ್ನು ಕಂಡು ಶಿಕ್ಷಕರು ಬೆಚ್ಚಿ ಬೆರಗಾಗಿದ್ದರು.

ನಾಯಕರು ೧೩ನೇ ವಯಸ್ಸಿನಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸುರಪುರ ಸಂಸ್ಥಾನದಲ್ಲಿ ಮುಗಿಸಿಕೊಂಡು ಉನ್ನತ ವ್ಯಾಸಂಗಕ್ಕಾಗಿ ನಿಜಾಮನ ಸಂಸ್ಥಾನವಾದ ಹೈದರಾಬಾದಿಗೆ ತೆರಳಿದರು. ಅಲ್ಲಿ ಸೇಂಟ್ ಜಾರ್ಜ್ ಗ್ರಾಮರ್ ಹೈಸ್ಕೂಲ್‌ನಲ್ಲಿ ಸೇರಿಕೊಂಡರು. ಇವರು ವಿಶ್ವದ ಹಲವಾರು ಹೋರಾಟಗಾರರ ಮತ್ತು ದೇಶಪ್ರೇಮಿಗಳ ಜೀವನ ಚರಿತ್ರೆಯನ್ನು ಓದಿಕೊಂಡು ಅವರ ಕ್ರಾಂತಿಕಾರಿ ವಿಚಾರಗಳನ್ನು ಜೀವನದಲ್ಲಿ ಅಳವಡಿಸಿಕೊಂಡರು. "To remove the Indian Problems by good education"ಎಂಬುವುದು ರಾಜಾ ವೆಂಕಟಪ್ಪ ನಾಯಕರ ಸಿದ್ಧಾಂತವಾಗಿತ್ತು. ಅದರ ಜೊತೆಗೆ ಅವರ ಮೇಲೆ ಅಮೇರಿಕಾ ಮತ್ತು ಫ್ರೆಂಚ್ ಸ್ವಾತಂತ್ರ್ಯದ ಘೋಷಣೆಗಳಾದ ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರತ್ವ ಹೆಚ್ಚು ಪ್ರಭಾವ ಬೀರಿದ್ದವು. ಇವರು ಹೈದರಾಬಾದಿನಲ್ಲಿ ಓದುವಾಗ ಶಾಲೆಯಲ್ಲಿ ಅತ್ಯಂತ ಪ್ರತಿಭಾನ್ವಿತ ವಿದ್ಯಾರ್ಥಿಗಳಾಗಿದ್ದು ಆ ಶಾಲೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದರು.

ವಿದ್ಯಾರ್ಥಿವೇತನದ ಮೇಲೆ ಲಂಡನ್‌ನಲ್ಲಿ ಫ್ಯಾರಡೇ ಹೌಸ್ ಕಾಲೇಜಿನಲ್ಲಿ ಇಂಜಿನೀಯರಿಂಗ್ ವಿದ್ಯಾರ್ಥಿಯಾಗಿ ಅಧ್ಯಯನ ಪ್ರಾರಂಭಿಸಿದರು. ಆದರೆ ದುರ್ದೈವದಿಂದ ಇವರಿಗೆ ರಸ್ತೆ ಅಪಘಾತ ಸಂಭವಿಸಿ ಇಂಜಿನೀಯರಿಂಗ್ ಅಧ್ಯಯನಕ್ಕೆ ಶರಣು ಹೊಡೆಯಬೇಕಾಯಿತು. ತರುವಾಯ ಲಂಡನ್ ವಿಶ್ವವಿದ್ಯಾಲಯದಲ್ಲಿ ಎಲ್.ಎಲ್.ಬಿ. ಪದವಿಗೆ ಸೇರ್ಪಡೆಯಾದರು. ಯಥಾಗುರು ತಥಾ ಶಿಷ್ಯ ಎಂಬಂತೆ ರಾಜಾ ವೆಂಕಟಪ್ಪ ನಾಯಕರು ಲಂಡನ್‌ನಲ್ಲಿ ಓದುವಾಗ ಹೆರಾಲ್ಡ್ ಲಾಸ್ಕಿ ಮತ್ತು ಜಾರ್ಜ್ ಓಪೆನ್ ಐಮರ್ ಎಂಬ ಅಂತರ್ ರಾಷ್ಟ್ರೀಯ ಕಾನೂನು ತಜ್ಞರು ಮತ್ತು ರಾಜಕೀಯ ಚಿಂತಕರು ಇವರ ಪ್ರಾಧ್ಯಾಪಕರಾಗಿದ್ದರು. ಅವರ ಪ್ರಭಾವದಿಂದ ರಾಜಕೀಯ ಆಸಕ್ತಿ ಮತ್ತು ಜ್ಞಾನ ರಾಜಾ ವೆಂಕಟಪ್ಪ ನಾಯಕರಲ್ಲಿ ಬೆಳೆಯಲು ಅವಕಾಶವಾಯಿತು.

೧೯೩೮ರಲ್ಲಿ ತಮ್ಮ ಕಾನೂನು ಪದವಿಯನ್ನು ಮುಗಿಸಿಕೊಂಡು ತಾಯ್ನಾಡಿಗೆ ವಾಪಸ್ಸಾದ ರಾಜಾ ವೆಂಕಟಪ್ಪ ನಾಯಕರಿಗೆ ತಾಯ್ನಾಡಿನಲ್ಲಿ ಹಲವಾರು ಸಮಸ್ಯೆಗಳು ಎದುರಾದವು. ಒಂದು ಕಡೆ ಭಾರತದಲ್ಲಿ ಗಾಂಧೀಜಿಯವರ ನಾಯಕತ್ವದಲ್ಲಿ ಭರದಿಂದ ಸಾಗಿದ ಸ್ವಾತಂತ್ರ್ಯ ಚಳುವಳಿ ಮತ್ತೊಂದು ಕಡೆಗೆ ತನ್ನ ಪ್ರಾಂತ್ಯ ಹೈದರಾಬಾದ ನಿಜಾಮನ ದುರಾಡಳಿತದ ಕಪಿ ಮುಷ್ಟಿಗೆ ಸಿಕ್ಕು ಉಸಿರುಗಟ್ಟಿ ಒದ್ದಾಡುವ ತನ್ನ ಪ್ರಜೆಗಳ ಹೀನ

ಸ್ಥಿತಿಗತಿ ನೋಡಿ ಮರುಗಿದ ರಾಜಾ ವೆಂಕಟಪ್ಪ ನಾಯಕರು ಎದೆಗುಂದದೇ ಈಸಬೇಕು ಇದ್ದು ಜೈಸಬೇಕು ಎಂಬ ಮಂತ್ರವನ್ನು ಹೈದರಾಬಾದಿನಲ್ಲಿ ಮತ್ತು ಮುಂಬಯಿ ಹೈಕೋರ್ಟನಲ್ಲಿ ಏಕಕಾಲದಲ್ಲಿ ಪ್ರಖ್ಯಾತ ವಕೀಲರಾದ ಎಂ. ಸಿ. ಶೆಟಲ್ ಅವರ ಜ್ಯೂನಿಯರ್ ಆಗಿ ತಮ್ಮ ವಕೀಲ ವೃತ್ತಿ ಜೀವನವನ್ನು ಆರಂಭಿಸಿದರು. ಕೆಲವೇ ದಿನಗಳಲ್ಲಿ ಇವರ ಕ್ರಾಂತಿಕಾರಿ ವಿಚಾರಗಳನ್ನು ಮತ್ತು ಕಾನೂನಿನ ಬಗ್ಗೆ ಅಪಾರ ಜ್ಞಾನವನ್ನು ಕಂಡು ಉತ್ತಮ ಭವಿಷ್ಯವಿದೆ ಎಂದು ಇವರ ಸಹೋದ್ಯೋಗಿಗಳು ಅಭಿಪ್ರಾಯಪಟ್ಟಿದ್ದುಂಟು.

**ರಾಜಾ ವೆಂಕಟಪ್ಪ ನಾಯಕರ ಕೌಟುಂಬಿಕ ಜೀವನ**

ರಾಜಾ ವೆಂಕಟಪ್ಪ ನಾಯಕರು ಲಂಡನ್‌ನಿಂದ ವಾಪಸ್ಸಾದ ಕೆಲವೇ ದಿನಗಳಲ್ಲಿ ತಮ್ಮ ಸಹೋದರಿ ಮಗಳಾದ ರಾಣಿ ಸತ್ಯಮ್ಮ ಎಂಬುವರ ಕೈ ಹಿಡಿದು ಸಾಂಸಾರಿಕ ಜೀವನಕ್ಕೆ ಪಾದಾರ್ಪಣೆ ಮಾಡಿದರು. ಇವರಿಗೆ "ರಾಜಾ ಸೀತಾರಾಮ ನಾಯಕ, ರಾಜಾ ಕೃಷ್ಣಪ್ಪ ನಾಯಕ, ರಾಜಾ ಶ್ರೀನಿವಾಸ ನಾಯಕರೆಂಬ ಮೂರು ಜನ ಗಂಡು ಮಕ್ಕಳು ಹಾಗೂ ರಾಣಿ ಯಂಕಮ್ಮ, ರಾಣಿ ಉಷಾದೇವಿ, ರಾಣಿ ಕಮಲಾ" ಎಂದು ಮೂರು ಜನ ಹೆಣ್ಣು ಮಕ್ಕಳು ಇದ್ದು, ರಾಜರು ಕುಟುಂಬಕ್ಕೆ ಮಾತ್ರ ತಮ್ಮ ಸೇವೆ ಮೀಸಲಾಗಿಡದೆ ದೇಶದ ಸ್ವಾತಂತ್ರ್ಯ ಹೋರಾಟದ ಕಡೆಗೆ ತಮ್ಮ ಗಮನವನ್ನು ಹರಿಸಿದರು. ತಮ್ಮ ಕೌಟುಂಬಿಕ ಜೀವನವಾಗಲಿ ಮತ್ತು ಸುತ್ತಮುತ್ತಲಿನ ಪರಿಸರವಾಗಲೀ ಇವರ ಹೋರಾಟದ ಬದುಕಿಗೆ ಯಾವುದೇ ರೀತಿಯ ಅಡೆತಡೆ ಮಾಡದೇ ರಾಜಕೀಯ ಪ್ರವೇಶಕ್ಕೆ ಸ್ಫೂರ್ತಿ ನೀಡಿತು. ಏಕೆಂದರೆ ಇವರು ಬೆಳೆದ ಪರಿಸರವೇ ಆ ರೀತಿ ಇತ್ತು. ಇವರ ತಂದೆ ರಾಜಾ ವೆಂಕಟಪ್ಪ ನಾಯಕ ಮತ್ತು ತಾಯಿ ರಾಣಿ ಶೇಷಮ್ಮನವರಿಂದ ಸ್ವಾತಂತ್ರ್ಯ ಹೋರಾಟಕ್ಕೆ ಮತ್ತು ಜನ ಸೇವೆ ಮಾಡಲು ಸಾಕಷ್ಟು ಪ್ರೋತ್ಸಾಹ ದೊರೆಯಿತು. ತಮ್ಮ ಬದುಕನ್ನು ಕೇವಲ ರಾಜಕೀಯಕ್ಕೆ ಮಾತ್ರ ಸೀಮಿತವಾಗಿಡದೇ ತಮ್ಮ ಮಕ್ಕಳಿಗೆ ಉತ್ತಮ ಶಿಕ್ಷಣ, ಆಚಾರ, ವಿಚಾರಗಳು, ನಡೆ, ನುಡಿ, ಸಂಸ್ಕೃತಿ ಮತ್ತು ಸಂಪ್ರದಾಯಗಳು, ದೇಶಪ್ರೇಮ, ಭಾವೈಕ್ಯತೆ, ಇತ್ಯಾದಿ ಮಾನವೀಯ ಮೌಲ್ಯಗಳನ್ನು ಕಲಿಸಿ ಸಮಾಜದಲ್ಲಿ ಉತ್ತಮ ನಾಗರಿಕರಾಗಿ ಹಾಗೂ ಸ್ವಾವಲಂಬಿಗಳನ್ನಾಗಿ ಜೀವಿಸುವಂತೆ ಮಾಡಿದ್ದಾರೆ.

ರಾಜಾ ವೆಂಕಟಪ್ಪ ನಾಯಕರ ಸುಪ್ತವಾದ ರಾಜಕೀಯ ಪ್ರಜ್ಞೆಯನ್ನು ಹೋರಾಟದ ಗುಣವನ್ನು ಸಂಘಟನಾ ಚತುರತೆಯನ್ನು ವಕೀಲರಾದ ಕಾಶಿನಾಥರಾವ ಅವರು ಗುರುತಿಸಿದ್ದು ವೆಂಕಟಪ್ಪ ನಾಯಕರಿಗೆ ವರವಾಗಿ ಪರಿಣಮಿಸಿತ್ತು. ಇವರನ್ನು ಕಾಶಿನಾಥರಾವ ವೈದ್ಯರು ದೆಹಲಿಯಲ್ಲಿ ವಾರ್ತಾ ಮತ್ತು ಪ್ರಸಾರ ಖಾತೆಯ ಸಚಿವರಾದ ಶ್ರೀ ಆರ್. ಆರ್. ದಿವಾಕ್ರ ಇವರಿಗೆ ಪರಿಚಯ ಮಾಡಿಸಿದರು. ಇವರ ಹೋರಾಟದ ಗುರಿ ಮತ್ತು ಉದ್ದೇಶಗಳನ್ನು ವಿವರಿಸಿದರು. ಸಂತೃಪ್ತರಾದ ಸಚಿವರು ಗೃಹ ಖಾತೆಯ ಸಚಿವರಾದ ಸರದಾರ ಪಟೇಲರಿಗೆ

ಭೇಟಿ ಮಾಡಿಸಿ, ಇವರ ಎಲ್ಲಾ ವಿಚಾರಗಳನ್ನು ತೆರೆದ ಮನಸ್ಸಿನಿಂದ ಮುಂದಿಟ್ಟರು. ಇದರಿಂದ ಪಟೇಲರು ರಾಜಾ ವೆಂಕಟಪ್ಪ ನಾಯಕರಿಗೆ ಅಗತ್ಯವಾದ ಸಹಕಾರ ನೀಡಲು ಭರವಸೆ ಇತ್ತರು. ಇದರಿಂದ ನಾಯಕರ ರಾಜಕೀಯ ಹೋರಾಟದ ಬದುಕಿಗೆ ಹೊಸ ಸ್ಫೂರ್ತಿ ದೊರೆತಂತಾಯಿತು. ತಾಳಿಕೋಟೆಯ ಶಿಬಿರದಲ್ಲಿ ತರಬೇತಿ ಪಡೆದು ೭೦ ಜನ ಸ್ವಾತಂತ್ರ್ಯ ಹೋರಾಟಗಾರರಿಗೆ ಕಠಿಣ ತರಬೇತಿ ನೀಡಿ ಪ್ರೋತ್ಸಾಹಿಸುವುದರ ಜೊತೆಗೆ ನಿಜಾಮನ ಆಡಳಿತದ ವಿರುದ್ಧ ಹೋರಾಟ ಪ್ರಾರಂಭಿಸಿದರು. ಹುಣಸಗಿ, ಕಕ್ಕೇರಾ, ಕೊಡೆಕಲ್, ಕೆಂಭಾವಿ, ಮಾಲಗತ್ತಿ ಇತ್ಯಾದಿ ಸ್ಥಳಗಳಲ್ಲಿ ಭಾರತದ ತ್ರಿವರ್ಣ ಧ್ವಜವನ್ನು ಹಾರಿಸಿ ವಂದೇ ಮಾತರಂ ಎಂಬ ರಾಷ್ಟ್ರಗೀತೆಯನ್ನು ಹಾಡಿದರು. ಇದನ್ನು ತಿಳಿದ ರಜಾಕಾರರ ಸೈನಿಕರು ಸ್ವಯಂ ಸೇವಕರನ್ನು ಬಂಧಿಸಿ ಜೈಲಿನಲ್ಲಿ ಇಟ್ಟರು.

೧೯೪೮ರಲ್ಲಿ ಪಟೇಲರ ನೇತೃತ್ವದಲ್ಲಿ ಹೈದರಾಬಾದ್ ಸಂಸ್ಥಾನದ ಮೇಲೆ ಪೋಲೀಸ್ ಕಾರ್ಯಾಚರಣೆ ಮಾಡಲಾಯಿತು. ಇದರಿಂದ ನಿಜಾಮನು ಭಾರತ ಸರಕಾರಕ್ಕೆ ಶರಣಾಗಿ ಒಕ್ಕೂಟದಲ್ಲಿ ಸೇರಿಕೊಳ್ಳಲು ಒಪ್ಪಿದನು.

ಅದೇ ದಿನ ಅಂದರೆ ೧೯೪೮ ಸೆಪ್ಟೆಂಬರ್ ೧೭ನೇ ತಾರೀಖು ಸಾಯಂಕಾಲ ರಾಜಾ ವೆಂಕಟಪ್ಪ ನಾಯಕರ ರಾಜಕೀಯ ಸಾಧನೆಗಳು ಮತ್ತು ಅವರ ಧೈರ್ಯ, ರಾಷ್ಟ್ರಪ್ರೇಮ ಇತ್ಯಾದಿಗಳನ್ನು ಕುರಿತು ಸ್ಯಾಟಲೈಟ್ ಕಾರ್ಯಕ್ರಮದಲ್ಲಿ ೧೫ ನಿಮಿಷಗಳ ಕಾರ್ಯಕ್ರಮವನ್ನು ಪ್ರಸಾರ ಮಾಡಲಾಯಿತು. ಅದೇ ವಿಷಯವನ್ನು ರೇನ್‌ಬೋ ನ್ಯೂಸ್ ಮ್ಯಾಗಜೀನ್‌ನಲ್ಲಿ ಪ್ರಕಟಣೆ ಮಾಡಲಾಯಿತು. ಇಂತಹ ಮಹಾನ್ ರಾಷ್ಟ್ರಪ್ರೇಮಿಯನ್ನು ದೇಶಕ್ಕೆ ಪರಿಚಯ ಮಾಡಿಕೊಟ್ಟ ಆಗಿನ ಸಚಿವರಾದ ಶ್ರೀ ಆರ್. ಆರ್. ದಿವಾಕರ ಅವರಿಗೆ ರಾಜಾ ವೆಂಕಟಪ್ಪ ನಾಯಕರು ಮತ್ತು ಕನ್ನಡಿಗರು ಚಿರಋಣಿಯಾಗಿರಬೇಕಾದುದು ತೀರಾ ಅವಶ್ಯಕತೆಯೇ ಸರಿ.

೨೦ನೇ ಶತಮಾನದ ಮಹಾನ್ ಗಾಂಧಿವಾದಿಗಳಲ್ಲಿ ಒಬ್ಬರಾದ ರಾಜಾ ವೆಂಕಟಪ್ಪ ನಾಯಕರು ಶ್ರೇಷ್ಠ ಬುದ್ಧಿಜೀವಿಗಳು. ಚಿಂತಕರು, ಉತ್ತಮ ಕಾನೂನು ತಜ್ಞರು, ನುರಿತ ರಾಜಕೀಯ ಧುರೀಣರು, ಹಾಗೂ ಜನರ ಬಗ್ಗೆ ಕಳಕಳಿಯುಳ್ಳವರು. ಆಡಂಬರದ ಜೀವನಕ್ಕೆ ಮಾರುಹೋಗದ ಸರಳ ಜೀವಿಗಳು. ನುಡಿದಂತೆ ನಡೆಯುವ ಸ್ವಭಾವವುಳ್ಳವರು ಹಾಗೂ ಪ್ರಜಾಪ್ರಭುತ್ವ ವಾದಿಗಳಾಗಿದ್ದಾರೆ. ರಾಜಾ ವೆಂಕಟಪ್ಪ ನಾಯಕರು ಬಹುಮುಖ ಪ್ರತಿಭೆಯುಳ್ಳ ನಾಯಕರಾಗಿದ್ದಾರೆ. ಏಕೆಂದರೆ ಇವರು ತಮ್ಮ ಬದುಕನ್ನು ಸ್ವಾತಂತ್ರ್ಯ ಚಳುವಳಿ ಹಾಗೂ ರಾಜಕೀಯಕ್ಕೆ ಮುಡಿಪಾಗಿಡದೇ ಸಂಗೀತ ಮತ್ತು ತಬಲ ಭಾರಿಸುವುದರಲ್ಲಿ ಅತ್ಯಂತ ಪ್ರವೀಣರಾಗಿದ್ದಾರೆ. ಭಾರತದಲ್ಲಿ ಖ್ಯಾತ ತಬಲ ವಾದಕರಾದ ಶೇಖ್ ದಾವೂದ್ ಇವರು ವೆಂಕಟಪ್ಪ ನಾಯಕರ ಗುರುಗಳಾಗಿದ್ದರು. ಸುರಪುರದಲ್ಲಿ ಹಿಂದುಸ್ತಾನಿ ಶಾಸ್ತ್ರೀಯ ಸಂಗೀತವನ್ನು ಬೆಳೆಸುವುದರಲ್ಲಿ ಇವರ ಪಾತ್ರ ಪ್ರಮುಖವಾಗಿದೆ.

## ೨.೫ ಹೈದ್ರಾಬಾದ ಕರ್ನಾಟಕ ವಿಮೋಚನೆಯಲ್ಲಿ ಬೇಡ ನಾಯಕರ ಪಾತ್ರ

ಭರತ ಭೂಮಿ ಪುಣ್ಯ ಭೂಮಿಯೆಂದು ಪ್ರಾಚೀನ ಕಾಲದಿಂದಲೂ ಖ್ಯಾತಿವೆತ್ತಿದೆ. ವೇದಗಳು ಇದರ ಪಾವಿತ್ರ್ಯವನ್ನು ಹೊಗಳಿವೆ. ಉಪನಿಷತ್ತುಗಳು ಇದರ ಘನತೆಗೆ ಗೌರವಗಳನ್ನು ಎತ್ತಿ ಹಿಡಿದಿವೆ. ಪುರಾಣಗಳಂತೂ ಚಾರಿತ್ರಿಕ ಘನತೆಯಿಂದಾಗಿ ಇದನ್ನು ಭೂ ವೈಕುಂಠವೆಂದು ಸಾರಿವೆ. ಇಂತಹ ಪವಿತ್ರತಮ ಭೂಮಿಯ ಒಂದು ಅವಿಭಾಜ್ಯ ಅಂಗವಾದ ಕನ್ನಡನಾಡು ಪೌರಾಣಿಕ ದೃಷ್ಟಿಯಿಂದ ಅಷ್ಟೇ ಘನತೆವೆತ್ತ ನಾಡಾಗಿದೆ. ಅದರ ವಾತ್ಸಲ್ಯದ ಮಗುವೆನಿಸಿದ ಗುಲಬರ್ಗಾ ಮತ್ತು ಯಾದಗಿರಿ ಜಿಲ್ಲೆಗಳಲ್ಲಿಯೂ ಪುಣ್ಯ ತೀರ್ಥ ಕ್ಷೇತ್ರಗಳ ದೆಸೆಯಿಂದಲೂ ಒಂದು ಕಾಲಕ್ಕೆ ಅತ್ಯಂತ ವೈಭವೋಪೇತ ನಾಡಾಗಿತ್ತೆಂಬುದು ಅದರ ಹಿರಿಮೆ–ಗರಿಮೆಗಳಿಂದ ವ್ಯಕ್ತವಾಗುತ್ತದೆ. ಯಾದಗಿರಿ ಜಿಲ್ಲೆಯಲ್ಲಿ ಆಳಿಹೋದ ಹಲವಾರು ಅರಸು ಮನೆತನಗಳು ಕಲೆ, ಸಾಹಿತ್ಯ, ಸಂಸ್ಕೃತಿ ಮತ್ತು ವೀರತನ, ಶೂರತನ ಅಪ್ರತಿಮ ಸಾಹಸ ಇವುಗಳಿಂದ ಭಾರತೀಯ ಇತಿಹಾಸದಲ್ಲಿ ಶಾಶ್ವತವಾಗಿ ಉಳಿದಿದ್ದಾರೆ. ಅದೇ ರೀತಿಯಾಗಿ ಬ್ರಿಟೀಷರ ಹಾಗೂ ರಜಾಕಾರರ ವಿರುದ್ಧದ ದಂಗೆಯಲ್ಲಂತೂ ಈ ಜಿಲ್ಲೆಯ ನಾಯಕರು ಅತ್ಯಂತ ಪ್ರಮುಖ ಪಾತ್ರವನ್ನು ತಮ್ಮ ಪ್ರಾಣವನ್ನು ಪಣಕ್ಕಿಟ್ಟು ನಾಡಿನ ರಕ್ಷಣೆಗೋಸ್ಕರ ಹಲವಾರು ವೀರ ಸುಪುತ್ರರು ಸಾವಿಗೀಡಾದರು. ಅದರಲ್ಲಿ ವಿಶೇಷವಾಗಿ ಬೇಡ ನಾಯಕರ ಪಾತ್ರವಂತೂ ಜೀವಂತ ಸಾಕ್ಷಿಯಾಗಿದೆ. ೧೯೪೭ ಆಗಸ್ಟ್ ೧೫ರ ಮಧ್ಯರಾತ್ರಿಯ ತರುವಾಯ ಹೈದರಾಬಾದ ಸಂಸ್ಥಾನದಲ್ಲಿ ನಡೆದ ವ್ಯಾಪಕ ದೌರ್ಜನ್ಯಗಳಿಗೆ ಧಾರ್ಮಿಕ ತೀವ್ರಗಾಮಿಗಳ ಸಂಸ್ಥೆಯಾದ ಇತ್ತಹದ್–ಉಲ್–ಮುಸಲ್ ಮೀನ್ ಮುಖ್ಯ ಕಾರಣವಾಗಿತ್ತು. ಈ ಸಂಸ್ಥೆಯ ಸ್ಥಾಪನೆಯನ್ನು ಲಾತೂರಿನ ಪ್ರಸಿದ್ಧ ವಕೀಲನಾಗಿದ್ದ ಖಾಸಿಂ ರಜ್ವಿ ಮತ್ತು ರೆಹಮಾನಯೇ–ದಕ್ಕನ್ ಪತ್ರಿಕೆಯ ಸಂಪಾದಕನಾಗಿದ್ದ ಮಹಮ್ಮದ್ ಸಿದ್ದಿಕಿ ಇವರುಗಳು ಕೈಗೊಂಡಿದ್ದರು. ಇತಹಾದ್–ಉಲ್–ಮುಸಲ್ಮಿನ್ ಸಂಸ್ಥೆಯ ಅಧ್ಯಕ್ಷನಾಗಿ ಬಹದ್ದೂರ್ ಯಾರ್ ಜಂಗ್ ಅವರ ದಾಳಿಗಳನ್ನು ನಿರ್ದೇಶಿಸುತ್ತ ಕೋಮುಭಾವನೆಗಳನ್ನು ಪ್ರಚೋಧಿಸುವ ಭಾಷಣಗಳನ್ನು ನೀಡುತ್ತಿದ್ದರು.

೧೯೪೭ರ ಸ್ವಾತಂತ್ರ್ಯ ಬಂದ ರಾತ್ರಿ ಗುಲಬರ್ಗಾ ರೈಲು ನಿಲ್ದಾಣಕ್ಕೆ ಬಂದ ಎಲ್ಲಾ ರೈಲುಗಳಿಗೂ ರಾಷ್ಟ್ರಧ್ವಜಗಳನ್ನು ಕಟ್ಟಲಾಗಿತ್ತು, ಮತ್ತು ಅವುಗಳಲ್ಲಿ ಒಂದೇ ಸಮನೇ ವಂದೇ ಮಾತರಂ ಕೇಳಿ ಬರುತ್ತಿತ್ತು. ರಜಾಕಾರರು ರೈಲುಗಳನ್ನು ನಿಲ್ಲಿಸಿ, ರಾಷ್ಟ್ರ ಧ್ವಜವನ್ನು ಹರಿದು ಹಾಕಿ ಪ್ರಯಾಣಿಕರು ಮೌನದಿಂದ ಸಾಗುವಂತೆ ನಿರ್ದೇಶಿಸುತ್ತಿದ್ದರು. ಅಮಾಯಕರ ಮೇಲೆ ದಾಳಿ ಮಾಡಿ ಕೊಲೆ ಸುಲಿಗೆಗಳನ್ನು ಮಾಡುತ್ತಿದ್ದರು. ಎಷ್ಟೋ ಜನ ಹಿಂದೂ ಮಹಿಳೆಯರನ್ನು ಕಾಡಿಸಿ, ಪೀಡಿಸಿ, ಆಸ್ತಿ ಪಾಸ್ತಿಗಳನ್ನು ದೋಚಿಕೊಂಡು ಹೋಗುತ್ತಿದ್ದರು. ಇವರ ದೌರ್ಜನ್ಯಗಳು ಹೈದರಾಬಾದ ಕರ್ನಾಟಕ ಜನರ ಅಪಾರ ಆಸ್ತಿಪಾಸ್ತಿ ಪ್ರಾಣ ಹಾನಿಗೊಳಗಾಗಿರುವಂತೆ ಮಾಡಿದವು. ಇದರಿಂದ ರೊಚ್ಚಿಗೆದ್ದ ಗುಲ್ಬರ್ಗಾ ಜಿಲ್ಲೆಯ ನಾಯಕರು

ರಜಾಕಾರರ ಸೊಕ್ಕನ್ನು ಅಡಗಿಸಲು ಹಲವಾರು ಸಂಘಟನೆಗಳು ರಚಿಸಲ್ಪಟ್ಟವು. ಹೋರಾಟಕ್ಕಾಗಿ ಸ್ವಯಂ ಸೇವಕರ ಶಿಬಿರಗಳು ಗಡಿ ಭಾಗದಲ್ಲಿ ಪ್ರಾರಂಭವಾದವು. ಅಂತಹ ವೀರ ಹೋರಾಟಗಾರರಿಗೆ ಸಾರಥ್ಯವಹಿಸಿ ರಜಾಕಾರರ ಸೈನ್ಯವನ್ನು ಹಿಮ್ಮೆಟ್ಟಿಸಿದ ಕೀರ್ತಿ ಈ ಜಿಲ್ಲೆಯ ಬುಡಕಟ್ಟು ನಾಯಕರು ಎಂಬುದಕ್ಕೆ ಹೋರಾಟದ ಇತಿಹಾಸವೇ ಹೇಳುತ್ತದೆ. ವಿಶೇಷವಾಗಿ ಸುರಪುರ, ಶಹಾಪುರ, ಜೇವರ್ಗಿ ವೀರ ಬೇಡ ನಾಯಕರು ರಜಾಕಾರರ ವಿರುದ್ಧ ನಾಡ ಅಸ್ತ್ರಗಳನ್ನು ಹಿಡಿದು ಹೋರಾಟ ಮಾಡಿ ಜಯಶೀಲರಾಗಿದ್ದು ಗಣನೀಯ ಸಾಧನೆಯೇ ಸರಿ.

**ವಿಮೋಚನೆಯಲ್ಲಿ ಹೋರಾಟ ಮಾಡಿದ ಬೇಡ ನಾಯಕರು**

೧. "ಶ್ರೀ ಯಲ್ಲಪ್ಪ ತಂದೆ ಮಲ್ಲಪ್ಪ ಗಲಗ್

೧. ಹೆಸರು : ಯಲ್ಲಪ್ಪ (ಪಿ. ಸಂ. ೧೩೮)

೨. ತಂದೆ / ತಾಯಿ : ಮಲ್ಲಪ್ಪ ಮತ್ತು ಮಲ್ಲಮ್ಮ

೩. ಊರು ಮತ್ತು ತಾಲೂಕು: ಸಗರ ಶಹಾಪುರ

೪. ವಯಸ್ಸು: ೭೫

೫. ಜಾತಿ : ಬೇಡರು"[೧೭]

ಶ್ರೀ ಮಲ್ಲಪ್ಪ ಮತ್ತು ಮಲ್ಲಮ್ಮ ಎಂಬ ದಂಪತಿಗಳ ಮಗನಾದ ಯಲ್ಲಪ್ಪ ಎಂಬುವರು ಬೇಡ ಸಮುದಾಯದಲ್ಲಿ ಜನಿಸಿ ಐದನೇ ತರಗತಿಯವರೆಗೆ ಓದಿದ್ದಾರೆ. ಬಾಲ್ಯದಿಂದಲೂ ಅವರಿಗೆ ಬೇರೆ ಸಮುದಾಯ ಗೆಳೆಯರ ಸಹವಾಸವಿತ್ತು. ಓದುವಾಗ ಇತಿಹಾಸದ ವಿಷಯದಲ್ಲಿ ಆಸಕ್ತಿ ಉಳ್ಳ ಬಾಲಕ ಯಲ್ಲಪ್ಪನಿಗೆ ಹತ್ತನೇ ವರ್ಷದಲ್ಲಿ ಶಿವಾಜಿ, ಟಿಪ್ಪುಸುಲ್ತಾನ್, ರಾಣಾ ಪ್ರತಾಪ್ ಸಿಂಹ, ಕಿತ್ತೂರು ಚೆನ್ನಮ್ಮ ಇತ್ಯಾದಿ ರಾಷ್ಟ್ರ ಪ್ರೇಮಿಗಳ ಹಾಗೂ ಪರಕೀಯರ ವಿರುದ್ಧ ತಾಯ್ನಾಡಿಗಾಗಿ ಹೋರಾಟ ಮಾಡಿ ಪ್ರಾಣಾರ್ಪಣೆ ಮಾಡಿದ ಮಹಾನ್ ಸ್ವಾತಂತ್ರ್ಯ ಹೋರಾಟಗಾರರ ಪ್ರಭಾವ ಇವರ ಮೇಲೆ ಇತ್ತು. ೧೨ನೇ ವರ್ಷದ ಬಾಲಕನಾಗಿದ್ದಾಗ ತಾನು ಸಹಿತ ಪರಕೀಯರ ವಿರುದ್ಧ ಹೋರಾಟ ಮಾಡಬೇಕು. ಅವರನ್ನು ತಾಯ್ನಾಡಿನಿಂದ ಹೊರಹಾಕಬೇಕು ಮಾತೃಭೂಮಿಯನ್ನು ಪರಕೀಯರ ಬಂಧನದಿಂದ ವಿಮುಕ್ತಿ ಗೊಳಿಸಬೇಕೆಂಬ ಕನಸನ್ನು ಕಾಣುತ್ತಿದ್ದರು.

೫ನೇ ತರಗತಿಯ ನಂತರ ವ್ಯಾಸಂಗ ಮಾಡಲು ಆರ್ಥಿಕ ಅಡಚಣೆ ಇದ್ದ ಕಾರಣ ಇವರ ತಂದೆ ಮಲ್ಲಪ್ಪ ಗಲಗ್ ತನ್ನ ಮಗನನ್ನು ದನಗಳನ್ನು ಮೇಯಿಸುವ ಕೆಲಸಕ್ಕೆ ತೊಡಗಿಸಿದನು. ೧೮ನೇ ವಯಸಿನ ಶ್ರೀಮತಿ ನರಸಮ್ಮ ಎಂಬುವವರನ್ನು ವಿವಾಹವಾದರು. ಅದೇ ವೇಳೆಗೆ ಗುಲ್ಬರ್ಗಾ ಜಿಲ್ಲೆಯಲ್ಲಿ ರಜಾಕಾರರ ದಾಳಿ ಪ್ರಾರಂಭವಾಗಿತ್ತು. ಹಿಂದೂಗಳ

ಆಸ್ತಿ ಪಾಸ್ತಿಯನ್ನು ಲೂಟಿ ಮಾಡುವುದು ಹಿಂದೂ ಮಹಿಳೆಯರ ಮಾನ ಹರಣ ಮಾಡುವುದು ಇತ್ಯಾದಿ ಹೀನ ಕೃತ್ಯಗಳಲ್ಲಿ ತೊಡಗಿದ್ದರು. ಹಿಂದೂಗಳು ರಜಾಕಾರರ ವಿರುದ್ಧ ಏನೂ ಮಾಡುವಂತಿರಲಿಲ್ಲ. ಏಕೆಂದರೆ ಅವರ ಸ್ವಂತ ಬಸ್ಸು, ರೈಲು, ಪೋಲೀಸರು, ಸೈನ್ಯ ಮತ್ತು ನಾಣ್ಯ ಇತ್ಯಾದಿ ಇದ್ದು, ಅವರ ವಿರುದ್ದ ತಲೆ ಎತ್ತಿದರೆ ಅವರನ್ನು ಕ್ರೂರವಾಗಿ ಶಿಕ್ಷಿಸುತ್ತಿದ್ದರು. ಅಂತಹ ವೇಳೆಯಲ್ಲಿ ಅಚ್ಚಪ್ಪಗೌಡರು, ಜಗನ್ನಾಥರಾವ ಚಂಡ್ರಿಕಿ, ದತ್ತಾತ್ರೇಯ ಅವರಾದಿ, ವಿಶ್ವನಾಥರೆಡ್ಡಿ ಮುದ್ನಾಳ, ಮಲ್ಲಪ್ಪ ಕೋಲೂರು ಹಾಗೂ ರಾಜಾ ವೆಂಕಟಪ್ಪ ನಾಯಕರು ಈ ಭಾಗದ ಜನರನ್ನು ಜಾಗೃತಗೊಳಿಸಿ ರಜಾಕಾರರ ದಾಳಿಯನ್ನು ಹತ್ತಿಕ್ಕಲು ಯತ್ನ ಮಾಡಿದರು. ಗಡಿ ಭಾಗದ ಮೇಲೆ ಹಲವಾರು ಸ್ವಯಂ ಸೇವಕರು ಶಿಬಿರವನ್ನು ಆರಂಭಿಸಿ ತರಬೇತಿಯನ್ನು ಕೊಡುತ್ತಿದ್ದರು. ಆ ಶಿಬಿರದ ಸಕ್ರೀಯ ಸದಸ್ಯನಾದ ಇವರು ಶಿಬಿರದಿಂದ ಶಿಬಿರಕ್ಕೆ ಸುದ್ದಿ ಸಮಾಚಾರವನ್ನು ತಲುಪಿಸುತ್ತಿದ್ದರು. ಇದರಿಂದಾಗಿ ಇವರ ಕಾರ್ಯ ಚಟುವಟಿಕೆಯನ್ನು ನಿಯಂತ್ರಿಸಲು (ನಿಜಾಮನ) ಪೋಲೀಸರು ಇವರನ್ನು ಬಂಧಿಸಿ ಗುಲಬರ್ಗಾ ಜೈಲಿನಲ್ಲಿಟ್ಟು ಆರು ತಿಂಗಳು ಸಾಮಾನ್ಯ ಶಿಕ್ಷೆ ಕೊಟ್ಟರು.

೧೯೪೮ರ ಸೆಪ್ಟೆಂಬರ್ ೧೭ರಂದು ಪಟೇಲರ ಪೋಲೀಸ ಕಾರ್ಯಾಚರಣೆಯ ವೇಳೆಯಲ್ಲಿ ಯಲ್ಲಪ್ಪನವರು ಗುಲಬರ್ಗಾ ಜೈಲಿನಲ್ಲಿ ಇದ್ದರು. ಇವರ ತಾಯಿಯವರು ಆ ವೇಳೆಯಲ್ಲಿ ಬಂದು ಜೈಲಿನ ಮೇಲಾಧಿಕಾರಿಯನ್ನು ವಿನಂತಿಸಿಕೊಂಡಾಗ ಸ್ವತಃ ಯಲ್ಲಪ್ಪನೇ ಕ್ಷಮೆಯನ್ನು ಕೇಳಿದರೆ, ಮಾತ್ರ ಬಿಡುಗಡೆ ಮಾಡುತ್ತೇವೆ ಎಂದು ಹೇಳಿದರು. ತಾಯಿಯು ಯಲ್ಲಪ್ಪನವರನ್ನು ಒತ್ತಾಯ ಮಾಡಿದಾಗ ಮುಂದೆ ಇಟ್ಟ ಹೆಜ್ಜೆ ಹಿಂದೆ ಇಡುವುದಿಲ್ಲ. ಅವರು ಯಾವ ಶಿಕ್ಷೆ ಕೊಟ್ಟರೂ ಅನುಭವಿಸಲು ಸಿದ್ಧ ಎಂದು ಹೇಳಿದರು. ಪೋಲೀಸ್ ಕಾರ್ಯಾಚರಣೆಯ ನಂತರ ಯಲ್ಲಪ್ಪನನ್ನು ಬಿಡುಗಡೆ ಮಾಡಿದರು.

ಹಿಂದಿನ ರಾಜಕೀಯ ವ್ಯವಸ್ಥೆ ನಿಸ್ವಾರ್ಥ ಮತ್ತು ಕಳಂಕ ರಹಿತವಾಗಿತ್ತು. ಆಗಿನ ನಾಯಕರಲ್ಲಿ ಜನಸೇವಾ ಮನೋಭಾವನೆ ಇತ್ತೇ ವಿನಃ ಅಧಿಕಾರದ ವ್ಯಾಮೋಹವಾಗಲಿ, ಲಂಚ ರುಸುವತ್ತಗಳಂತಹ ದುರಾಸೆಗಳಾಗಲೀ ಇರಲಿಲ್ಲ. ಇಂದು ಸ್ವಾತಂತ್ರ್ಯದ ಸೋಗಿನಲ್ಲಿ ಬಡವರ ಶೋಷಣೆ, ಅನ್ಯಾಯ, ಅತ್ಯಾಚಾರ ಮತ್ತು ಅಧಿಕಾರಕ್ಕಾಗಿ ಕಚ್ಚಾಟ ನಡೆಯುತ್ತಿದೆ ಎಂದು ನೊಂದು ನುಡಿದರು. ಇವರಿಗೆ ನಾಲ್ಕು ಗಂಡು ಮಕ್ಕಳು ಮತ್ತು ನಾಲ್ಕು ಜನ ಹೆಣ್ಣು ಮಕ್ಕಳು ಇದ್ದು ಈಗಲೂ ಪಾದರಸದಂತೆ ತಿರುಗಾಡುತ್ತಾ ಪ್ರಸ್ತುತ ದೇಶದಲ್ಲಿ ರಾಜಕೀಯ ವ್ಯವಸ್ಥೆ ಕುರಿತು ಕಳಕಳಿ, ಚಿಂತನೆ ಮಾಡುತ್ತಾರೆ. ರಾಜಕೀಯದಿಂದ ದೂರವಿದ್ದ ಶ್ರೀ ಯಲ್ಲಪ್ಪನವರಿಗೆ ರಾಜಕೀಯ ಜ್ಞಾನವಿದ್ದರೂ ಅದು ಉಪಯೋಗವಿಲ್ಲದಂತಾಗಿದೆ.

೨. "ಶ್ರೀ ಮಲ್ಲಪ್ಪ ತಂದೆ ಸೋಪಣ್ಣ ಕರಿಗುಡ್ಡ

೧. ಹೆಸರು : ಮಲ್ಲಪ್ಪ (ಪಿ. ಸಂ. ೧೯೪೯)

೨. ತಂದೆ / ತಾಯಿ : ಸೋಪಣ್ಣ ಮತ್ತು ನರಸಮ್ಮ

೩. ಊರು ಮತ್ತು ತಾಲೂಕು: ಸಗರ ಶಹಾಪುರ

೪. ವಯಸ್ಸು: ೭೬

೫. ಜಾತಿ : ಬೇಡರು"[೧೮]

ಶ್ರೀ ಸೋಪಣ್ಣ ಮತ್ತು ಶ್ರೀಮತಿ ನರಸಮ್ಮ ಎಂಬ ದಂಪತಿಗಳ ಗರ್ಭದಲ್ಲಿ ಮಲ್ಲಪ್ಪ ಶಹಾಪುರ ತಾಲೂಕಿನ ಸಗರ ಎಂಬ ಗ್ರಾಮದಲ್ಲಿ ಜನಿಸಿದರು. ಬೇಡ ಸಮುದಾಯದಲ್ಲಿ ಜನಿಸಿದ ಮಲ್ಲಪ್ಪನು ದೈಹಿಕವಾಗಿ ಗಟ್ಟಿಮುಟ್ಟಾಗಿದ್ದು, ಮಾನಸಿಕವಾಗಿ ದೃಢವಾಗಿದ್ದನು. ಮನಸ್ಸಿನಲ್ಲಿ ಮೂಡಿದ್ದನ್ನು ಮಾಡದೇ ಬಿಡುತ್ತಿರಲಿಲ್ಲ. ಆರ್ಥಿಕ ತೊಂದರೆಯಿಂದ ಅಕ್ಷರ ಜ್ಞಾನದಿಂದ ವಂಚಿತನಾದ ಶ್ರೀ ಮಲ್ಲಪ್ಪ ಕರಿಗುಡ್ಡ ಬಾಲ್ಯದಲ್ಲಿ ತುಂಬ ತುಂಟನಾಗಿದ್ದ. ಒಂದಿಲ್ಲ ಒಂದು ರೀತಿಯ ಜಗಳ ಕಾಯುತ್ತಿದ್ದನು. ಆದ್ದರಿಂದ ಇವರ ತಂದೆ ಬಾಲ್ಯದಲ್ಲಿ ದನಗಳನ್ನು ಮೇಯಿಸಲು ತೊಡಗಿಸಿದನು. ಸಗರನಾಡು ಚಿಕ್ಕಪುಟ್ಟ ಬೆಟ್ಟಗಳಿಂದ ಕೂಡಿದ್ದಿತ್ತು. ದಿನಾಲು ಬೆಟ್ಟಗಳ ಮೇಲೆ ಹತ್ತಿ ಇಳಿಯುವುದರಿಂದ ಉತ್ತಮ ವ್ಯಾಯಾಮವಾಗಿ ದೈಹಿಕವಾಗಿ ದೃಢಕಾಯನಾಗಲು ಸಹಾಯವಾಗಿತ್ತು. ಅಲ್ಲಿ ಅವನ ಸಂಗಡಿಗರೊಂದಿಗೆ ಕುಸ್ತಿ ಮತ್ತು ಭಾರ ಎತ್ತುವ ಕಲೆಯನ್ನು ಕರಗತ ಮಾಡಿಕೊಂಡಿದ್ದನು. ಧೈರ್ಯ ಸಾಹಸಗಳು ಮಲ್ಲಪ್ಪನಿಗೆ ಸಮುದಾಯದಿಂದ ಬಳುವಳಿಯಾಗಿ ಬಂದಿದ್ದವು.

೧೮ನೇ ವಯಸ್ಸಿನಲ್ಲಿ ಶರಣಮ್ಮ ಎಂಬಾಕೆಯನ್ನು ಕೈ ಹಿಡಿದನು. ಅದೇ ವೇಳೆಗೆ ಈಗಿನ ಯಾದಗಿರಿ ಜಿಲ್ಲೆಯ ಪ್ರಮುಖ ಹೋರಾಟಗಾರರಾದ ಅಚ್ಚಪ್ಪಗೌಡರು, ನಂದಿಕೋಲು ಶಿವಪ್ಪ, ಮಲ್ಲಪ್ಪ ಕೋಲೂರು, ಜಗನ್ನಾಥರಾವ ಚಂಡ್ರಿಕಿ, ಇವರೆಲ್ಲರ ಪರಿಚಯವಾಯಿತು. ಇವರ ಪ್ರೇರಣೆಯಿಂದ ಮಲ್ಲಪ್ಪ ಬದುಕಿನಲ್ಲಿ ಹೊಸ ತಿರುವು ಮೂಡಿತು. ಕೋಲು ಹಿಡಿಯುವ ಕೈ ಖಡ್ಗ ಹಿಡಿಯಿತು ಎಂಬಂತೆ ಮಲ್ಲಪ್ಪನವರು ರಾಜಾ ವೆಂಕಟಪ್ಪ ನಾಯಕರ ನೇತೃತ್ವದಲ್ಲಿ ತಾಳಿಕೋಟೆಯ ಜನಹಿತ ಶಿಬಿರದಲ್ಲಿ ಸ್ವಯಂ ಸೇವಕ ತರಬೇತಿಯನ್ನು ಪಡೆದುಕೊಂಡು ನಿಜಾಮ ಸರ್ಕಾರದ ವಿರುದ್ಧ ಗಡಿ ಭಾಗದ ಮೇಲೆ ಲೂಟಿ, ದಂಗೆ ಪ್ರಾರಂಭಿಸಿದ. ಅವನ ಸೈನಿಕರಿಗೆ ನುಂಗಲಾರದ ತುತ್ತಾಗಿದ್ದರು.

ಹೋರಾಟಗಾರರ ಕಾರ್ಯ ಚಟುವಟಿಕೆಯನ್ನು ನಿಯಂತ್ರಿಸಲು ನಿಜಾಮನು ತನ್ನ ಸೈನಿಕರ ಸಹಾಯದಿಂದ ಸಾಕಷ್ಟು ಪ್ರಯತ್ನ ಮಾಡಿದನು. ಅದರಲ್ಲಿ ಕೆಲವರು ರಜಾಕಾರರ ಗುಂಡಿಗೆ ಬಲಿಯಾದರು. ಇನ್ನೂ ಕೆಲವರನ್ನು ನಿಜಾಮನ ಪೋಲೀಸರು ಬಂಧಿಸಿ ಜೈಲಿನಲ್ಲಿಟ್ಟರು. ಅದೇ ವೇಳೆಗೆ ಹೈದರಾಬಾದ ನಿಜಾಮನ ಸಂಸ್ಥಾನದ ಮೇಲೆ ಪೋಲೀಸ್ ಕಾರ್ಯಾಚರಣೆ ನಡೆಯಿತು. ಸ್ವತಃ ನಿಜಾಮನೇ ಒಕ್ಕೂಟ ಸರಕಾರಕ್ಕೆ ಶರಣಾದನು. ಗುಲ್ಬರ್ಗಾ ಮತ್ತು ಯಾದಗಿರಿ ಜಿಲ್ಲೆಯು ನಿಜಾಮನ ನಿಯಂತ್ರಣದಿಂದ ವಿಮೋಚನೆ

ಪಡೆದವು. ಇಂತಹ ಮಹಾನ್ ಹೋರಾಟಗಾರನಿಗೆ ಜನ್ಮ ನೀಡಿದ ಯಾದಗಿರಿ ಜಿಲ್ಲೆ ಧನ್ಯ ಎಂದು ಹೆಮ್ಮೆಯಿಂದ ಹೇಳಬಹುದು.

ಬೇಡ ಜನರು ಜೀವಕ್ಕೆ ಭಯಪಡದೇ ಒಡೆಯನ ಆದೇಶವನ್ನು ಪ್ರಾಮಾಣಿಕತೆಯಿಂದ ಪಾಲಿಸುವ ನಿಷ್ಠಾವಂತರು ನಂಬಿಕೆಗೆ ಎಂದೂ ದ್ರೋಹ ಮಾಡುವವರಲ್ಲ. "ಹೋರಾಟ ಮಾಡುವುದಂತೂ ಈ ಸಮುದಾಯಕ್ಕೆ ನೀರು ಕುಡಿದಷ್ಟೇ ಸುಲಭ". ಒಡೆಯನು ಅಪ್ಪನೆ ನೀಡಿದರೆ ವೈರಿಯ ಮೇಲೆ ಹುಲಿಯಂತೆ ಎರಗುತ್ತಾರೆ. ವಿನಃ ಹೇಡಿಯಂತೆ ಅಂಜಿ ಬೆನ್ನು ಕೊಟ್ಟು ಓಡುವುದು ಇವರ ಜಾಯಮಾನದಲ್ಲಿಯೇ ಇಲ್ಲ. ಈಗಿನ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಕೇಳಿದ ಹಲವಾರು ಪ್ರಶ್ನೆಗಳಿಗೆ ವ್ಯಂಗ್ಯವಾಗಿ ನಗುತ್ತಾ ಸ್ವಾರ್ಥಿಗಳಿಂದ ತುಂಬಿದ ಭ್ರಷ್ಟ ರಾಜಕೀಯ ಬಗ್ಗೆ ದಯವಿಟ್ಟು ಪ್ರಶ್ನೆ ಕೇಳಿ ಕೆರಳಿಸಬೇಡಿರಿ ಎಂದು ಪ್ರತಿಕ್ರಿಯೆ ವ್ಯಕ್ತಪಡಿಸಿದರು.

೩. "ಶ್ರೀ ಹಣಮಂತ ತಂದೆ ಭಗವಂತಪ್ಪ ಸಗರ

೧. ಹೆಸರು : ಹಣಮಂತಪ್ಪ

೨. ತಂದೆ / ತಾಯಿ : ಭಗವಂತಪ್ಪ ಮತ್ತು ಸಾಬವ್ವ

೩. ಊರು ಮತ್ತು ತಾಲೂಕು: ಸಗರ ಶಹಾಪುರ

೪. ವಯಸ್ಸು: ೭೧

೫. ಜಾತಿ : ಬೇಡರು"[೧೯]

ಭಗವಂತಪ್ಪ ಮತ್ತು ಸಾಬವ್ವ ಎಂಬುವವರ ಮಗ ಹಣಮಂತಪ್ಪ ಬೇಡ ಸಮುದಾಯದಲ್ಲಿ ಶಹಾಪೂರ ತಾಲೂಕಿನ ಸಗರ ಗ್ರಾಮದಲ್ಲಿ ಜನಿಸಿದರು. ಈ ಸಮುದಾಯ ಯಾವುದೇ ಸ್ಥಿರಾಸ್ತಿ ಹೊಂದಿರಲಿಲ್ಲ. ಮೈ ಮುರಿದು ದುಡಿಯುವುದನ್ನು ಮಾತ್ರ ಬೆಳೆಸಿಕೊಂಡಿದ್ದರು. ಇವರ ತಂದೆ ಭಗವಂತಪ್ಪನು ಕೂಲಿ ಮಾಡುವುದರಿಂದ ಬಾಲಕ ಹಣಮಂತಪ್ಪನಿಗೆ ಶಾಲೆಗೆ ಕಳುಹಿಸಲು ಆಗಲಿಲ್ಲ. ೮ನೇ ವಯಸ್ಸಿನಿಂದ ಹಣಮಂತಪ್ಪನು ತಾಯಿ ಸಾಬವ್ವನ ಜೊತೆಗೆ ಚಿಕ್ಕ ಪುಟ್ಟ ಕೂಲಿ ಮಾಡಲು ಹೋಗುತ್ತಿದ್ದನು. ಈ ಸಮುದಾಯದ ವಿಶೇಷತೆ ಎಂದರೆ ಮಾಂಸಹಾರಿಗಳಾಗಿದ್ದು ಊಟಕ್ಕೆ ಮಾತ್ರ ಯಾವುದೇ ರೀತಿ ತೊಂದರೆ ಪಡುತ್ತಿರಲಿಲ್ಲ. ಶ್ರಮವಹಿಸಿ ದುಡಿದು ಹೊಟ್ಟೆ ತುಂಬ ತಿನ್ನುವುದೇ ಈ ಸಮುದಾಯದ ರೂಢಿಯಾಗಿತ್ತು.

ಬಿಡುವಿನ ವೇಳೆಯಲ್ಲಿ ಸಂಗಡಿಗರ ಜೊತೆಗೆ ಸಗರದ ಗುಡ್ಡಗಳಲ್ಲಿ, ಹಳ್ಳಕೊಳ್ಳಗಳಲ್ಲಿ ಬೇಟೆಯಾಡಲು ಹೋಗುತ್ತಿದ್ದನು. ಇದರಿಂದ ಬಾಲಕ ಹನುಮಂತಪ್ಪನು ದೈಹಿಕವಾಗಿ ಬಲಿಷ್ಠವಾಗಿ ಬೆಳೆದನು. ೧೫ನೇ ವಯಸ್ಸಿನಲ್ಲಿ ಹಣಮಂತಪ್ಪನು ಲಕ್ಷ್ಮವ್ವ ಎಂಬ ಹುಡುಗಿಯ

ಕೈ ಹಿಡಿದು ಸಂಸಾರಿಕ ಜೀವನವನ್ನು ಪ್ರಾರಂಭಿಸಿದನು. ಆ ವೇಳೆಯಲ್ಲಿ ಅವನ ಸ್ನೇಹಿತರಾದ ಯಲಪ್ಪ ಗಲಗ್ ಮತ್ತು ಮಲ್ಲಪ್ಪ ಇವರ ಪ್ರಭಾವದಿಂದ ತಾನು ಸಹಿತ ಅವರ ಜೊತೆಗೆ ಸೇರಿಕೊಂಡು ರಜಾಕಾರರ ವಿರುದ್ಧ ಹೋರಾಡುವ ಕನಸನ್ನು ಕಾಣುತ್ತಿದ್ದನು. ಆದರೆ ಹಣುಮಂತಪ್ಪನ ತಂದೆ ತಾಯಿಗಳು ನಾವು ಬಡವರು ನಮಗೇಕೆ ಈ ಎಲ್ಲಾ ಜಗಳಗಳು ಎಂದು ಮಗನಿಗೆ ಬುದ್ಧಿವಾದ ಹೇಳಿದರು. ಆದರೆ ಹಣಮಂತಪ್ಪನ ಯೌವನದ ಬಿಸಿ ರಕ್ತ ಮನೆಯಿಂದ ತಪ್ಪಿಸಿಕೊಂಡು ಹೋಗುವಂತೆ ಪ್ರೇರೇಪಿಸಿತು. ಓಡಿಹೋದ ಹನುಮಂತಪ್ಪ ತಾಳಿಕೋಟೆಯ ಜನಹಿತ ಶಿಬಿರದಲ್ಲಿ ಇದ್ದ ೭೦ ಜರನಲ್ಲಿ ಈತನೂ ಒಬ್ಬನಾದನು.

ತರಬೇತಿ ಪಡೆದ ಹಣಮಂತಪ್ಪ ತಮ್ಮ ಕಿರಿಯ ನಾಯಕರ ಸಲಹೆಗಳಂತೆ ತನ್ನ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದನು. ಈತನ ಶೌರ್ಯ ಸಾಹಸವನ್ನು ಶಿಬಿರದ ಮೇಲಾಧಿಕಾರಿ ಗಳಾದ ಶ್ರೀ ರಾಜಾ ವೆಂಕಟಪ್ಪ ನಾಯಕ ಮೆಚ್ಚಿಕೊಂಡು ನಿಜವಾಗಲೂ ದೊರೆಗಳ ರಕ್ತ ನಿನ್ನ ಮೈಯಲ್ಲಿ ಹರಿಯುತ್ತಿದೆ ಎಂದು ಹೇಳಿ ಬೆನ್ನು ತಟ್ಟಿದರು.

ತಾಳಿಕೋಟೆಯಲ್ಲಿ ಸುರಪುರದ ರಾಜಾ ವೆಂಕಟಪ್ಪ ನಾಯಕನಿಗೆ ಅಪ್ಪಾರಾವ ವಕೀಲರು ಸಹಾಯ ಮಾಡಿದರು. ೭೦ ಜನ ಸ್ವಯಂ ಸೇವಕರು ಮುದ್ನೂರು ಮೇಲೆ ದಾಳಿ ಮಾಡಿ ಈ ಗ್ರಾಮವನ್ನು ರಜಾಕಾರರಿಂದ ತಮ್ಮ ವಶಕ್ಕೆ ತೆಗೆದು ಕೊಂಡರು. ಹಣಮಂತಪ್ಪನು ಗಡಿ ಭಾಗದ ಮೇಲೆ ಭೂಗತವಾಗಿ ಕಾರ್ಯ ಮಾಡುತ್ತಿರುವುದರಿಂದ ಇವನ ಮೇಲೆ ಸಂಶಯ ಬಂದು ನಿಜಾಮನ ಸೈನಿಕರು ಹಿಡಿಯಲು ಕೆಂಭಾವಿಯಲ್ಲಿ ಪ್ರಯತ್ನ ಪಟ್ಟರು. ಇವರು ಐದು ಜನರು. ಅದರಲ್ಲಿ ಅಚ್ಚಪ್ಪ ಗೌಡರು ಇದ್ದರು. ಅಮಾವಾಸ್ಯೆಯ ಕತ್ತಲು ರಾತ್ರಿ ಹುಣಸಗಿವರೆಗೆ ತಿರುಗಿ ನೋಡದಂತೆ ಓಡಿಹೋಗಿ ತಪ್ಪಿಸಿಕೊಂಡರು. ಒಂದು ವಾರದ ತರುವಾಯ ನಿಜಾಮನು ಒಕ್ಕೂಟ ಸರಕಾರಕ್ಕೆ ಮಣಿದು ಶರಣಾದನು. ಆಗ ಸ್ವಯಂ ಸೇವಕರು ಸಗರ ಗ್ರಾಮಕ್ಕೆ ವಾಪಸ್ಸಾಗಿ ತ್ರಿವರ್ಣ ಧ್ವಜವನ್ನು ಹಾರಿಸಿ ಆನಂದ ಪಟ್ಟರು. ಈಗ ಹಣಮಂತಪ್ಪ ಮೂರು ಗಂಡು ಎರಡು ಹೆಣ್ಣು ಮಕ್ಕಳನ್ನು ಹೊಂದಿದ್ದು ತಮ್ಮ ಸ್ವಗ್ರಾಮದಲ್ಲಿ ವಿಶ್ರಾಂತಿ ಜೀವನವನ್ನು ಸಾಗಿಸುತ್ತಿದ್ದಾನೆ.

೪. ದ್ಯಾವಪ್ಪ ತಂದೆ ಹಣಮಂತ ಮೋರೆಯವರ

೧. ಹೆಸರು : ದ್ಯಾವಪ್ಪ

೨. ತಂದೆ/ತಾಯಿ: ಹಣಮಂತ ಮತ್ತು ಬಸ್ಸಮ್ಮ

೩. ಊರು ಮತ್ತು ತಾಲೂಕು: ಸಗರ ಶಹಾಪುರ

೪. ವಯಸ್ಸು: ೭೦

೫. ಜಾತಿ : ಬೇಡರು

ಹಣಮಂತ ಮತ್ತು ಬಸ್ಸಮ್ಮನವರ ಮಗನೇ ಈ ಮಹಾನ್ ಸ್ವಾತಂತ್ರ್ಯ ಹೋರಾಟಗಾರ ಶ್ರೀ ದ್ಯಾವಪ್ಪ ಮೋರೆಯವರು ಇವರು ಸಗರನಾಡಿನಲ್ಲಿ ಹುಟ್ಟಿದರು. ಇವರ ತಂದೆ, ತಾತ ಸುರಪುರ ಸಂಸ್ಥಾನದ ಚಿಕ್ಕ ಹುದ್ದೆಯಲ್ಲಿದ್ದರು. ಆಗ ಬ್ರಿಟೀಷ ನಿಯಂತ್ರಣದಲ್ಲಿ ಇದ್ದ ಸುರಪುರದ ಬೇಡ ಸೈನಿಕರನ್ನು ಕೀಳಾಗಿ ಕಾಣುತ್ತಿದ್ದ ಬ್ರಿಟೀಷ ಅಧಿಕಾರಿಯಿಂದ ನೊಂದ ರಾಮಣ್ಣ ನಾಯಕ ಎಂಬುವವರು ಸಗರ ಗ್ರಾಮಕ್ಕೆ ಸೇರಿಕೊಂಡರು. ಸಗರ ಗ್ರಾಮದಲ್ಲಿ ಈ ಹಣಮಂತ ನಾಯಕನು ಯಾವುದೇ ಆಸ್ತಿಯನ್ನು ಹೊಂದಿರಲಿಲ್ಲ. ಚಿಕ್ಕದಾದ ಒಂದು ಗುಡಿಸಲು ಹೊಂದಿದ್ದು ಅಚ್ಚಪ್ಪಗೌಡರ ತಂದೆ ದೇವೆಂದ್ರಪ್ಪ ಗೌಡರ ಕೈ ಕೆಳಗೆ ಹೇಳಿದ ಕೆಲಸ ಮಾಡುತ್ತಿದ್ದರು. ತಂದೆಯಿಂದ ಆಗಾಗ ದ್ಯಾವಪ್ಪ ಗೌಡರ ಮನೆಗೆ ಹೋಗಿ ಬರುವುದರಿಂದ ಬಾಲ ದ್ಯಾವಪ್ಪನಿಗೆ ಅಚ್ಚಪ್ಪಗೌಡರ ಸ್ನೇಹ ಬೆಳೆಯಿತು. ಸಂಘದಂತೆ ಫಲ ಎನ್ನುವಂತೆ ಅಚ್ಚಪ್ಪ ಗೌಡರು ಚಿಕ್ಕಂದಿನಿಂದಲೂ ಸಣ್ಣ ಪುಟ್ಟ ಸಂಘ ಕಟ್ಟಿ ಅದರ ಅಧ್ಯಕ್ಷತೆ ವಹಿಸುತ್ತಿದ್ದರು. ಅದರಲ್ಲಿ ದ್ಯಾವಪ್ಪನನ್ನು ಸೇರಿಸಿಕೊಂಡಿದ್ದರು. ಅವಿದ್ಯಾವಂತನಾದ ದ್ಯಾವಪ್ಪನನ್ನು ಯಾವುದೆ ಕಾರ್ಯ ಮಾಡುವಾಗ ಬಿಟ್ಟು ಮಾಡುತ್ತಿರಲಿಲ್ಲ. ಏಕೆಂದರೆ ಅವನು ಉತ್ತಮ ತಿಳುವಳಿಕೆ ಮತ್ತು ನಿಷ್ಠಾವಂತ ಹಾಗೂ ಎಂದೂ ಸುಳ್ಳಾಡದ ವ್ಯಕ್ತಿ ಎಂಬುವುದು ಗೌಡರಿಗೆ ದೃಢವಾದ ನಂಬಿಕೆ ಇತ್ತು. ಅದೇ ವೇಳೆಯಲ್ಲಿ ಸಗರದ ಮೇಲೆ ನಿಜಾಮನ ಸೈನಿಕರು ಹಲವಾರು ಸಲ ದಾಳಿ ಮಾಡಿ ಆಸ್ತಿಪಾಸ್ತಿ ಲೂಟಿ ಮಾಡಿದರು. ಮತ್ತು ಮುಗ್ಧ ಜನರನ್ನು ಹೆದರಿಸಿ ಹಣ ಆಸ್ತಿಯನ್ನು ಕದ್ದುಕೊಂಡು ಹೋಗಿದ್ದರು. ಅದಕ್ಕಿಂತ ಮುಖ್ಯವಾಗಿ ಕೋಮು ಭಾವನೆಯಿಂದ ಹಿಂದೂಗಳನ್ನು ತೀವ್ರವಾಗಿ ದಂಡಿಸುತ್ತಿದ್ದರು.

೧೫ಕ್ಕಿಂತ ಹೆಚ್ಚು ಸ್ವ ಇಚ್ಛೆಯುಳ್ಳ ಯುವಕರನ್ನು ಶಿಬಿರದಲ್ಲಿ ಸೇರಿಸಿಕೊಂಡು ಅವರಿಗೆ ರಜಾಕಾರರನ್ನು ಹಿಮ್ಮೆಟ್ಟಿಸುವ ತಂತ್ರವನ್ನು ಕಲಿಯಲು ತಾಳಿಕೋಟೆ ಮತ್ತು ದುದನಿ ಜನಹಿತ ಶಿಬಿರಗಳಿಗೆ ಕಳುಹಿಸಿದರು. ಅದರಲ್ಲಿ ದ್ಯಾವಪ್ಪನು ಬಿಸಿ ರಕ್ತ ತುಂಬಿದ ಯೌವನದಿಂದ ಕಠಿಣ ತರಬೇತಿ ಪಡೆದು ಅಚ್ಚಪ್ಪಗೌಡರ ಪ್ರತಿಯೊಂದು ದಂಗೆಯಲ್ಲಿ ಮುಂಚೂಣಿಯಲ್ಲಿದ್ದ ಅವರ ಸೂಚನೆಯಂತೆ ಕೆಲಸ ನಿರ್ವಹಿಸುತ್ತಿದ್ದನು.

ಹುಲಿಯಂತಹ ದೇಹವುಳ್ಳ ಶ್ರೀ ದ್ಯಾವಪ್ಪನನ್ನು ಕಂಡು ರಜಾಕಾರರು ಹೆದರಿದ್ದುಂಟು. ಯಾವಾಗಲೂ ಬಿಚ್ಚುಗತ್ತಿ ಹಿಡಿದು ತಿರುಗಾಡುವ ಸ್ವಭಾವವುಳ್ಳ ದ್ಯಾವಪ್ಪನನ್ನು ಹಿಡಿಯಲು ರಜಾಕಾರರು ಎಷ್ಟೋ ಪ್ರಯತ್ನಪಟ್ಟರು. ಆದರೆ ಸಾಧ್ಯವಾಗಲಿಲ್ಲ. ಏಕೆಂದರೆ ಅವನ ದೈಹಿಕ ಸಾಮರ್ಥ್ಯ ಹಾಗೂ ಅವನ ಮುಂದಾಲೋಚನೆ ಮತ್ತು ಚುರುಕುತನಗಳು ಅವನನ್ನು ಯಶಸ್ವಿ ಹೋರಾಟಗಾರರನ್ನಾಗಿ ಮಾಡಿದವು. ೧೯೪೮ರ ಸೆಪ್ಟೆಂಬರ್ ೧೭ ನೇ ತಾರೀಖು ಹೈದರಾಬಾದ ಕರ್ನಾಟಕ ವಿಮೋಚನೆ ಆದ ನಂತರ ತಮ್ಮ ತವರೂರು ಸಗರಿಗೆ ಹಿಂತಿರುಗಿದಾಗ ದ್ಯಾವಪ್ಪನನ್ನು ಊರಿನ ಪ್ರಮುಖರು ಸ್ವಾಗತಿಸಿದರು. ಇಂದಿನ

ರಾಜಕೀಯ ಮತ್ತು ಜನರ ತಂತ್ರವನ್ನು ಟೀಕಿಸಿದ ದ್ಯಾವಪ್ಪ ಹೆಚ್ಚು ಏನನ್ನೂ ಹೇಳದೆ ಜಾರಿಕೊಂಡರು.

೫. "ಸಾಬಣ್ಣ ತಂದೆ ಹಣಮಂತ

೧. ಹೆಸರು : ಸಾಬಣ್ಣ

೨. ತಂದೆ / ತಾಯಿ : ಹಣಮಂತ ಮತ್ತು ಶಾಂತಮ್ಮ

೩. ಊರು ಮತ್ತು ತಾಲೂಕು: ಯಾದಗಿರಿ

೪. ವಯಸ್ಸು: ೮೦ (ತೀರಿಕೊಂಡಿದ್ದಾನೆ)

೫. ಜಾತಿ : ಬೇಡರು"[೨೦]

(ಸಂದರ್ಶನ ನೀಡಿದವರು: ಸಾಬಮ್ಮ ಮುದ್ನಾಳ (ಹೆಂಡತಿ)

ಹಣಮಂತ ಮತ್ತು ಶಾಂತಮ್ಮನವರ ಮಗನಾದ ಸಾಬಣ್ಣನು ಯಾದಗಿರಿ ಪಟ್ಟಣದಲ್ಲಿ ಜನಿಸಿದನು. ಅಕ್ಷರದಿಂದ ವಂಚಿತನಾದ ಶ್ರೀ ಸಾಬಣ್ಣನು ೧೮ನೇ ವರ್ಷದಲ್ಲಿ ಸಹೋದರಿಯ ಮಗಳಾದ ಸಾಬವ್ವ ಎಂಬುವವರನ್ನು ಕೈ ಹಿಡಿದು ಸಣ್ಣ ಪುಟ್ಟ ಕೆಲಸಗಳನ್ನು ಮಾಡಿಕೊಂಡು ಜೀವಿಸುತ್ತಿದ್ದರು. ಇದೇ ಸ್ಥಳದಲ್ಲಿ ಸ್ನೇಹಿತರಾದ ವಿಶ್ವನಾಥ ರೆಡ್ಡಿ ಮುದ್ನಾಳ, ಜಗನ್ನಾಥರಾವ ಚಂಡ್ರಿಕಿ ಮತ್ತು ವಿದ್ಯಾಧರ ಗುರೂಜಿ ಹಾಗೂ ಕೊಲೂರು ಮಲ್ಲಪ್ಪನವರ ಪ್ರೇರಣೆಯಿಂದ ರಜಾಕಾರರ ವಿರುದ್ಧ ಹೋರಾಟ ಮಾಡುವ ಸಲುವಾಗಿ ರಚಿಸಲ್ಪಟ್ಟ ದುದುನಿ ಜನಹಿತ ಶಿಬಿರದಲ್ಲಿ ತರಬೇತಿ ಪಡೆದುಕೊಂಡನು. ಹಲವಾರು ಕಡೆಗಳಲ್ಲಿ ರಜಾಕಾರರ ವಿರುದ್ಧ ಗಲಾಟೆಯನ್ನು ಮಾಡುವ ಗುಂಪಿನಲ್ಲಿ ಇವರ ಪಾತ್ರ ಮಹತ್ವದ್ದಾಗಿದೆ.

ಯಾದಗಿರಿಯಲ್ಲಿ ವಿಶೇಷವಾಗಿ ೧೯೪೭ ನಂತರ ಹಬ್ಬ ಹರಿದಿನಗಳಲ್ಲಿ ಹಿಂದೂಗಳ ಯುವಕರನ್ನು ಸೇರಿಕೊಂಡು ಮೆರವಣಿಗೆ ಮಾಡುತ್ತಿದ್ದರು. ನಿಜಾಮನ ಸರಕಾರದ ವಿರುದ್ಧ ಘೋಷಣೆಯನ್ನು ಕೂಗುತ್ತಾ ಮೆರವಣಿಗೆ ಸಾಗುವಾಗ ರಜಾಕಾರರ ಸೈನಿಕರು ಬಂದು ಅದನ್ನು ತಡೆಯಲು ಪ್ರಯತ್ನ ಪಟ್ಟು ಅವರ ಜೊತೆಗೆ ಜಗಳವಾಡಿ ಎಷ್ಟೋ ಜನರಿಗೆ ಗಾಯ ಮಾಡಿದ್ದರು. ಹೆಚ್ಚಿನ ಸೈನಿಕರು ಅವರ ಮನೆಗೆ ಹೋಗಿ ರಾತ್ರಿಯ ವೇಳೆಯಲ್ಲಿ ಬಂಧಿಸಿ ಯಾದಗಿರಿ ಜೈಲಿನಲ್ಲಿ ಇಟ್ಟರು.

ಯಾದಗಿರಿಯಲ್ಲಿ ಮತ್ತು ಸುತ್ತ ಮುತ್ತಲಿನ ಹಳ್ಳಿಗಳ ರಜಾಕಾರರ ಸೈನಿಕರಿಂದ ಯಾವುದೇ ರೀತಿಯ ತೊಂದರೆಯಾಗದಂತೆ ಈ ಹೋರಾಟದ ಸಮಿತಿಯು ತನ್ನ ಕಾರ್ಯವನ್ನು ಮಾಡುತ್ತಿತ್ತು. ಇದರ ಪ್ರಮುಖ ಸದಸ್ಯರು ಕೋಳೂರು ಮಲ್ಲಪ್ಪ, ವಿಶ್ವನಾಥರೆಡ್ಡಿ ಮುದ್ನಾಳ, ಗುರೂಜಿ, ಟೀಕಾರಾಮ, ಅಂಬಿಗೇರ ಮಲ್ಲಣ್ಣ, ಗುರಣ್ಣ ಪ್ರಮುಖರಾಗಿದ್ದಾರೆ. ೧೯೪೮ರ ಸೆಪ್ಟೆಂಬರ್ ೧೭ನೇ ತಾರಿಖಿನ ನಂತರ ಸಾಯಿಬಣ್ಣನನ್ನು ಬಿಡುಗಡೆ

ಮಾಡಲಾಯಿತು. ಇವರು ಬಳಸುವ ನಾಡ ಅಸ್ತ್ರಗಳಾದ, ಚಂದ್ರಾಯುಧ, ಖಡ್ಗ ಇತ್ಯಾದಿ ವಶಪಡಿಸಿಕೊಂಡರು. ೧೯೭೮ರಲ್ಲಿ ಶ್ರೀ ಸಾಯಿಬಣ್ಣ ನವರು ಯಾದಗಿರಿಯಲ್ಲಿ ತೀರಿಕೊಂಡರು.

ಈ ರೀತಿಯಾಗಿ ಹೈದರಾಬಾದ ಕರ್ನಾಟಕ ವಿಮೋಚನೆಯಲ್ಲಿ ಸಗರನಾಡಿನ ಬೇಡ ನಾಯಕರು ನಿರ್ವಹಿಸಿದ ಪಾತ್ರ ಗಣನೀಯವಾದದ್ದು ಹಾಗೂ ಶಾಶ್ವತವಾಗಿ ನೆನಪಿಡುವಂತಾಗಿದೆ. ಆದರೆ ಇಂದಿನ ಪರಿಸ್ಥಿತಿ ಬೇರೆಯಾಗಿದೆ. ಯುದ್ಧ ಭೂಮಿಯಿಂದ ಬೆನ್ನು ಕೊಟ್ಟು ಹೋರಾಡಿ ಹೋದವರಿಗೆ, ರಜಾಕಾರರ ಸೈನಿಕರ ಲೂಟಿಯಲ್ಲಿ ಪಾಲ್ಗೊಂಡು ಜೈಲು ಸೇರಿದವರಿಗೆ ಹೆಚ್ಚಿನ ಪ್ರಾಶಸ್ತ್ಯ ಮತ್ತು ಪ್ರಚಾರ ಸಿಕ್ಕಿರುವುದು ದುರ್ದೈವದ ಸಂಗತಿ ಎಂದು ಹೇಳಬಹುದು ಜಿಲ್ಲೆಯ ಹಲವಾರು ವೀರ ಸುಪುತ್ರರಲ್ಲಿ ಬೇಡ ನಾಯಕರ ಪಾತ್ರ ಮಹತ್ವದ್ದು ಎಂದು ಹೇಳಲು ಹೆಮ್ಮೆ ಎನಿಸುತ್ತದೆ. ಸಗರನಾಡಿನಲ್ಲಿ ಹಲವಾರು ಜಾತಿಗಳು ಮತ್ತು ಸಮುದಾಯಗಳಿವೆ. ಆದರೆ ಹೈದರಾಬಾದ ಕರ್ನಾಟಕ ವಿಮೋಚನೆಯಲ್ಲಿ ಕೇವಲ ಕೆಲವು ಜಾತಿಯ ನಾಯಕರು ಮಾತ್ರ ರಜಾಕಾರರ ವಿರುದ್ಧ ಹೋರಾಟ ಮಾಡಿದ್ದಾರೆ. ಇನ್ನಿತರ ಸಮುದಾಯಗಳಾಗಲೀ ಅಥವಾ ಇತರ ಜಾತಿಯ ನಾಯಕರಾಗಲೀ ರಾಷ್ಟ್ರ ಪ್ರೇಮ ಮತ್ತು ಪ್ರಾದೇಶಿಕ ಮನೋಭಾವನೆ ಹೊಂದಿರಲಿಲ್ಲ ಎಂದು ಭಾವಿಸಬಾರದು. ವಿಶೇಷವಾಗಿ ಬೇಡರ ನಾಯಕರು ಹೈದರಾಬಾದ ಕರ್ನಾಟಕದ ವಿಮೋಚನೆಯಲ್ಲಿ ರಜಾಕಾರರ ವಿರುದ್ಧ ಹೋರಾಟ ಮಾಡಲು ಪ್ರೇರಣೆಯಾದ ಅಂಶಗಳನ್ನು ಸಂಗ್ರಹಿಸಿದಾಗ ಒಂದಲ್ಲ ಒಂದು ರೀತಿಯ ಸಂಬಂಧ ಈ ನಾಯಕರಿಗೆ ಇರುವುದು ಕಂಡುಬರುತ್ತದೆ. ಹೈದರಾಬಾದ ಕರ್ನಾಟಕ ವಿಮೋಚನೆಯಲ್ಲಿ ರಜಾಕಾರರ ವಿರುದ್ಧ ಹೋರಾಡಿದ ಬೇಡ ನಾಯಕರು ಸುರಪುರ ಮತ್ತು ಶಹಾಪುರ ತಾಲೂಕಿನವರಾಗಿದ್ದರು.

### ೨.೬ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡ ಸಗರನಾಡಿನ ಪ್ರಮುಖ ವ್ಯಕ್ತಿಗಳ ಹೆಸರುಗಳು

೧. 'ಕಸ್ತೂರೆಪ್ಪ
೨. ಪುಟ್ಟ ಸ್ವಾಮಿ
೩. ಸಿದ್ಧಿ ನಸೀಬಾ
೪. ಸಿದ್ಧಿ ಸುಲೇಮನ್ ತಂದೆ ಸಿಧ್ಧಿನಾಮನ ಅರಾಬ
೫. ತಜದಿಕ್ ಹುಸೇನ್ ಗಟಗೀರಾ ಜಮದಾರ
೬. ರಾಮಪ್ಪ ಪ್ಯಾಪ್ಲಿ ರಾಜನ ಸಂಬಂಧಿಕ
೭. ರಾಮರಾಜ – ರಾಜನ ಅಳಿಯ
೮. ಸಾರಸಂಗಪ್ಪ ರಾಜನ ಸಂಬಂಧಿಕ
೯. ಕ್ಯಾದಿಗೇರಿ ವೆಂಕಟಪ್ಪ ನಾಯಕ
೧೦. ತಿರುಮಲ ಗೋಸಾವಿ–ಏಜೆಂಟ್
೧೧. ಅಗೀರಾ–ಗೀರಾಗೋಸಾವಿ – ಏಜೆಂಟ್
೧೨.ರಾಮಣ್ಣ ವಾಗಿಣಗೇರಾ ಮುತ್ಸದ್ದಿ
೧೩.ಭೀಮರಾವ್ – ದಿವಾನ್
೧೪. ಕೇಶವರಾವ ಆಲಮಪೂರ
೧೫.ಲಕ್ಷ್ಮೀಕಾಂತರಾವ್
೧೬.ವೆಂಕಟರಾವ್ ದಫ್ತರದಾರ
೧೭.ಸುಲಭಪ್ಪ
೧೮.ಶ್ರೀನಿವಾಸನಾಯಕ ರಾಜನ ಚಿಕ್ಕಪ್ಪ
೧೯.ವಾಸುದೇವನಾಯಕ ರಾಜನ ಚಿಕ್ಕಪ್ಪ
೨೦.ಬಸುವಂತರಾವ ಮರಾಠ

೨೧.ಬಸವಂತಸಿಂಗ್ ಜಮಾದಾರ
೨೨. ಕೃಷ್ಣಶಾಸ್ತ್ರಿ ಮಲ್ಹಾರ
೨೩.ಪಾಂಡುರಂಗ ಬಹಾದ್ದೂರ
೨೪. ಅಹ್ಮದಬೇಗ್
೨೫.ವೆಂಕಣ್ಣ ಬಾಬಾ
೨೬. ಲಕ್ಷ್ಮಣಗಿರಿ ಗೋಸಾವಿ
೨೭.ಸುಭಾಸ ಸಿಂಗ್
೨೮. ಕುಲಚಂದ ಬೇಡರ
೨೯. ನಾನಾಸಂಕೇಶ್ವರ
೩೦. ದಾಯಿ ಹನುಪಮ್ಮ ಬೇಡರ
೩೧.ರಂಗಾ
೩೨. ಯೆಲ್ಲು
೩೩.ಗಾನಿಗೇರ
೩೪. ವಿಠಲ
೩೫.ಗುರಡಿಯಾ
೩೬. ಕೃಷ್ಣಚೆಟ್ಟಿ
೩೭.ಅಬಾಚೆಟ್ಟಿ
೩೮. ಹಿರಾಲಾಲ್ ಸಾರಾಯಿ ಗುತ್ತೆದಾರ
೩೯.ರಾಮದಯಾಲ ಸಾಹುಕಾರ-ಸೂಗೂರ
೪೦. ತಾತ್ಯಾ ಮೈಸೂರ ಸಾಹುಕಾರ
೪೧.ರಂಗಣ್ಣ ತಂದೆ ಲಕ್ಷ್ಮಣ
೪೨. ಸುಂಡಿರಾಮಯ್ಯ
೪೩.ಅರಿಕಾಮ ರಂಗಣ್ಣ
೪೪. ಲಕ್ಷ್ಮಣಸಿಂಗ್ ಜಮಾದಾರ
೪೫.ಖಮರ ಅಲಿ ಜಮಾದಾರ
೪೬. ಫತ್ತೆಸಾಬ ದಸ್ತುರಜ ಇನಾಂದಾರ
೪೭.ಪ್ಯಾಪಲಿ ಅಪ್ಪಣ್ಣ ನಾಯಕ
೪೮. ಸುಮ್ಮನ್ನ ಚೆಟ್ಟಿ
೪೯.ಜೀವಬಾ ಚೆಟ್ಟಿ
೫೦. ಚುಕಲ ಕಾಬನಪ್ಪ ಬೇಡರ
೫೧.ಗುಂಬಿ ನಾಗಪ್ಪ ಬೇಡರ
೫೨. ದೇವರಾಯ ಬೇಡರ
೫೩.ಕಾಕಣ್ಣ ಬೇಡರ
೫೪. ರಂಗಣ್ಣ ಬೇಡರ
೫೫.ಗೋಡೆ ರಂಗಯ್ಯ ಬೇಡರ
೫೬. ಬಸ್ಸಪ್ಪಾ
೫೭.ರಾವೋಬಾ
೫೮. ಭೀಮಬಾಲಸಾ
೫೯.ವಿನಾಯಕರಾವ
೬೦. ಸಂಗಪ್ಪ ದಪ್ತರದಾರ
೬೧.ಗಂಗಾಗಿರ ಗೋಸಾವಿ
೬೨. ಭೀಮಪ್ಪ ಸಿದ್ದಪೂರ
೬೩.ಶೀನಣ್ಣ ಹುಜುರತಲಿ
೬೪. ಬಸ್ಸಪ್ಪ ಮಜಿಯಾ
೬೫.ವೆಂಕಣ್ಣ ತಂದೆ ಸಿಲುನ್ನಿಸಾ
೬೬. ರಂಗಣ್ಣ ಹುಜುರಪೇಟ
೬೭.ರಂಗಣ್ಣ ಹುಜರ
೬೮. ರಂಗಯ್ಯ ಬರೇದ
೬೯. ಇರತಯ್ಯ ಜಂಗಮ
೭೦. ಗುರುರಾವ್
೭೧.ಗಂಗಯ್ಯ
೭೨. ಗುರದಿಯಾ
೭೩. ಖಾಜಿಯ ಜಮಾದಾರ
೭೪. ಪರಸರಾಮ ಜಮೇದಾರ
೭೫.ಮೀರ ಅರಪಲಿ
೭೬. ಅಯ್ಯಣ್ಣ ಬಾಹುವೀರಪ್ಪ
೭೭.ಕಸ್ತೂರೆಪ್ಪ ಸುಂಡಿ
೭೮. ನರಪತಿ
೭೯.ಲಮಸಾರಾಜಾ ಗುಡಗುಂಜಿ
೮೦. ಕಲಾಲ್ ಸಾಹೇಬ ದಕ್ಕನಿ
೮೧.ಕಲಾಲ್ ಸಾಹೇಬ ಮಕ್ಕಳು
೮೨. ಹುಸೇನಸಾಬ್
೮೩.ರಾಜುಮಿಯ್ಯ
೮೪. ಆನಂದರಾವ್
೮೫.ಬಸಲಿಂಗಪ್ಪ
೮೬. ಭೀಮರಾವ್ ಮುಂಡರಗಿ
೮೭.ಧಪ್ಲೆ ದೇಶಮುಖ
೮೮. ದೇವಿಸಿಂಗ್
೮೯.ಗೌಡಪ್ಪ ಪಾಟೀಲ್ ಗಂವ್ಹಾರ್
೯೦. ಇಜ್ಜತ್ ಖಾನ್ ಜಮಾದಾರ

೯೧.ಕಸ್ತೂರಿ ರಾಜ

೯೨. ಕೇಶುರಾಮ

೯೩.ಮಹಿಫಾಲ ಸಿಂಗ್

೯೪. ಮಹ್ಮದ ಹುಸೇನಿ ಮುಧೋಳ

೯೫.ಮಸುನ ಸಾಹೇಬ ಮುನಿಸಿ

೯೬. ಮತ್ತಿಕೋರ್ಕಾಲ ಕೊಲ್ಲಾಪುರ

೯೭.ಮೀರ ಆರೀಫ್ ಜಮಾದಾರ

೯೮. ರುದ್ರ

೯೯.ಸಲೀಮ್ ಮೊಹಮ್ಮದ

೧೦೦. ಶಿನವಾ

೧೦೧.ಸುರಮಲ್ಲ

೧೦೨. ಟಿನ್ನಪ್ಪ ರತ್ನಗಿರಿ

೧೦೩.ಯಂಕಪ್ಪ ನಾಯಕ ಶಹಾಪುರ

೧೦೪. ಮಳಖೇಡದ ಜಮಾದಾರ"[೨೧]

**ಅಡಿಟಿಪ್ಪಣಿ**

೧. ಕೃಷ್ಣ ಎ. ಸುರಪುರ (ಸಂ), ೧೯೮೫, ಸಗರನಾಡ ದರ್ಶನ ಪುಸ್ತಕ, ಪು.ಸಂ. ೯೦.

೨. ಅದೇ, ಪು.ಸಂ. ೧೧೦.

೩. ಅದೇ, ಪು.ಸಂ. ೧೧೫.

೪. ಅದೇ, ಪು.ಸಂ. ೧೧೮

೫. ಅದೇ, ಪು.ಸಂ. ೧೨೦.

೬. ಅದೇ, ಪು.ಸಂ. ೧೩೫.

೭. ಅದೇ, ಪು.ಸಂ. ೧೩೯.

೮. ಅದೇ, ಪು.ಸಂ. ೧೮೦.

೯. ಭಾಸ್ಕರರಾವ್ ಮುಡಬೋಳ, ೨೦೦೧, ಮರೆತುಹೋದ ಸುರಪುರ ಇತಿಹಾಸ, ಪು.ಸಂ. ೧೦

೧೦. ಅದೇ, ಪು.ಸಂ. ೧೮.

೧೧. ಅದೇ, ಪು.ಸಂ. ೨೦.

೧೨. ಅದೇ, ಪು.ಸಂ. ೨೪

೧೩. ತಾರಿಹಳ್ಳಿ ಹನುಮಂತಪ್ಪ, (ಸಂ), ೨೦೧೨, ನಾಯಕರ ಮಹಾಸಂಸ್ಥಾನ ಸುರಪುರ, ಪು.ಸಂ. ೨೭.

೧೪. ಅದೇ, ಪು.ಸಂ. ೩೨.

೧೫. ಕೃಷ್ಣ ಎ. ಸುರಪುರ (ಸಂ), ೧೯೮೫, ಸಗರನಾಡ ದರ್ಶನ ಪುಸ್ತಕ, ಪು.ಸಂ. ೨೫೦.

೧೬. ಭಾಸ್ಕರರಾವ್ ಮುಡಬೋಳ, ೨೦೦೧, ಮರೆತುಹೋದ ಸುರಪುರ ಇತಿಹಾಸ, ಪು.ಸಂ. ೪೫.

೧೭. ಚನ್ನಮಲ್ಲಪ್ಪ ಜುಬೀರ್, ೨೦೦೮, ಕಲಬುರ್ಗಿ ಜಿಲ್ಲೆಯ ಬುಡಕಟ್ಟು ರಾಜಕೀಯ, ಪು.ಸಂ. ೮೦.

೧೮. ಅದೇ, ಪು.ಸಂ. ೮೫.

೧೯. ಅದೇ, ಪು.ಸಂ. ೮೮.

೨೦. ಅದೇ, ಪು.ಸಂ. ೯೮.

೨೧. ಭಾಸ್ಕರರಾವ್ ಮುಡಬೋಳ, ೨೦೦೧, ಮರೆತುಹೋದ ಸುರಪುರ ಇತಿಹಾಸ, ಪು.ಸಂ. ೪೪.

## ಅಧ್ಯಾಯ ೩

## ಸಗರನಾಡಿನ ಬೇಡ ಸಮುದಾಯ

೧. ಬೇಡ ಸಮುದಾಯದ ಪರಿಚಯ

೨. ಸಗರನಾಡಿನ ಸುರಪುರ, ಶಹಾಪುರ, ಜೇವರ್ಗಿ ತಾಲೂಕಿನ ಬೇಡ ಸಮುದಾಯ

# ಅಧ್ಯಾಯ ೩

## ಸಗರನಾಡಿನ ಬೇಡ ಸಮುದಾಯ

ಬೇಡ ಸಮುದಾಯದ ಬೇರುಗಳನ್ನು ಪೌರಾಣಿಕ ಕಾಲದ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತದಲ್ಲಿ ಕಾಣಬಹುದು. ಆದಿ ಕಾವ್ಯವಾದ ರಾಮಾಯಣವನ್ನು ರಚಿಸಿದ ವಾಲ್ಮೀಕಿ ಮತ್ತು ರಾಮನಿಗೆ ಹಣ್ಣು ಹಂಪಲು ನೀಡಿದ ಶಬರಿ ಹಾಗೂ ಮತ್ತೊಂದು ಮಹಾಕಾವ್ಯ ರಚಿಸಿದ ವ್ಯಾಸ ಮತ್ತು ದ್ರೋಣಾಚಾರ್ಯ ಮೂರ್ತಿಯನ್ನು ಮುಂದಿಟ್ಟುಕೊಂಡು ಬಿಲ್ವಿದ್ಯೆ ಕಲಿತ ಏಕಲವ್ಯನು ಬೇಡ ಬುಡಕಟ್ಟಿಗೆ ಸೇರಿದವನು. ಮಹಾಭಾರತ ಕಾಲದಲ್ಲಿ ಬೇಟೆಗಾರರನ್ನು ಪುಲಿಂದ, ನಿಷಾಧ, ಕಿರಾತ, ವ್ಯಾಧ, ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಬೇಡರು ಆದಿಮಾನವರು ಹಳೆಶಿಲಾಯುಗದಲ್ಲಿ ಇಡೀ ಮಾನವನ ಮುಖ್ಯ ಕಸುಬು ಬೇಟೆಗಾರಿಕೆಯಾಗಿತ್ತು. ಈ ಅವಧಿಯಲ್ಲಿ ಮಾನವ ಅಲೆಮಾರಿಯಾಗಿದ್ದು, ಬೆಟ್ಟ ಕಲ್ಲಾಸರೆಗಳಲ್ಲಿ ಮತ್ತು ಗುಹೆಗಳಲ್ಲಿ ವಾಸಿಸುತ್ತಿದ್ದನು. ಬೆಟ್ಟಗುಡ್ಡಗಳೇ ಅವನ ಚಟುವಟಿಕೆಗಳ ಸ್ಥಳಗಳಾಗಿದ್ದವು. ಏಕೆಂದರೆ, ಅಂದಿನ ಮಾನವರಿಗೆ ಬೇಕಾದ ವಸತಿ ಕಲ್ಲಿನ ಆಯುಧಗಳು ಹಾಗೂ ಆಹಾರವನ್ನು ಒದಗಿಸುವ ನೆಲೆಗಳಾಗಿದ್ದವು. ಅದಕ್ಕಾಗಿಯೇ ನಾವು ಇಂದಿಗೂ ಸಹ ಕರ್ನಾಟಕದ ಹಲವು ಭಾಗಗಳಲ್ಲಿ ಬೆಟ್ಟಗುಡ್ಡಗಳ ಸಾಲಿನಲ್ಲಿರುವ ಕಲ್ಲಾಸರೆಗಳಲ್ಲಿ ಗುಹೆಗಳಲ್ಲಿ ಅಂದಿನ ಮಾನವನು ಬಿಡಿಸಿದ ಕೆಂಪು, ಬಿಳಿ ಮತ್ತು ಕಪ್ಪು ವರ್ಣಚಿತ್ರಗಳನ್ನು ಕಾಣಬಹುದು. ಈ ವರ್ಣಚಿತ್ರಗಳು ಹೆಚ್ಚಾಗಿ ಬೇಟೆಯ ಚಿತ್ರವನ್ನು ಹೊಂದಿವೆ. ಹಲವಾರು ಜನ ಒಟ್ಟಿಗೆ ಸೇರಿ ಬೇಟೆಯಾಡುವುದು ಅನಿವಾರ್ಯವಾಗಿತ್ತು. ಈ ರೀತಿಯ ಬದುಕನ್ನು ಇಂದಿಗೂ ಬೇಡ ಕುಟುಂಬಗಳಲ್ಲಿ ಕೆಲವು ವಿಶೇಷ ಸಂದರ್ಭಗಳಲ್ಲಿ ಸಾಂಕೇತಿಕವಾಗಿ ಕಾಣಬಹುದು. ಇನ್ನು ಬೇಡರ ಮೂಲವನ್ನು ಹುಡುಕುತ್ತಾ ಹೋದಾಗ ಆದಿ ಭಗವಂತನು ಬೇಡರ ಚುಂಚುಲಕ್ಷ್ಮೀಯನ್ನು ಮದುವೆಯಾಗುವ ಮೂಲಕ ಬೇಡರ ವಂಶವನ್ನು ಬೆಳೆಸಿದನಂತೆ ಹಳೆಗನ್ನಡದಲ್ಲಿ ಬೇಡರ, ವಾಳರ, ವಿಧಿರಾ, ಬಿಲ್ಲಾ ಬೇಟೆವರಾ, ಬೇಂಟೆಕರ,

ಕಣಿಧರ, ಕೋವರ ಎಂಬ ಹೆಸರುಗಳಿವೆ. ರಾಷ್ಟ್ರಕೂಟರ ಭಾಷೆಯಲ್ಲಿ ನಾಲಹ, ನಾಹಿಲ್ಲಾ, ಸಮರ, ಸೀಮಿರಾ, ಬೇಲಾಡ ಮುಂತಾಗಿ ಗುರುತಿಸಲಾಗಿದೆ. ಈ ಎಲ್ಲಾ ಪದಗಳು ಬೇಡ ಜನಾಂಗದ ವ್ಯಾಪ್ತಿಯನ್ನು ಸ್ಪಷ್ಟೀಕರಿಸುತ್ತದೆ. ಬೇಡ ಸಮುದಾಯದ ಮೂಲಪುರುಷ ವಾಲ್ಮೀಕಿ ಎಂದು ಹಲವಾರು ಸಂಶೋಧಕರ ಸಂಶೋಧನೆಯ ಮೂಲಕ ಗೊತ್ತಾಗಿದೆ. ಬೇಡರ ಯಜಮಾನನಾದ ಇತಾ ಕಾಮಕೇತು, ಲಕ್ಷ್ಮೀ, ಲಕ್ಷ್ಮೀಮೀನು, ಮಲ್ಹಾರ, ಎಂಬ ಏಳು ಜನ ಮಕ್ಕಳ ನೇತೃತ್ವದಲ್ಲಿ ಏಳು ಪಡೆಗಳನ್ನು ರಚಿಸಿ ದರೋಡೆ ನಡೆಸುತ್ತಿದ್ದನು. ಮುಂದೆ ಕಾಡಿನಲ್ಲಿ ಕಾಲಾನಂತರ ಚದುರಿ ಹೋದ ಇಂತಹ ಬೇಡ ಪಡೆಗಳು ಬೇಡ ಜನಾಂಗದ ವಂಶ ವಿಕಾಸಕ್ಕೆ ನಾಂದಿಯಾದವು ಎಂಬ ಐತಿಹ್ಯವಿದೆ. ಚದುರಿ ಹೋದ ಇಂತಹ ಬೇಡ ಪಡೆಯ ತುಕುಡಿಗಳು ಸಗರನಾಡಿನಲ್ಲಿಯೂ ನೆಲೆಯೂರಿದ್ದವು ಎಂಬುವುದರಲ್ಲಿ ಸಂಶಯವಿಲ್ಲ. ವಾಲ್ಮೀಕಿ ತ್ರೇತಾಯುಗದ ಮೂಲ ಸಂವೇದನೆಯನ್ನು ಬದುಕಿನ ಮೌಲ್ಯವನ್ನು ಸೋಲು ಗೆಲುವಿನ ಮೌಲ್ಯಗಳನ್ನು ಒಟ್ಟಾಗಿ ಹಿಡಿದಿಟ್ಟ ದಾರ್ಶನಿಕ ಶಕ್ತಿ ವಾಲ್ಮೀಕಿಗೆ ದಕ್ಕಿತ್ತು. ಮತ್ತು ಅದು ರಾಮಾಯಣ ರೂಪದಲ್ಲಿ ಹೊರಬಿತ್ತು. ಇಂತಹ ಶಕ್ತಿಯು ಸಿಗುವ ಮುನ್ನ ಆದಿ ಮಾನವನಂತೆ ಅಡಿವೆಯಲ್ಲಿ ಅಲೆದಾಡುತ್ತಿದ್ದ.

ವಾಲ್ಮೀಕಿ ಪ್ರಚೇತನ ಮತ್ತು ಪ್ರಮೋಜಿಯವರ ಮಗನಾಗಿ ಹುಟ್ಟಿ ಥಾಮಸ್ ತೀರದಲ್ಲಿ ವಾಸವಾಗಿದ್ದನು. ನಂತರ ಬೇಡರ ಯಜಮಾನನಾಗುವ ಮೂಲಕ ಸದಾ ಖಡ್ಗಧಾರಿಯಾಗಿದ್ದ. ಇವರು ಯುದ್ಧಕ್ಕಾಗಿ ಹೋರಾಡುವ ಸೈನಿಕರಾಗಿದ್ದರು. ಆದುದರಿಂದ ಬೇಡ ಸಮುದಾಯದವರು ವಾಲ್ಮೀಕಿಯನ್ನು ತಮ್ಮ ಮೂಲಪುರುಷ ದೇವರು ಎಂದು ತಿಳಿದು ಇಂದಿಗೂ ಪೂಜಿಸುತ್ತಾ ಬರುತ್ತಿದ್ದಾರೆ.

**೩.೧ ಬೇಡ ಸಮುದಾಯದ ಪರಿಚಯ**

'ಸಗರನಾಡಿನಲ್ಲಿ ಬೇಡ ಸಮುದಾಯದ ಬೇರುಗಳನ್ನು ಹುಡುಕುತ್ತಾ ಹೋದಾಗ ನಮಗೆ ಆಧಾರವಾಗಿ ಸಿಕ್ಕಿದ್ದು ವಿಜಯನಗರ ಸಾಮ್ರಾಜ್ಯ. ವಿಜಯನಗರದ ಶ್ರೀ ಕೃಷ್ಣದೇವರಾಯ ಸಂಸ್ಥಾನದಲ್ಲಿ ಸಾಮಾಂತ ದೊರೆಗಳಾಗಿ ದಂಡನಾಯಕರಾಗಿ ಸೇವೆಯನ್ನು ಸಲ್ಲಿಸುತ್ತಿದ್ದರು. ಕಲ್ಲಪ್ಪ ನಾಯಕ ವಿಜಯನಗರ ಸಾಮ್ರಾಜ್ಯದಲ್ಲಿ ಉನ್ನತ ಹುದ್ದೆಯಲ್ಲಿದ್ದನು. ಆ ಸಮಯದಲ್ಲಿ ವಿಜಯನಗರದ ಅವಸಾನದ ನಂತರ ಎಲ್ಲರೂ ಚದುರಾಗಿ ತಮ್ಮ ೭ ಜನ ಮಹಾ ಪರಾಕ್ರಮಿ ಮಕ್ಕಳ ಜೊತೆಗೂಡಿ ಸಾತಾರಾ ಮಹಾರಾಜರ ಸೇವೆಗೆ ತೆರಳಿದ. ಕಲ್ಲಪ್ಪ ನಾಯಕ, ಹಿರಿಯ ಹನುಮನಾಯಕ, ಚಿಕ್ಕ ಹನುಮ ನಾಯಕ, ಗಡ್ಡಿ ಹನುಮ ನಾಯಕ, ಸಂಜಂಗಿ ಹನುಮ ನಾಯಕ, ಕರಿ ಹನುಮ ನಾಯಕ, ಬಿಲ್ಲ ಹನುಮ ನಾಯಕ, ಜಡಿ ಹನುಮ ನಾಯಕ ರಾಜನು ಇವರ ಪರಾಕ್ರಮ, ಧೈರ್ಯ, ಸ್ವಾಭಿಮಾನವನ್ನು ತಿಳಿದು, ಸೇವೆಗೆ ಅವಕಾಶ ಮಾಡಿಕೊಟ್ಟಿದ್ದಲ್ಲದೇ ಸಾಮಂತಗಡ್ ಹಾಗೂ ಪಾರಸಗಡ್ ರಾಜರ

ವಿರುದ್ಧ ಯುದ್ಧ ಮಾಡಲು ಆದೇಶಿಸಿದ. ಯುದ್ಧದಲ್ಲಿ ಕಲ್ಲಪ್ಪ ನಾಯಕ ತನ್ನ ಮಕ್ಕಳ ಸಹಾಯದಿಂದ ಇಬ್ಬರೂ ರಾಜರನ್ನು ಸೋಲಿಸಿ ಖೈದಿಗಳನ್ನಾಗಿ ಮಾಡಿ ಸಾತಾರಾ ರಾಜರ ಮುಂದೆ ಹಾಜರುಪಡಿಸಿದ. ಆಗ ಮಹಾರಾಜರು ಸಂತಸಪಟ್ಟು ಇಂಡಿ, ಹಿಪ್ಪರಗಿ, ಎಳಮಲ್-ಸಿಂದಗಿ-ಬಾಗೇವಾಡಿ, ಮುದ್ದೆಬಿಹಾಳ, ನಿಡುಗುಂದ, ನಾಲತವಾಡ್, ಹಾಗೂ ತುಂಬಾ ತಾಲೂಕುಗಳಲ್ಲಿ ಶೇಕಡ ೫ ಕಂದಾಯ ವಸೂಲಿ ಮಾಡುವ ಅಧಿಕಾರ ಕೊಟ್ಟ. ಹಾಗೂ ಕಲ್ಲಪ್ಪ ನಾಯಕರಿಗೆ ೧೨೦೦ ಕುದುರೆ ಸವಾರರ ಸೇನಾಪತಿಯಾಗಿ ನೇಮಿಸಿದರು.'[೧]

'೧೫೨೩ರಲ್ಲಿ ಕಲ್ಲಪ್ಪ ನಾಯಕನ ಮರಣದ ನಂತರ ಚಿಕ್ಕ ಹನುಮ ನಾಯಕ ತನ್ನ ಬಂಧುಗಳೊಂದಿಗೆ ಮುದಗಲ್‌ಗೆ ಬಂದು ಅಲ್ಲಿಂದ ತಾವರಗೇರಾ ತಲುಪಿ ದೇಶಗತ್ತಿ ವತನವನ್ನು ಪಡೆದುದ್ದಲ್ಲದೇ ರಾಮರಿತ್ತಿಯ ದೇಸಾಯಿತನವನ್ನು ಪಡೆದ. ಆ ವೇಳೆಗಾಗಲೇ ಕಲ್ಲಪ್ಪ ನಾಯಕನ ಇಬ್ಬರು ಮಕ್ಕಳು ಮೃತಪಟ್ಟಿದ್ದರು. ಚಿಕ್ಕ ಹನುಮ ನಾಯಕನನ್ನು ತನ್ನ ನಾಲ್ಕು ಜನ ಬಂಧುಗಳೊಂದಿಗೆ ರಾಯದುರ್ಗ, ಜಲದುರ್ಗಗಳ ಮೇಲೆ ಆಕ್ರಮಣ ಮಾಡಿ ಮುದಿರೆಡ್ಡಿಯಿಂದ ಅವೆರಡು ಕಿಲ್ಲೆಗಳನ್ನು ಗೆದ್ದು ಜಲದುರ್ಗದಲ್ಲಿದ್ದು ಒಂದು ಬೇಟೆಗೆ ಹೋದಾಗ ನಾಯಕನು ಹಕ್ಕಿಯೇ ಗಿಡುಗನನ್ನು ಓಡಿದಿದ್ದ ವಿಚಿತ್ರ ದೃಶ್ಯವನ್ನು ಕಂಡು ಆ ಸ್ಥಳಕ್ಕೆ ನಾಯಕನು ಕಕ್ಕೇರಾಯೆಂದು ಹೆಸರಿಟ್ಟ. ಈ ಸ್ಥಳವನ್ನು ಅಭಿವೃದ್ಧಿಪಡಿಸಿ ಸೋಮನಾಥ ಮಂದಿರವನ್ನು ಕಟ್ಟಿಸಿ ಪೂಜೆಯ ವ್ಯವಸ್ಥೆಗಾಗಿ ಉಂಬಳಿ ಕೊಟ್ಟ..'[೨]

'೧೮೩೮ರಲ್ಲಿ ಚಿಕ್ಕ ಹನುಮನಾಯಕನ ಮರಣಾನಂತರ ಆತನ ಮಗ ಜಾಂಪನಾಯಕ ಉತ್ತರಾಧಿಕಾರಿಯಾಗಿ ಕಕ್ಕೇರಾದಲ್ಲೇ ಇದ್ದ. ಆತನ ಕಾಲದಲ್ಲಿ ಅಂತಹ ಮಹತ್ವದ ಘಟನೆಗಳೇನೂ ನಡೆಯಲಿಲ್ಲ. ಈತನ ಮರಣಾನಂತರ ಈತನ ಮಗ ಗಡ್ಡದಪಾಮನಾಯಕ ಉತ್ತರಾಧಿಕಾರಿಯಾಗಿ ಕಕ್ಕೇರಾದಲ್ಲಿ ಉಳಿದು ಆಡಳಿತ ನಡೆಸಿದ. ಈತನ ಕಾಲದಲ್ಲಿ ಅಂತಹ ಮಹತ್ವದ ಘಟನೆಗಳು ಸಂಭವಿಸಲಿಲ್ಲ. ಈತನಿಗೆ ಪರಾಕ್ರಮಿಗಳಾದ, ಧೈರ್ಯಶಾಲಿಗಳಾದ ವೀರರಾದ ಗಡ್ಡಿಲಿಂಗನಾಯಕ ಮತ್ತು ಗಡ್ಡಿಪಿಡ್ಡನಾಯಕರೆಂಬ ಇಬ್ಬರು ಮಕ್ಕಳಿದ್ದರು. ಹಿರಿಯ ಮಗ ಗಡ್ಡಿ ಲಿಂಗನಾಯಕ ಗುಡಗುಂಟಿ ಜಾಗಿರವನ್ನು ಪಡೆದು ಸಂಸ್ಥಾನವನ್ನು ಸ್ಥಾಪಿಸಿದರೆ ಇನ್ನೊಬ್ಬ ಕಿರಿಯ ಮಗ ಗಡ್ಡಿ ಪಿಡ್ಡನಾಯಕ ಸುರಪುರ (ವಾಗಿಣಗೇರಿ) ಸಂಸ್ಥಾನವನ್ನು ಸ್ಥಾಪಿಸುತ್ತಾನೆ.'[೩] ಈತನೇ ಸಗರನಾಡಿನ ಸುರಪುರದ ಸಂಸ್ಥಾನದ ಮೂಲಪುರುಷನಾಗುತ್ತಾನೆ. ವಾಗಿಣಗೇರಿ ಕೋಟೆಯನ್ನು ನಿರ್ಮಿಸಿ ೫೦೦ ಕುದುರೆ ೪೦೦೦ ಕಾಲಾಳುಗಳೊಡನೆ ಸಗರನಾಡಿನ ಕೇಂದ್ರ ಕೋಟೆಯಾದ ಶಹಾಪುರ ಕೋಟೆಯನ್ನು ಬಿಜಾಪುರದ ಆದಿಲ್‌ಷಾಹಿ ಕಿಲ್ಲೆದಾರನಿಂದ ಕಸಿದುಕೊಂಡನು. ನಂತರ ಈತನು ಆನೆಯ ಸೊಕ್ಕನ್ನು ಅಡಗಿಸಿ ಮದಗಜ ಮಲ್ಲನೆಂಬ ಬಿರುದನ್ನು ಪಡೆಯುತ್ತಾನೆ. ಮತ್ತು ಈತನ ಶೌರ್ಯವನ್ನು ಮೆಚ್ಚಿ, ಔರಂಗಜೇಬನು ಒಂದು ಪತ್ರವನ್ನು ಬರೆದಿದ್ದಾನೆ.

ಈತನ ನಂತರ ದತ್ತುಪುತ್ರ ಹರಸಂಗಿ ಪಾಮನಾಯಕ ಅಧಿಕಾರಕ್ಕೆ ಬರುತ್ತಾನೆ. ಈ ಪಾಮನಾಯಕ ೧೨೦೦೦ ನುರಿತ ಬೇಡರ ಪಡೆಯೊಂದಿಗೆ ದಿಲೇರಖಾನನನ್ನು ಸೋಲಿಸುತ್ತಾನೆ. ಈತನು ಅನಿರೀಕ್ಷಿತ ಸಾವಿಗೀಡಾದಾಗ ಪೀತಾಂಬರೀ ಬಹರಿ ಪಿಡ್ಡನಾಯಕ (ಕ್ರಿ.ಶ. ೧೬೮೭-೧೭೨೯) ಅಧಿಕಾರದ ಗದ್ದುಗೆಯನ್ನು ಹಿಡಿಯುತ್ತಾನೆ. ಈತನು ಕ್ರಿ.ಶ. ೧೬೯೬ರಲ್ಲಿ ಮೊಘಲರ ವಿರುದ್ಧ ಸ್ವಾತಂತ್ರ್ಯ ಘೋಷಿಸಿದ. ಆಗ ಮೂಲ ವಾಗಿಣಗೇರಿ ಕೋಟೆಯನ್ನು ಔರಂಗಜೇಬನು ವಶಪಡಿಸಿಕೊಳ್ಳುತ್ತಾನೆ. ಆದ್ದರಿಂದ ಪಿಡ್ಡನಾಯಕ ಪ್ರದೇಶವನ್ನು ಬದಲಾಯಿಸಿ ಸುರಪುರ ಸಂಸ್ಥಾನವನ್ನು ಸ್ಥಾಪಿಸುತ್ತಾನೆ. ಈತ ಮೃತನಾದ ತರುವಾಯ ಹಿರಿಯ ಮಗ ಇಮ್ಮಡಿ ಪಾಮನಾಯಕನು ಪಟ್ಟಕ್ಕೆ ಏರುತ್ತಾನೆ. 'ಈತನ ನಂತರ ಮಗ ಮುಮ್ಮಡಿ ಪಿಡ್ಡನಾಯಕ ಅಧಿಕಾರಕ್ಕೆ ಬರುತ್ತಾನೆ. ಈತ ಅಸಮರ್ಥ ಅರಸನಾದುದರಿಂದ ಈತನ ತಮ್ಮನಾದ ಮೊಂಡಗೈ ವೆಂಕಟಪ್ಪ ನಾಯಕ ಸಿಂಹಾಸನವನ್ನು ಏರುತ್ತಾನೆ. ಈತನು ಬೇಡರ ಸೈನ್ಯದೊಂದಿಗೆ ಪಾಂಡಿಚೇರಿ ಕೋಟೆಯನ್ನು ವಶಪಡಿಸಿಕೊಂಡು ನಾಸರಜಂಗನಿಗೆ ನೀಡುತ್ತಾನೆ. ಈತನ ನಂತರ ಮಗನಾದ ಮುಮ್ಮಡಿ ಪಾಮನಾಯಕನು ಕ್ರಿ.ಶ. ೧೭೫೦ರಲ್ಲಿ ಪಟ್ಟಕ್ಕೇರುತ್ತಾನೆ. ನಂತರ ಇಮ್ಮಡಿ ವೆಂಕಟಪ್ಪ ನಾಯಕ, ಇಮ್ಮಡಿ ಪಿಡ್ಡನಾಯಕ, ಮುಮ್ಮಡಿ ವೆಂಕಟಪ್ಪನಾಯಕ, ರಾಜಾ ಕೃಷ್ಣಪ್ಪನಾಯಕ ನಾಲ್ವಡಿ ವೆಂಕಟಪ್ಪ ನಾಯಕ ಅಧಿಕಾರದ ಗದ್ದುಗೆಯನ್ನು ಹಿಡಿದರು. ನಾಲ್ವಡಿ ವೆಂಕಟಪ್ಪನಾಯಕ ಬ್ರಿಟೀಷರ ವಿರುದ್ಧ ತಿರುಗಿ ಬಿದ್ದು ಕ್ಯಾಪ್ಟನ್ ನ್ಯೂಬೇರಿಯನ್ನು ಸೋಲಿಸುತ್ತಾನೆ. ಇದು ಭಾರತದ ಪ್ರಪ್ರಥಮ ಸ್ವಾತಂತ್ರ್ಯ ಸಂಗ್ರಾಮವಾಗಿದೆ.'[೪] ಹೀಗೆ ಶತಶತಮಾನಗಳಿಂದಲೂ ಇಂದಿನವರೆಗೂ ಬೇಡರು ಧೈರ್ಯಶಾಲಿಗಳು, ನಾಯಕತ್ವಕ್ಕೆ ಯೋಗ್ಯರೆಂದು ತೋರಿಸಿಕೊಟ್ಟಿದ್ದಾರೆ. ಹೀಗೆ ಮಹಾ ವೀರಾಧಿವೀರರಾಗಿದ್ದ ಸಗರನಾಡಿನ ಬೇಡ ಸಮುದಾಯದ ರಾಜರುಗಳು ಮತ್ತು ಸೈನಿಕರು ಮಹಾ ದೇಶಾಭಿಮಾನಿಗಳಾಗಿದ್ದು ಯಾವ ದುರಾಗ್ರಹಿಗಳ ಪ್ರಭಾವಕ್ಕೊಳಗಾಗದೇ ಹಿಂದೂ ಸಂಸ್ಕೃತಿಯ ರಕ್ಷಕರಾಗಿ ಪರಧರ್ಮ ಸಹಿಷ್ಣುತಾವಾದಿಗಳಾಗಿ ಈ ನಾಡನ್ನು ಆಳಿದ್ದಾರೆ. ಸಗರನಾಡಿನ ಬೇಡ ಸಮುದಾಯದ ಚರಿತ್ರೆಯನ್ನು ನೋಡಿದಾಗ ಇಲ್ಲಿಯ ಬೇಡರು ಕಲೆ, ಸಾಹಿತ್ಯ, ಸಂಗೀತ ಮುಂತಾದವುಗಳನ್ನು ಕಲಿತರು. ಸಗರನಾಡು ತನ್ನ ಗತ ವೈಭವವನ್ನು ನೂರಾರು ವರ್ಷಗಳವರೆಗೆ ಹೆಸರುವಾಸಿಯಾಗಿ ಬಾಳಿ ತನ್ನ ಕೀರ್ತಿಯನ್ನು ಉಳಿಸಿಕೊಂಡು ಬಂದಿದೆ. ಈ ಕೀರ್ತಿಗೆ ಇಲ್ಲಿಯ ಪ್ರಾಮಾಣಿಕರಾದ ಪ್ರಜೆಗಳು ಹಾಗೂ ಬೇಡ ವೀರ ಸೈನಿಕರು ಕಾರಣರಾಗಿದ್ದಾರೆ. ಅದಕ್ಕಾಗಿಯೇ ದಿಲ್ಲಿಯನ್ನು ನಡುಗಿಸಿದ ಸುರಪುರದ ಶಿಸ್ತಿನ ಸೈನ್ಯ ಎಂದು ಬಿರದನ್ನು ಪಡೆದಿದ್ದಾರೆ.

ಸಗರನಾಡಿನ ಬೇಡ ಸಮುದಾಯದ ಬಗ್ಗೆ ಹಿರಿಯರಿಂದ ಹಾಗೂ ಆಧಾರ ಗ್ರಂಥಗಳಿಂದ ಐತಿಹ್ಯಗಳಿಂದ ತಿಳಿದುಕೊಂಡಿದ್ದೇನೆಂದರೆ, ರಷ್ಯಾ, ಚೀನಾ ಮತ್ತು ಇತರ

ವಿದೇಶಗಳಲ್ಲಿ ಹೀಗಿರುವ ಸೈನ್ಯದ ಶಿಸ್ತು ಮತ್ತು ಸೈನ್ಯದ ಪದ್ಧತಿ ಹಾಗೂ ಕಾರ್ಯಾಚರಣೆ ಸಗರನಾಡಿನ ಬೇಡರ ಸೈನ್ಯದಲ್ಲಿ ಮೊದಲೇ ರೂಢಿಯಲ್ಲಿತ್ತು. ಆದಿಲ್‌ಶಾಹಿ ಮರಾಠರು, ಮತ್ತು ಹೈದರಾಬಾದ ನಿಜಾಮನು ಕಾಲ ಕಾಲಕ್ಕೆ ಇವರ ಸಹಾಯವನ್ನು ಪಡೆದದ್ದನ್ನು ನೋಡಿದರೆ, ಈ ಬೇಡ ಸಮುದಾಯದ ಸೈನ್ಯದ ವೀರರ ಕೀರ್ತಿಯ ಬಗ್ಗೆ ಹೆಮ್ಮೆಯುಂಟಾಗುತ್ತದೆ. ದಕ್ಷಿಣ ಭಾರತದಿಂದ ಉತ್ತರ ಭಾರತದಲ್ಲಿ ಈ ನಾಯಕರ ವೀರ ಪ್ರತೀತವಾದ ವಾರ್ತೆಗಳು ಹಬ್ಬಿದ್ದವು. ಸಗರನಾಡಿನಲ್ಲಿ ಬೇಡ ಸಮುದಾಯದಲ್ಲಿ ಹುಟ್ಟಿದ ಮಗುವಿನ ಹೆಸರನ್ನು ಗುರಿಕಾರಣ ಬರೆದುಕೊಂಡು ಸುರಪುರದ ಸಂಸ್ಥಾನದ ಖಜಾನೆಯಿಂದ ಪ್ರತಿ ತಿಂಗಳು ಆ ಮಗುವಿನ ಪೋಷಣೆಗಾಗಿ ಐದು ರೂಪಾಯಿಗಳಂತೆ ಪ್ರೌಢನಾಗುವವರೆಗೆ ಕೊಡಲಾಗುತ್ತಿತ್ತು. ಈ ಎಲ್ಲಾ ಅಂಶಗಳು ಸಗರನಾಡಿನ ಬೇಡರ ಹಿನ್ನೆಲೆಯಾದ ಪ್ರಸ್ತುತ ಸಗರನಾಡಿನ ಸಮುದಾಯದ ಬಗ್ಗೆ ತಿಳಿದುಕೊಳ್ಳಬೇಕಾದರೆ ಸಗರನಾಡಿನ ೩ ತಾಲೂಕುಗಳನ್ನು ಕೂಲಂಕುಷವಾಗಿ ಅಧ್ಯಯನವನ್ನು ಮಾಡಬೇಕಾಗುತ್ತದೆ.

**೩.೨ ಸಗರನಾಡಿನ ಸುರಪುರ, ಶಹಾಪುರ, ಜೇವರ್ಗಿ ತಾಲೂಕಿನ ಬೇಡ ಸಮುದಾಯ**

**ಸುರಪುರ ತಾಲೂಕಿನ ಬೇಡ ಸಮುದಾಯ**

"ಸುರಪುರ ನಗರ

ಭೌಗೋಳಿಕ ವಿಸ್ತೀರ್ಣ : ೧೮೨೦

ಒಟ್ಟು ಜನಸಂಖ್ಯೆ : ೫೦,೦೦೦

ಬೇಡರ ಜನಸಂಖ್ಯೆ : ೨೭,೦೦೦

ತಾಲೂಕಿನ ಜನಸಂಖ್ಯೆ : ೨,೯೩,೧೩೩

ಒಟ್ಟು ಬೇಡ ಜನಸಂಖ್ಯೆ : ೬೦,೦೦೦"[೫]

ಕರ್ನಾಟಕದಲ್ಲಿ ಸುರಪುರಕ್ಕೆ ತನ್ನದೇ ಆದ ಹೆಸರು ಇದೆ. ಬೇಡರು ಎಂದರೇ ಸುರಪುರ. ಸುರಪುರ ಎಂದರೇ ಬೇಡರು. ಸುರಪುರದ ಇನ್ನೊಂದು ಹೆಸರೇ ಬೇಡರ ಗೂಡೆಂದು ಕರೆದರೆ ಅತಿಶಯೋಕ್ತಿಯಾಗಲಾರದು. ಸುರಪುರದ ಬೇಡರ ಬೆಡಗುಗಳು ಈ ರೀತಿ ಇವೆ. ಗೋಸಲರು, ಮೀನಗಲರು, ಗುಜ್ಜಲರು, ಗುರ್ತಿಯರು ಇತ್ಯಾದಿ. ಬೇಡರು ಎಂದರೆ ಈ ಜನಾಂಗದವರು ಯಾರಿಗೂ ಮತ್ತು ಯಾವುದಕ್ಕೂ ಅಂಜುವುದಿಲ್ಲ. ನಾನು ಈ ಅಧ್ಯಯನದಲ್ಲಿ ಬೇಡರ ಶೂರತನದ ಮತ್ತು ಸಾಮಾಜಿಕ ಜೀವನವನ್ನು ಕುರಿತು ಬೆಳಕು ಚೆಲ್ಲುವ ಪ್ರಯತ್ನ ಮಾಡಿರುವೆ. ಬೇಡರ ಪಡೆ ಮತ್ತು ಸಾಮಾನ್ಯ ಬೇಡರು ಭಾರತದ ಸ್ವಾತಂತ್ರ್ಯದ ನಂತರದ ಬೇಡರ ಬಗ್ಗೆ ವಿವರಿಸುವೆ. ಇಲ್ಲಿನ ಅರಸರು ಕೂಡಾ ಬೇಡರೇ. ಸುರಪುರದ ಅರಸರಷ್ಟೇ ಸಾಮಾನ್ಯ ಬೇಡರು ಶೂರರಿದ್ದರು ಅಂದರೆ ಯುದ್ಧದಲ್ಲಿ,

ಶಕ್ತಿಯಲ್ಲಿ, ಯುಕ್ತಿಯಲ್ಲಿ, ಸ್ಪರ್ಧೆಯಲ್ಲಿ, ನಿಷ್ಠೆಯಲ್ಲಿ, ಪ್ರಾಮಾಣಿಕತೆಯಲ್ಲಿ, ದಾನದಲ್ಲಿ, ಸ್ವಾಭಿಮಾನದಲ್ಲಿ ಒಟ್ಟಿನಲ್ಲಿ ಸುರಪುರದ ಬೇಡರು ಎಲ್ಲದರಲ್ಲೂ ಶೂರರು ಎಂದರೆ ತಪ್ಪಾಗಲಾರದು. ಉದಾ: ಮೊಗಲರ ವಿರುದ್ಧ ಗೆಲವು, ಔರಂಗಜೇಬನನ್ನು ಸೋಲಿಸಿದ್ದು, ಆನೆಗುಂದಿಯ ಅರಸರನ್ನು ಮಣಿಸಿದ್ದು, ಕನಕಗಿರಿಯ ಹಿರೇನಾಯಕನನ್ನು ಸೆರೆಹಿಡಿದಿದ್ದು, ಪಾಂಡಿಚೇರಿಯನ್ನು ಗೆದ್ದದ್ದು, ಕಿತ್ತೂರಿನ ಸಂಗೋಳ್ಳಿ ರಾಯಣ್ಣನಿಗೆ ಸುರಪುರದ ೩೦೦ ಜನ ಬೇಡರ ಪಡೆಯನ್ನು ನೀಡಿದ್ದು, ಹೀಗೆ ಇವರ ಶೂರತನಕ್ಕೆ ನೂರಾರು ಉದಾಹರಣೆಗಳನ್ನು ಕೊಡಬಹುದು. ಈ ಎಲ್ಲಾ ಘಟನೆಗಳು ಇತಿಹಾಸದಲ್ಲಿ ಹಾದು ಹೋಗಿವೆ. ಪ್ರಸ್ತುತ ೧೯೪೭ರ ನಂತರ ಅಂದರೆ ಸ್ವಾತಂತ್ರ್ಯ ನಂತರ ಬೇಡ ಸಮುದಾಯವನ್ನು ಅಧ್ಯಯನ ಮಾಡುತ್ತಾ ಹೋದಾಗ ಹೆಚ್ಚಿನ ವಿಷಯಗಳು ಗಮನಕ್ಕೆ ಬಂದವು.

'ಮಲ್ಲಪ್ಪ ಕಲ್ಬುರ್ಗಿ ಇವನು ಇನ್ನೂ ಜೀವಂತವಾಗಿದ್ದಾನೆ. ಈತನು ೧ ಕ್ವಿಂಟಲ್ ಜೋಳವನ್ನು ಸರದಾರ ಪಟೇಲ್ ಚೌಕದಿಂದ ಶ್ರೀ ವೇಣುಗೋಪಾಲ ಸ್ವಾಮಿಯ ದೇವಸ್ಥಾನದ ಎಲ್ಲಾ ಮೆಟ್ಟಲುಗಳನ್ನು ಹತ್ತಿ ಕೆಳಗೆ ಇಳಿಯುತ್ತಿದ್ದನಂತೆ. ಮತ್ತು ಮಲ್ಲಪ್ಪನ ತಮ್ಮ ಮಾನಪ್ಪ ಕಲಬುರ್ಗಿ ಇವನು ೧೯೮೦ರ ದಶಕದಲ್ಲಿ ೨ ಕ್ವಿಂಟಲ್ ಜೋಳವನ್ನು ಹೊತ್ತುಕೊಂಡು ಶ್ರೀ ವೇಣುಗೋಪಾಲ ಸ್ವಾಮಿಯ ದೇವಸ್ಥಾನದ ೬೪ ಮೆಟ್ಟಲುಗಳನ್ನು ಹತ್ತಿ ಕೆಳಗೆ ಇಳಿಯುತ್ತಿದ್ದನಂತೆ.'[೬] ಇದೇ ಮಾನಪ್ಪ ಶಹಾಪೂರ ಪಟ್ಟಣದಲ್ಲಿಯೂ ಯಾರೂ ಸಾಧಿಸದ ಒಂದು ಕ್ವಿಂಟಲ್ ಜೋಳದ ಚೀಲವನ್ನು ಹೊತ್ತುಕೊಂಡು ಶ್ರೀ ದಿಗ್ಗಿ ಸಂಗಯ್ಯನ ದೇವಸ್ಥಾನದ ನೂರಾರು ಮೆಟ್ಟಲುಗಳನ್ನು ಹತ್ತಿ ಪ್ರದರ್ಶನ ಮಾಡಿದ್ದಾನೆ. ಹಾಗೂ ರಂಗಪ್ಪ ಜೇವರ್ಗಿ ತನ್ನ ೬೫ನೇ ವಯಸ್ಸಿನಲ್ಲಿ ಒಂದು ದೊಡ್ಡ ನೀರು ತುಂಬಿದ ಕೊಡವನ್ನು ತನ್ನ ಹಲ್ಲಿನಿಂದ ಎತ್ತುತ್ತಿದ್ದನಂತೆ. ಮಹಾದೇವಪ್ಪ ಜೇವರ್ಗಿ ಇವನು ರಂಗಪ್ಪ ಜೇವರ್ಗಿಯ ಮಗ. ಇನ್ನೂ ಬದುಕಿದ್ದಾನೆ. ಇವರದು ಅತೀ ಬಡತನದ ಕುಟುಂಬ. ಕಟ್ಟಿಗೆ ಮಾರಿ ಜೀವನ ಸಾಗಿಸುತ್ತಿದ್ದರು. ಒಂದು ಒಪ್ಪತ್ತಿನ ಊಟಕ್ಕೂ ಪರದಾಡಬೇಕಾಗಿತ್ತು. ಇಂತಹ ಕಷ್ಟದ ಪರಿಸ್ಥಿತಿಯಲ್ಲಿ ಮಹಾದೇವಪ್ಪ ಸೈನ್ಯಕ್ಕೆ ಸೇರಿದ್ದನು. ಇದು ಅವನ ಆಸೆಯೂ ಆಗಿತ್ತು. ಭಾರತ ಪಾಕಿಸ್ತಾನದ ಯುದ್ಧದಲ್ಲಿ ಪಾಕಿಸ್ತಾನದ ವಿರುದ್ಧ ಯುದ್ಧ ಮಾಡಿ ಯುದ್ಧದ ಸಮಯವೇ ಎರಡು ಸಲ ಪಾಕಿಸ್ತಾನದ ಸೈನ್ಯದ ಕೈಯಲ್ಲಿ ಸಿಕ್ಕರೂ ಅತೀ ಚಾಣಾಕ್ಷತನದಿಂದ ಅವರಿಂದ ತಪ್ಪಿಸಿಕೊಂಡು ಬಂದ ಶೂರ ಬೇಡ ಯುವಕ "ಮಹಾದೇವಪ್ಪ" ಎಂದು ಹೇಳುವುದಕ್ಕೆ ಹೆಮ್ಮೆಯಾಗುತ್ತದೆ. ಹಣಮಂತ ಕೊದ್ದಡ್ಡಿ ಡೊಣ್ಣೆಗೇರಿ, ಕಾನಯ್ಯ ಚಿನ್ನಾಕಾಯಿ, ಬಸಯ್ಯ ಚಿನ್ನಾಕಾಯಿ, ಮತ್ತು ಅಡಿವೆಪ್ಪ ಎಂಬ ಬೇಡರು, ಬರಿಗೈಯಿಂದ ಕೇವಲ ಒಂದು ಕೈಯಲ್ಲಿ ಬೆಂಕಿಯ ದೀವಟಿಗೆ ಹಿಡಿದು ಚಿರತೆ ಇರುವ ಗುಹೆಯಲ್ಲಿ ಮೊಳಕೈಯಲ್ಲಿ ನಡೆದುಕೊಂಡು ಹೋಗಿ ಚಿರತೆಗಳನ್ನು ಎಬ್ಬಿಸುತ್ತಿದ್ದರು. ಬರಿಗೈಯಿಂದ ಯಾವುದೇ ಆಯುಧ ಇಲ್ಲದೇ ಚಿರತೆಯ ಗವಿಯಲ್ಲಿ ಹೊಕ್ಕು ಹೊರಹಾಕುವ

ಧೈರ್ಯ ಸುರಪುರದ ಬೇಡರಿಗೆ ಬಿಟ್ಟು ಬೇರೆ ಯಾರಿಗೆ ಇರಲು ಸಾಧ್ಯವೇ ಇಲ್ಲ ಎಂಬ ವಿಷಯವನ್ನು ಮನಗಾಣಬಹುದು. ಹಣಮಂತ ಕೊದ್ದೊಡ್ಡಿ ಚಿರತೆ ಎಬ್ಬಿಸುವಾಗ ಚಿರತೆ ಅವನ ತಲೆಗೆ ಕಚ್ಚಿದ ಗಾಯಗಳನ್ನು ಎಲ್ಲರಿಗೂ ತೋರಿಸುತ್ತಿದ್ದನಂತೆ. ಹಾಗೆಯೇ ಭೀಮೇಶಾ ಬಿಚ್ಚುಗತ್ತಿ ಎನ್ನುವ ಬೇಡ ಚಿರತೆಯನ್ನು ಹಿಡಿದು ಕಟ್ಟಿ ಹಾಕುತ್ತಿದ್ದನಂತೆ. ಭೀಮಣ್ಣ ಕವಲಿ ಕುಂಬಾರಪೇಟ ಇವನು ಒಂದು ಕ್ವಿಂಟಲ್ ಜೋಳವನ್ನು ಹೆಗಲ ಮೇಲೆ ಹೊತ್ತು ದೇವರಿಗೆ ೫ ದೀಡ್ ನಮಸ್ಕಾರ ಹಾಕಿದ್ದಾನೆ. ಅವನಿಗೆ ಸಾಂಡು ಭೀಮಣ್ಣ ಎನ್ನುತ್ತಾರೆ. ಸಾಂಡು ಎಂದರೆ zinde tiulismat ಮೇಲೆ ಇರುವ ಶಕ್ತಿವಂತ ಮನುಷ್ಯ ಅಂತ ಇವನನ್ನು ಸಾಂಡು ಭೀಮಣ್ಣ ಎನ್ನುತ್ತಾರೆ. ಇಷ್ಟೆಲ್ಲ ಸಾಹಸ ಧೈರ್ಯವನ್ನು ಹೊಂದಿರುವ ಸುರಪುರ ತಾಲೂಕಿನ ಬೇಡರ ಪ್ರಸ್ತುತ ಸ್ಥಿತಿಗತಿಯನ್ನು ಗಮನಿಸಿದರೆ ಸ್ವಾತಂತ್ರ್ಯ ಬಂದಾಗಿನಿಂದಲೂ ಸುರಪುರಕ್ಕೆ ಕ್ಷೇತ್ರದಲ್ಲಿ ಬೇಡ ನಾಯಕರೇ ಅಧಿಕಾರದಲ್ಲಿದ್ದಾರೆ. ಇಷ್ಟಾದರೂ ಬೇಡರಿಗೆ ಬಡತನ ತಪ್ಪಿಲ್ಲ. ಕಾರಣ ಬೇಡರ ದುಶ್ಚಟಗಳು, ಸೋಮಾರಿತನ, ಸರಕಾರಿ ಸೌಲಭ್ಯಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳದೇ ಇರುವುದು ಕಾರಣಗಳಾಗಿವೆ. ಸುರಪುರ ತಾಲೂಕಿನಲ್ಲಿ ಅತಿ ಹೆಚ್ಚಾಗಿ ಬೇಡ ಜನಾಂಗದವರೇ ವಾಸಿಸುವ ಕೇರಿಗಳು (ಓಣಿಗಳು) ಮತ್ತು ಗ್ರಾಮಗಳನ್ನು ಕಾಣಬಹುದು.

**ಡೊಣ್ಣೀಗೇರಿ ಓಣಿ:**

'ಸುರಪುರದಲ್ಲಿರುವ ಪ್ರಸಿದ್ಧ ಕೇರಿ ಡೊಣ್ಣಿಗೇರಿ. ಈ ಕೇರಿಯ ಬೇಡ ಜನಾಂಗದವರು ಹಿಂದೆ ಸೈನಿಕರಾಗಿದ್ದರು. ಪ್ರಸ್ತುತ ಸಂದರ್ಭದಲ್ಲಿ ಅತ್ಯಂತ ದುಸ್ಥಿತಿಯಲ್ಲಿ ಜೀವನ ನಡೆಸುತ್ತಿದ್ದಾರೆ. ಈ ಕೇರಿಯಲ್ಲಿ ಅಜ್ಞಾನ, ಅನಕ್ಷರತೆ, ಕುಡಿತ ಮುಂತಾದವುಗಳಿಂದ ಬೇಡ ಜನಾಂಗ ಸಂಪೂರ್ಣವಾಗಿ ಹಿಂದುಳಿದಿದೆ. ಇಲ್ಲಿರುವ ಕೆಲವು ಕುಟುಂಬಗಳು ಮಾತ್ರ ಸುಸ್ಥಿತಿಯಲ್ಲಿವೆ. ಡೊಣ್ಣಿಗೇರಿಯಲ್ಲಿ ಪ್ರಸಿದ್ಧ ಬೇಡ ನಾಯಕ ಮನೆತನಗಳೆಂದರೆ ದೇಸಾಯಿ ಮನೆತನ, ಅಂಕುಶ ಮನೆತನ, ಕೊದ್ದೊಡ್ಡಿ ಮನೆತನ, ಕಲಬುರ್ಗಿ ಮನೆತನಗಳು. ಪ್ರಸ್ತುತ ಬೇಡ ಸಮುದಾಯದವರು ನಿಧಾನಗತಿಯಲ್ಲಿ ಆಮೆ ವೇಗದಲ್ಲಿ ಬದಲಾವಣೆಯನ್ನು ಹೊಂದುತ್ತಿದ್ದಾರೆ. ಡೊಣ್ಣಿಗೇರಿಯ ಬೇಡ ಸಮುದಾಯದವರ ವೃತ್ತಿ ಹುಣಸೆಹಣ್ಣು ಮಾರಾಟ ಮಾಡುವುದು. ಸೀತಾಫಲ ಹಣ್ಣು ಮಾರಾಟ, ಗಾರೆ ಕೆಲಸ, ಹಮಾಲಿ ಕೆಲಸ ಮಾಡುವುದು, ಈ ರೀತಿಯಾಗಿ ವಿವಿಧ ವೃತ್ತಿಗಳಲ್ಲಿ ತೊಡಗಿದ್ದಾರೆ.'[೭]

**ಗುಡಾಳಕೇರಿ ಬೇಡ ಸಮುದಾಯ:**

ಡೊಣ್ಣಿಗೇರಿಯ ಬೇಡರ ಪರಿಸ್ಥಿತಿ ಒಂದು ರೀತಿಯದಾದರೆ, ಅದರ ಪಕ್ಕದಲ್ಲೇ ಇರುವ ಗುಡಾಳ ಕೇರಿಯ ಬೇಡ ನಾಯಕರ ಸ್ಥಿತಿಗತಿ ಬೇರೆಯಾಗಿದೆ. ಇದು ಆಶ್ಚರ್ಯವೂ

ಕೂಡಾ. ಅಂದರೆ ಸದಾ ದುಡಿಮೆ ಮಾಡುವಂತಹ ಪರಿಸ್ಥಿತಿ ಗುಡಾಳಕೇರಿಯಲ್ಲಿದೆ. ಸುಮಾರು ೨೦ರಿಂದ ೨೫ ಕುಟುಂಬಗಳಿಂದ ಕೂಡಿದ ಸಣ್ಣ ಕೇರಿ ಇದಾಗಿದೆ. ಇಲ್ಲಿ ವಾಸಿಸುವ ಬೇಡರು ಪ್ರಸ್ತುತವಾಗಿ ಇವರು ಗಾರೆ, ಗುತ್ತಿಗೆ, ಸರಕಾರಿ ನೌಕರಿ ಮಾಡುತ್ತಾ ತಮ್ಮ ಜೀವನ ಸಾಗಿಸುತ್ತಿದ್ದಾರೆ. ಗುಡಾಳಕೇರಿಯಲ್ಲಿ ದೊಡ್ಡ ಕುಟುಂಬ ಎಂದರೆ ಗುಡ್ಡಕಾಯಿ, ಹುಲಿಕಲ್ ಹಾಗೂ ನಾಯಿಕೋಡಿ ಕುಟುಂಬದವರು. ಶೈಕ್ಷಣಿಕವಾಗಿ ನೋಡಿದರೆ ಗುಡಾಳಕೇರಿಯಲ್ಲಿ ಅನೇಕರಲ್ಲಿ ನಾಲ್ಕು ಜನರು ಸ್ನಾತಕೋತ್ತರ ಪದವೀಧರರು ಇದ್ದಾರೆ. ಇತ್ತೀಚಿನ ದಿನಮಾನಗಳಲ್ಲಿ ಸರಕಾರಿ ನೌಕರಿ ಪಡೆಯುತ್ತಿರುವುದು ವಿಶೇಷ.

**ಬಿಚ್ಚಗತ್ತಿಕೇರಿ ಬೇಡರು:**

ಸುರಪುರದಲ್ಲಿರುವ ಬಿಚಗತ್ತಿಕೇರಿ ಬೇಡರು ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ಕುಟುಂಬಗಳಾಗಿವೆ. ಪ್ರಸ್ತುತ ಈ ಕೆರೆಯ ಬೇಡ ಜನಾಂಗದವರು ಆಯ್ಕೆ ಮಾಡಿಕೊಂಡ ವೃತ್ತಿ ಆಟೊ ಚಾಲನೆ. ಹಾಗೂ ಇನ್ನಿತರ ವೃತ್ತಿಗಳಲ್ಲಿ ತೊಡಗಿದ್ದಾರೆ. ಬೆರಳಣಿಕೆ ಕುಟುಂಬದಲ್ಲಿರುವ ಯುವಕರು ಇಂದು ಶಾಲಾ ಕಾಲೇಜುಗಳ ಮೆಟ್ಟಿಲು ಏರಿದ್ದಾರೆ. ಡೊಣ್ಣಿಗೇರಿಯವರಂತೆ ಇವರೂ ಕೂಡಾ ಹೊಲ-ಗದ್ದೆ ತೋಟಗಳನ್ನು ಗುತ್ತಿಗೆಗೆ ಹಿಡಿದು ಸಾಗುವಳಿಯನ್ನು ಮಾಡುತ್ತಿದ್ದಾರೆ. ಮುಖ್ಯವಾಗಿ ಇತ್ತೀಚಿನ ದಿನಗಳಲ್ಲಿ ಸುರಪುರದ ನಗರ ಸಭೆಯಿಂದ ಈ ಓಣಿಯಲ್ಲಿ ಕೊಳವೆ ಭಾವಿಯನ್ನು ತೋಡಿಸಲು ಹೋದಾಗ ಆ ಸ್ಥಳದಲ್ಲಿ ರಾಜರ ಗುಪ್ತಮಾರ್ಗ (ಸುರಂಗ ಮಾರ್ಗ) ಕಂಡು ಬಂದಿದೆ. ಸರಿ ಸುಮಾರು ೧೫ ಅಡಿ ಅಗಲ ೧೦ ಅಡಿ ಎತ್ತರ ಈ ಸುರಂಗಮಾರ್ಗವಿದೆ. ಇದು ವಾಗಣಗೇರಿಯಿಂದ ಸುರಪುರದ ಅರಮನೆಯವರೆಗೆ ಇರಬಹುದು ಎಂಬ ಸಂಶಯವಿದೆ. ಪುರಾತತ್ವ ಇಲಾಖೆ ಆಸಕ್ತಿಯಿಂದ ಸುರಪುರಕ್ಕೆ ಬಂದು ಸಂಶೋಧನೆ ಮಾಡಿದರೆ ಸುರಪುರದ ಕೀರ್ತಿ, ಗತವೈಭವ ಬೆಳಕಿಗೆ ಬರುತ್ತದೆ.

**ಮ್ಯಾಗೇರಿ ಬೇಡ ನಾಯಕರು:**

ಪ್ರಸ್ತುತವಾಗಿ ಜೀವನ ಸಾಗಿಸಲು ಗುತ್ತಿಗೆದಾರ ಕೆಲಸ ಮಾಡುವುದನ್ನು ಕಾಣಬಹುದು. ಈ ಬೇಡ ನಾಯಕರು ಆರ್ಥಿಕವಾಗಿ ಸಾಮಾಜಿಕವಾಗಿ ಮುಂದುವರೆದವರಾಗಿದ್ದಾರೆ. ಇಲ್ಲಿರುವ ಬೇಡರು ರಾಜಕೀಯ ಕ್ಷೇತ್ರದಲ್ಲಿ ಉನ್ನತ ಸ್ಥಾನದಲ್ಲಿದ್ದಾರೆ. ಈ ಕೇರಿಗಳಲ್ಲಿ ವಾಸಿಸುವ ಬೇಡರು ಜಿಲ್ಲಾ ಪಂಚಾಯತಿ ಅಧ್ಯಕ್ಷರಾಗಿ, ಮಂತ್ರಿಗಳಾಗಿದ್ದಾರೆ. ಡೊಣ್ಣೆಗೇರಿ, ಬಿಚಗತ್ತಿಕೇರಿ ಬೇಡರಿಗೆ ಹೋಲಿಸಿದಾಗ ಈ ಬೇಡ ಸಮುದಾಯದವರು ವಿಭಿನ್ನ ಎಂದು ಹೇಳಿದರೆ ತಪ್ಪಾಗಲಾರದು. ಈ ಕೇರಿಯಲ್ಲಿ ವಾಸಿಸುವ ರಾಜಾ ಮದನಗೋಪಾಲ ನಾಯಕ, ರಾಜಾ ವಾಸುದೇವನಾಯಕ, ರಾಜಾ ಹನುಮಪ್ಪ ನಾಯಕ, ರಾಜಾ ಪಾಮನಾಯಕ ಇವರು ಈ ಓಣಿಯ ಮುಖಂಡರಾಗಿದ್ದಾರೆ.

**ನಡುಗೇರಿ ಬೇಡ ನಾಯಕರು**

ಈ ನಡುಗೇರಿ ಮ್ಯಾಗೇರಿಯನ್ನು ಹೊಂದಿಕೊಂಡಿದೆ. ಇಲ್ಲಿರುವ ಬೇಡರು ಆಟೋ ಚಾಲಕರಾಗಿ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ತಮ್ಮ ಸ್ವಾಭಿಮಾನ, ಶಕ್ತಿ ಸಾಮರ್ಥ್ಯವನ್ನು ಹಿಂದಿನಿಂದ ಉಳಿಸಿಕೊಂಡಿದ್ದಾರೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದಿದ್ದಾರೆ. ಈ ಓಣಿಯಲ್ಲಿ ವಾಸಿಸುವ ಇಟ್ಟಂಗಿ ಮನೆತನದವರು ಮತ್ತು ಜಾಗಿರದಾರರಾದ ರಾಜಾ ಲಚಮಪ್ಪ ನಾಯಕ ಇವರು ಮುಖಂಡರಾಗಿದ್ದಾರೆ.

**ಶೆಟ್ಟಿ ಓಣಿ ಬೇಡ ನಾಯಕರು:**

ಇವರು ಸರ್ಕಾರಿ ವೃತ್ತಿಯನ್ನು ಮಾಡುತ್ತಾ ಜೀವನವನ್ನು ಸಾಗಿಸುತ್ತಿದ್ದಾರೆ. ಹೆಚ್ಚು ವಿದ್ಯಾವಂತರಿಂದ ಕೂಡಿರುವ ಬೇಡ ನಾಯಕರು ಗುತ್ತಿಗೆದಾರರು, ಸರ್ಕಾರಿ ಇಂಜಿನೀಯರರು ಮುಂತಾದ ವೃತ್ತಿಗಳನ್ನು ಮಾಡುತ್ತ ತೊಡಗಿರುವ ಪ್ರಮುಖ ನಾಯಕ ಕುಟುಂಬಗಳನ್ನು ಕಾಣಬಹುದು. ಈ ಕೇರಿಯಲ್ಲಿ ವಾಸಿಸುವ ಎಸ್. ಗೋಪಾಲನಾಯಕ, ಪ್ರಕಾಶ ಗುತ್ತೆದಾರರು ಪ್ರಥಮ ದರ್ಜೆ ಗುತ್ತಿಗೆದಾರರಾಗಿ ಅನೇಕ ಕೆಲಸ ಕಾರ್ಯಗಳನ್ನು ಮಾಡಿದ್ದಾರೆ. ಇಲ್ಲಿ ವಾಸಿಸುವ ಕೆಲವು ಬೇಡ ಕುಟುಂಬಗಳು ಆರ್ಥಿಕವಾಗಿ ಮುಂದುವರೆದಿವೆ ಎಂದು ಹೇಳಬಹುದು.

**ಕುಂಬಾರಪೇಟೆ ಬೇಡನಾಯಕರು:**

'ಪ್ರಸ್ತುತವಾಗಿ ಈ ಪ್ರದೇಶದಲ್ಲಿ ವಾಸಿಸುವ ಬೇಡರು ಒಕ್ಕಲುತನ ಮಾಡುತ್ತಿದ್ದಾರೆ. ಇವರು ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಿಂದುಳಿದವರಿದ್ದಾರೆ. ಕುಂಬಾರಪೇಟೆಯ ಬೇಡರು ಮತ್ತು ಗುಡಾಳಕೇರಿಯ ಗುಡ್ಡಕಾಯಿ ಬೇಡರು ಒಂದೇ ವಂಶಕ್ಕೆ ಸೇರಿದವರು. ಪರಸ್ಪರ ಸಹಕಾರದಿಂದ ಜೀವನ ಸಾಗಿಸುತ್ತಿದ್ದಾರೆ. ಒಕ್ಕಲುತನ, ಎತ್ತಿನ ವ್ಯಾಪಾರ, ಹೈನುಗಾರಿಕೆ ಕೆಲಸ, ಹಮಾಲಿ, ಆಟೋ ಚಾಲನೆ ವೃತ್ತಿಯನ್ನು ನಿರ್ವಹಿಸುತ್ತಾ ಜೀವನ ಸಾಗಿಸುತ್ತಿದ್ದಾರೆ. ಕುಂಬಾರಪೇಟೆಯಲ್ಲಿರುವ ದೊಡ್ಡ ಮನೆತನಗಳು ಇನ್ನೂ ಸಹ ತಮ್ಮ ಸಂಪ್ರದಾಯ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡಿದ್ದಾರೆ.'[೮]

**ಸತ್ಯಂಪೇಟೆಯ ಬೇಡನಾಯಕರು**

'ಸಂಸ್ಥಾನದ ಒಬ್ಬ ರಾಣಿಯಾದ ಸತ್ಯಮ್ಮ ಎನ್ನುವವರ ಹೆಸರಿನಲ್ಲಿ ಈ ಪೇಟೆಗೆ ಇಟ್ಟಿರುವುದರಿಂದ ಇದಕ್ಕೆ ಸತ್ಯಂ ಪೇಟೆ ಎಂದು ಹೆಸರು ಬರಲು ಕಾರಣ.'[೯] ಇಲ್ಲಿ ವಾಸಿಸುವ ಬೇಡರು ಗಾರೆ ಕೆಲಸ, ಗುತ್ತಿಗೆ ಕೆಲಸ, ಒಕ್ಕಲುತನ ಮುಂತಾದ ವೃತ್ತಿಗಳನ್ನು ಮಾಡುತ್ತ ಜೀವನ ಸಾಗಿಸುತ್ತಿದ್ದಾರೆ. ಯಂಕಪ್ಪಗೌಡ ಪ್ರಸ್ತುತ ಪುರಸಭೆ ಸದಸ್ಯರಾಗಿದ್ದಾರೆ.

ಇಲ್ಲಿರುವ ಬಹುತೇಕ ಕುಟುಂಬಗಳು ಸ್ವಲ್ಪ ಮಟ್ಟಿಗೆ ಆರ್ಥಿಕವಾಗಿ ಚೇತರಿಸಿಕೊಂಡಿದೆ. ಈ ಪೇಟೆಯ ಬೇಡರಲ್ಲಿ ಪ್ರತ್ಯೇಕ ಒಗ್ಗಟ್ಟು ಇದೆ. ಏನಾದರೂ ಸಮಸ್ಯೆ ಬಂದರೆ ಎಲ್ಲರೂ ಒಗ್ಗಟ್ಟಿನಿಂದ ಕೂಡಿಕೊಂಡು ಸಮಸ್ಯೆಯನ್ನು ಬಗೆಹರಿಸುತ್ತಾರೆ.

**ವೆಂಕಟಾಪುರ ಬೇಡ ನಾಯಕರು:**

ಪ್ರಸ್ತುತ ವೇಂಕಟಾಪುರ ಬೇಡರು ಕಡು ಬಡವರಾಗಿದ್ದು ಸಾಕಷ್ಟು ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಈ ಜನಾಂಗದವರ ಕೃಷಿ ಭೂಮಿಗಳಿಗೆ ನೀರಾವರಿ ಸೌಕರ್ಯ ಇಲ್ಲದ ಕಾರಣ ಕೃಷಿಯಲ್ಲಿ ಹಿಂದೆ ಉಳಿದಿದ್ದಾರೆ. ಇವರ ಕೃಷಿ ಭೂಮಿಗಳು ಬರುಡಾಗಿರುವುದರಿಂದ ಈ ಜನಾಂಗ ಸಾಕಷ್ಟು ಸಮಸ್ಯೆಗಳನ್ನು ಎದುರಿಸುತ್ತಾ ಬಂದಿದ್ದಾರೆ.

**ದೇವರಗೋನಾಲ ಗ್ರಾಮ:**

ಸುರಪುರದ ಒಂದು ಪ್ರಮುಖ ಗ್ರಾಮ ದೇವರಗೋನಾಲ. ಈ ಗ್ರಾಮ ತನ್ನದೇಯಾದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಈ ಗ್ರಾಮದಲ್ಲಿ ದೇವಾನು ದೇವತೆಗಳ ವಾಸಸ್ಥಾನವಾಗಿರುವದರಿಂದ ಈ ಗ್ರಾಮಕ್ಕೆ ದೇವರಗೋನಾಲ ಎಂದು ಹೆಸರು ಬಂದಿರಬಹುದು. ಈ ಗ್ರಾಮದ ಬೇಡರಲ್ಲಿ ಎಲ್ಲಿಯೂ ಕಾಣದ ಒಗ್ಗಟ್ಟನ್ನು ಇಲ್ಲಿ ಕಾಣಬಹುದು. ಯಾವುದೇ ಒಬ್ಬ ವ್ಯಕ್ತಿಗೆ ಸಮಸ್ಯೆ ಬಂದರೆ ಎಲ್ಲರೂ ಆ ಸಮಸ್ಯೆಗೆ ಸ್ಪಂದಿಸುತ್ತಾರೆ. ಪ್ರಸ್ತುತವಾಗಿ ಸಾಕಷ್ಟು ವಿದ್ಯಾವಂತರನ್ನು, ಬುದ್ಧಿಜೀವಿಗಳನ್ನು, ಸರ್ಕಾರಿ ನೌಕರದಾರರನ್ನು ಕಾಣಬಹುದು ಈ ಗ್ರಾಮದ ದೇವರ ಆಶೀರ್ವಾದವೋ ಏನೋ ಇಲ್ಲಿನ ಬಹುತೇಕ ಯುವಕರು ವಿದ್ಯಾವಂತರು ಇವರ ಓದಿನಲ್ಲಿ ಸ್ಪರ್ಧೆಯ ಮನೋಭಾವನೆಯನ್ನು ಕಾಣಬಹುದು. ಪ್ರಥಮ ದರ್ಜೆ ದ್ವಿತೀಯ ದರ್ಜೆ ಹಾಗೂ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಅನೇಕರು ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಈ ಗ್ರಾಮದಲ್ಲಿ ದೊಡ್ಡ ಮನೆತನಗಳೆಂದು ಪೋಲೀಸ ಪಾಟೀಲ ಮನೆತನ, ದೇಸಾಯಿ ಮನೆತನ, ದೀವಳಗುಡ್ಡ ಮನೆತನ, ಗೌಡರ ಮನೆತನಗಳನ್ನು ಕಾಣಬಹುದು. ಬೇಡರನ್ನು ಸಂಘಟಿಸುವಲ್ಲಿ ಈ ಮನೆತನದವರ ಪಾತ್ರ ಮಹತ್ವದ್ದಾಗಿದೆ.

**ನಗನೂರು ಗ್ರಾಮ:**

ಸುರಪುರ ಪಟ್ಟಣದಿಂದ ೩೦ ಕಿ.ಮೀ. ದೂರವಿರುವ ಈ ಗ್ರಾಮ ಆರ್ಥಿಕವಾಗಿ ಸ್ವಲ್ಪ ಮಟ್ಟಿಗೆ ಅಭಿವೃದ್ಧಿಯನ್ನು ಹೊಂದಿದೆ. ೪೨೦೦ ಜನಸಂಖ್ಯೆಯನ್ನು ಹೊಂದಿರುವ ಈ ಗ್ರಾಮ ಒಂದು ಸಾವಿರ ಬೇಡರ ಜನಸಂಖ್ಯೆಯನ್ನು ಹೊಂದಿದೆ. ಉಳಿದಂತೆ ಎಲ್ಲಾ ಜಾತಿ ಜನಾಂಗದವರು ವಾಸವಾಗಿದ್ದಾರೆ. ಕೋಮು ಸೌಹಾರ್ದತೆಗೆ ಹೆಸರುವಾಸಿಯಾಗಿರುವ ಈ ಗ್ರಾಮ ಭಾವೈಕ್ಯತೆಯನ್ನು ಹೊಂದಿದೆ. ಪ್ರತಿ ಜೂನ್ ತಿಂಗಳಿನಲ್ಲಿ ಶ್ರೀ ಶರಣಮುತ್ಯಾನ

ಜಾತ್ರೆಯು ಒಂದು ತಿಂಗಳಕಾಲ ನಡೆಯುತ್ತದೆ. ಹಾಗೂ ದಾಸೋಹ ವ್ಯವಸ್ಥೆಯನ್ನು ಮಾಡಲಾಗಿದೆ. ಹೇಳಿಕೆಯನ್ನು ಹೇಳುವ ಸಂಪ್ರದಾಯ ಇನ್ನೂ ಇದೆ. ಬೇಡರು ಈ ಗ್ರಾಮದಲ್ಲಿ ಆರ್ಥಿಕವಾಗಿ, ಶೈಕ್ಷಣಿಕವಾಗಿ ಪ್ರಗತಿಯನ್ನು ಹೊಂದುತ್ತಿದ್ದಾರೆ. ಪ್ರತಿ ಬೇಡ ಕುಟುಂಬ ೩ ರಿಂದ ೧೫ ಎಕರೆ ಕೃಷಿ ಭೂಮಿಯನ್ನು ಹೊಂದಿದೆ. ಕೆಲವು ಜನ ಬೇಡರು ವ್ಯವಸಾಯವನ್ನು ತಮ್ಮ ಮೂಲ ಕಸುಬನ್ನಾಗಿ ಮಾಡಿಕೊಂಡರೆ ಇನ್ನೂ ಕೆಲವರು ಹೋಟೆಲಗಳನ್ನು, ಕಿರಾಣಿ ಅಂಗಡಿಗಳನ್ನು ಇಟ್ಟುಕೊಂಡು ವ್ಯಾಪಾರ ಮಾಡುತ್ತಿದ್ದಾರೆ. ಬೆರಳಣಿಕೆಯಷ್ಟು ಬೇಡ ಸಮುದಾಯದವರು ಮಾತ್ರ ಬಡವರಾಗಿ ಗುಡಿಸಲುಗಳಲ್ಲಿ ವಾಸವಾಗಿರುವುದನ್ನು ಕಾಣಬಹುದು. ಸುರಪುರ ತಾಲೂಕಿನ ವ್ಯಾಪ್ತಿಗೆ ಒಳಪಟ್ಟ ಈ ಗ್ರಾಮ ರಾಜಕೀಯ ಚುನಾವಣೆಯಲ್ಲಿ ಶಹಾಪುರ ಮತ ಕ್ಷೇತ್ರಕ್ಕೆ ಒಳಪಡುತ್ತದೆ.

**ಗೌಡಗೇರಾ ಗ್ರಾಮ:**

ಗೌಡಗೇರಾ ಗ್ರಾಮವನ್ನು ಬೇಡರ ಗ್ರಾಮ ಎಂದು ಕರೆಯಬಹುದು. ಊರಿನ ಒಟ್ಟು ಜನಸಂಖ್ಯೆ ೧೭೫೦ ಆಗಿದ್ದು ಬೇಡರ ಜನಸಂಖ್ಯೆ ೧೧೦೦ ಆಗಿದೆ. ಉಳಿದಂತೆ ಎಲ್ಲಾ ಜಾತಿ ಜನಾಂಗದವರು ಇಲ್ಲಿ ಅಲ್ಪಸಂಖ್ಯಾತರಾಗಿದ್ದಾರೆ. ಬಹುತೇಕ ಬೇಡರು ಬಡವರಾಗಿದ್ದು ಕೇವಲ ೧ ರಿಂದ ೫ ಎಕರೆ ಕೃಷಿ ಭೂಮಿಯನ್ನು ಹೊಂದಿದ್ದಾರೆ. ವ್ಯವಸಾಯವನ್ನು ಅವಲಂಬಿಸಿದ ಈ ಜನರು ಬೇಸಿಗೆ ಕಾಲದಲ್ಲಿ ಬೆಂಗಳೂರು, ಮುಂಬೈ ಮಹಾರಾಷ್ಟ್ರ ರಾಜ್ಯದ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಧಾರ್ಮಿಕ ಸಂಪ್ರದಾಯಗಳನ್ನು ಪಾಲಿಸುತ್ತಾ ಬಂದಿರುವ ಈ ಸಮುದಾಯದವರು ಶ್ರೀದೇವಿ ಗ್ರಾಮ ದೇವತೆಯನ್ನು ಭಕ್ತಿಯಿಂದ ಪೂಜಿಸುತ್ತಾರೆ. ದಸರಾ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುವ ಇವರು ವಿಶೇಷ ಸಂದರ್ಭಗಳಲ್ಲಿ ಬೇಟೆಯಾಡಲು ಹೋಗುತ್ತಾರೆ. ಗುಡಿಸಲು, ಟೀನ್ ಮನೆಗಳಲ್ಲಿ ಜನತಾ ಮನೆಗಳಲ್ಲಿ ವಾಸವಾಗಿದ್ದು ಕೆಲವರು ಸರ್ಕಾರಿ ಸೌಲಭ್ಯವನ್ನು ಪಡೆದರೆ ಇನ್ನೂ ಕೆಲವರು ಸೌಲಭ್ಯದಿಂದ ವಂಚಿತರಾಗಿದ್ದಾರೆ.

**ಗೊಡ್ರಿಹಾಳ ಗ್ರಾಮ:**

ಈ ಗ್ರಾಮ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿದೆ. ಈ ಗ್ರಾಮದ ಜನಸಂಖ್ಯೆ ೧೮೦೦ ಆಗಿದ್ದು, ಮತದಾನ ಮಾಡುವವರ ಸಂಖ್ಯೆ ೯೮೦ ಆಗಿದೆ. ಈ ಗ್ರಾಮ ಕುಗ್ರಾಮ ವಾಗಿದ್ದು, ಇಲ್ಲಿ ವಾಸಿಸುವ ಬಹುತೇಕ ಜನರು ಬಡವರಾಗಿದ್ದಾರೆ. ಬೇಡರು ಬಡತನದ ಬೇಗೆಯಲ್ಲಿ ಬೇಯುತ್ತಿದ್ದಾರೆ. ಬೆರಳಣಿಕೆಯಷ್ಟು ಜನರು ಮಾತ್ರ ಉತ್ತಮ ಸ್ಥಿತಿವಂತರಾಗಿದ್ದಾರೆ. ಧಾರ್ಮಿಕ ಹಬ್ಬ ಹರಿದಿನಗಳನ್ನು ಆಚರಿಸಿಕೊಂಡು ಬರುತ್ತಿರುವ ಈ ಜನ ಮಹಾನವಮಿ, ದಸರಾ ಹಬ್ಬವನ್ನು ಸಾಂಪ್ರದಾಯಿಕವಾಗಿ ಆಚರಿಸುತ್ತಾರೆ.

ಗುಡಿಸಲುಗಳಲ್ಲಿ, ಜಂತಿ ಮನೆಗಳಲ್ಲಿ, ಟಿನ್ ಮನೆಗಳಲ್ಲಿ, ವಾಸವಾಗಿದ್ದಾರೆ. ಈ ಸಮುದಾಯದವರು ಕೇವಲ ೪ ರಿಂದ ೫ ಜನರು ಮಾತ್ರ ಸರಕಾರಿ ಉದ್ಯೋಗಗಳನ್ನು ಮಾಡುತ್ತಿದ್ದಾರೆ.

**ಕನ್ನೆಳ್ಳಿ ಗ್ರಾಮ**

ಸುರಪುರ ತಾಲೂಕಿನ ಬೈಚಬಾಳ ಗ್ರಾಮ ಪಂಚಾಯತಿಗೆ ಈ ಗ್ರಾಮ ಒಳಪಡುತ್ತದೆ. ಈ ಗ್ರಾಮದಲ್ಲಿ ಒಬ್ಬರು ಜಿಲ್ಲಾ ಪಂಚಾಯತಿ ಸದಸ್ಯರಾಗಿದ್ದಾರೆ. ಇನ್ನೊಬ್ಬರು ತಾಲೂಕಾ ಪಂಚಾಯತಿ ಸದಸ್ಯರಾಗಿದ್ದಾರೆ. ಊರಿನ ಒಟ್ಟು ಜನಸಂಖ್ಯೆ ೪೮೦೦ ಆಗಿದ್ದು, ೧೨೦೦ ಜನ ಬೇಡರಾಗಿದ್ದಾರೆ. ಉಳಿದಂತೆ ಎಲ್ಲಾ ಜಾತಿ ಜನಾಂಗದವರು ವಾಸವಾಗಿದ್ದಾರೆ. ಗೋಸಲ, ಗುಜ್ಜಲ, ಮೀನುಗುಲರ ಬೆಡಗಿನ ಬೇಡರು ಹೆಚ್ಚಿನ ಜನಸಂಖ್ಯೆಯಲ್ಲಿದ್ದಾರೆ. ಬಹುತೇಕ ಬೇಡರು ಬಡವರಾಗಿದ್ದು ಉಳಿದ ಬೇಡರು ಶ್ರೀಮಂತರಾಗಿದ್ದಾರೆ. ವ್ಯವಸಾಯವನ್ನು ಅವಲಂಬಿಸಿದ ಈ ಜನ ಜೋಳ, ಸಜ್ಜಿ, ಹತ್ತಿ, ಭತ್ತವನ್ನು ಬೆಳೆಯುತ್ತಿದ್ದಾರೆ. ೨೦೦೭-೦೮ರಲ್ಲಿ ಮಾಜಿ ಮುಖ್ಯಮಂತ್ರಿಯವರಾದ ಕುಮಾರಸ್ವಾಮಿಯವರು ಇಲ್ಲಿ ಗ್ರಾಮ ವಾಸ್ತವ್ಯ ಮಾಡಿದ್ದರು. ಆಗ ಅಧಿಕಾರಿಗಳು ಈ ಗ್ರಾಮಕ್ಕೆ ಮೂಲಭೂತ ಸೌಕರ್ಯಗಳನ್ನು ಒದಗಿಸಿದ್ದರು. ಆದರೆ ಈಗ ಹಿಂದಿನ ಸ್ಥಿತಿಯಲ್ಲಿಯೇ ಇದೆ. ಸುರಪುರ ತಾಲೂಕಿನ ಹಳ್ಳಿಗಳಲ್ಲಿ ೩ನೇ ಅತಿ ದೊಡ್ಡ ಗ್ರಾಮವೆಂದರೆ ಈ ಕನ್ನೆಳ್ಳಿ ಗ್ರಾಮವೆಂದು ಹೇಳಬಹುದು.

**ಸಿದ್ದಾಪುರ (ಎ)**

ಸುರಪುರ ಪಟ್ಟಣದಿಂದ ಕೇವಲ ೨ ಕಿ.ಮೀ. ದೂರವಿರುವ ಈ ಗ್ರಾಮ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ತೀರಾ ಹಿಂದುಳಿದಿದೆ. ಹಲವಾರು ಸಮಸ್ಯೆಗಳ ತಾಣವೆಂದು ಕರೆಯಬಹುದು. ಗ್ರಾಮದ ಒಟ್ಟು ಜನ ಸಂಖ್ಯೆ ೧೦೦೦ ಆಗಿದ್ದು ಬೇಡರ ಜನಸಂಖ್ಯೆ ೬೦೦ ಆಗಿದೆ. ಇನ್ನು ಸಹ ಗುಡಿಸಲು, ಚಪ್ಪರದ ಮನೆ, ಟಿನ್ ಮನೆಗಳಲ್ಲಿ ವಾಸವಾಗಿದ್ದಾರೆ. ವಿಶೇಷವೆಂದರೆ ಈ ಗ್ರಾಮದ ಅರಣ್ಯ ಪ್ರದೇಶ ಅಂದರೆ ಬೆಟ್ಟದಲ್ಲಿ ರಾಜವಂಶಕ್ಕೆ ಸೇರಿದ ಕುಟುಂಬ ದವರು ವಾಸವಾಗಿದ್ದಾರೆ. ರಾಜಾ ಶ್ರೀನಿವಾಸ ನಾಯಕ, ರಾಜಾ ವಾಸುದೇವ ನಾಯಕ ಈ ಗ್ರಾಮದ ಮುಖಂಡತ್ವವನ್ನು ವಹಿಸಿಕೊಂಡಿದ್ದಾರೆ. ಇವರು ಗ್ರಾಮದ ಜನರ ಸಮಸ್ಯೆಗಳಿಗೆ ಸ್ಪಂದಿಸುತ್ತಿದ್ದರು. ನ್ಯಾಯ ಕೇಳಿ ಬಂದ ಜನರಿಗೆ ನ್ಯಾಯವನ್ನು ಒದಗಿಸುತ್ತಿದ್ದಾರೆ. ಇವರು ಆರ್‌ಸಿಸಿ ಮನೆಯಲ್ಲಿ ವಾಸವಾಗಿದ್ದು ಉತ್ತಮ ಸ್ಥಿತಿವಂತರಿದ್ದಾರೆ. ಇನ್ನು ಸಹ ರಾಜಾ ವಾಸುದೇವ ನಾಯಕ ಅವರು ಬಂದೂಕು ಹಿಡಿದು ತಮ್ಮ ಸಂಗಡಿಗರ ಜೊತೆಗೆ ಬೇಟೆಗೆ ಹೊರಡುತ್ತಾರೆ. ಅಲ್ಲದೇ ಈ ಗ್ರಾಮ ಬೇಡರು ತಿಂಗಳಿಗೆ ಒಮ್ಮೆಯಾದರೂ ಬೇಟೆಯಾಡಲು ಹೋಗುತ್ತಾರೆ. ಬೇಟೆಯ ಅಸ್ತ್ರಗಳಾದ ಭರ್ಚಿ, ಬಂದೂಕು, ಮೊಲದ ಬಲಿ, ಕೌಜುಗ ಬಲಿ, ಏದಿನ ಬಲಿ, ಪಕ್ಷಿಗಳ ಬಲಿಗಳು ಇವರಲ್ಲಿ ಇವೆ.

## ಚಿಕ್ಕನಹಳ್ಳಿ ಗ್ರಾಮ

ಸಗರನಾಡಿನ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಪುಟ್ಟ ಹಳ್ಳಿಯೇ ಈ ಚಿಕ್ಕನಹಳ್ಳಿ. ಈ ಹಳ್ಳಿಯನ್ನು ತಲುಪಲು ಎರಡು ಮಾರ್ಗಗಳಿದ್ದು, ಒಂದು ಸುರಪುರದಿಂದ ವಾಗಣಗೇರಾ ಬೋನ್ಹಾಳ ಮಾರ್ಗವಾಗಿ ಸುಮಾರು ೧೬ ಕಿ.ಮೀ. ದೂರದಲ್ಲಿದೆ. ಈ ಗ್ರಾಮವನ್ನು ತಲುಪಲು ಒಂದು ಹಳ್ಳವನ್ನು ದಾಟಬೇಕು. ದಾರಿಯುದ್ದಕ್ಕೂ ಬೃಹತ್ ಬಂಡೆಗಳಿಂದ ಕೂಡಿದ ಗುಡ್ಡಗಳು ಕಣ್ಣಿಗೆ ಕಾಣುತ್ತವೆ. ಇನ್ನೊಂದು ಮಾರ್ಗವೆಂದರೆ ಪರಮಾನಂದ ಗುಡ್ಡದ ಸಮೀಪದಲ್ಲಿರುವ ಹೆಬ್ಬಾಳ ಮಾರ್ಗವಾಗಿ ಚಿಕ್ಕನಹಳ್ಳಿಗೆ ತಲುಪಬಹುದು. ಚಿಕನಹಳ್ಳಿಯ ಪೂರ್ವದಲ್ಲಿ ಹಿರೆ ಗುಡ್ಡ ದಕ್ಷಿಣದಲ್ಲಿ ಪರಮಾನಂದ ಗುಡ್ಡವಿದೆ, ಪಕ್ಕದಲ್ಲಿ ಬಾಚಿಮಟ್ಟಿ, ಹಾಗೂ ಪಕ್ಷಿಧಾಮವಿರುವ ಬೋನ್ಹಾಳ, ಮಂಗಳೂರುಗಳಿವೆ. ಚಿಕ್ಕನಹಳ್ಳಿಯಲ್ಲಿ ಸುಮಾರು ೨೫೦ ರಿಂದ ೩೦೦ ಮನೆಗಳಿವೆ. ಹನುಮಂತ ದೇವರ ದೇವಸ್ಥಾನದ ಮುಂದಿರುವ ಅಗಸಿಯನ್ನು ಬಿಟ್ಟರೆ ಊರ ಒಳಗಡೆ ಕಿರಿದಾದ ರಸ್ತೆ ಇದ್ದು ವಿದ್ಯುತ್ ಸೌಲಭ್ಯವಿದೆ. ಇಲ್ಲಿ ೧ ರಿಂದ ೭ನೇ ವರ್ಗದ ಸರಕಾರಿ ಶಾಲೆಯಿದೆ. ಇಲ್ಲಿನ ಬಹುತೇಕ ಬೇಡರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಶಿಕ್ಷಣದ ಮಹತ್ವ ಅರಿತಿರುವ ಚಿಕ್ಕನಹಳ್ಳಿಯ ಬೇಡರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ. ಇದೊಂದು ಉತ್ತಮ ಬೆಳವಣಿಗೆಯಾಗಿದೆ. ಇಲ್ಲಿನ ಗ್ರಾಮ ದೇವತೆ ಶ್ರೀ ರೇಣುಕಾ ಯಲ್ಲಮ್ಮ ದೇವಿಯಾಗಿದ್ದು ಈ ಊರಿಗೆ ಬೇರೆ ಬೇರೆ ಸ್ಥಳಗಳಿಂದ ಸಾವಿರಾರು ಭಕ್ತರು ದೇವಿಯ ದರ್ಶನಕ್ಕಾಗಿ ಬರುತ್ತಾರೆ. 'ಸುರಪುರ ಸಂಸ್ಥಾನದ ಪ್ರಮುಖ ರಾಜರಲ್ಲಿ ಒಬ್ಬರಾದ ಹಸರಂಗಿ ಪಾಮನಾಯಕರ ಕಾಲದಲ್ಲಿ (೧೬೬೬-೧೬೮೭) ಈ ಗ್ರಾಮದಲ್ಲಿ ನಿರ್ಮಿಸಿದ ಹುಡೆ(ಹೊಡೆ) ಐತಿಹಾಸಿಕ ಕುರುಹು ಆಗಿ ಊರ ಮಧ್ಯದಲ್ಲಿರುವುದು ಚಿಕ್ಕನಹಳ್ಳಿಯ ಹೆಮ್ಮೆಯ ಸಂಗತಿ. ಈ ಗ್ರಾಮದ ಹಿರೇಯ ಗುಡ್ಡದಲ್ಲಿ ಎರಡು ಗುಹೆಗಳಿದ್ದು ಈ ಗುಹೆಗಳಿಗೆ ಕೌರವರ ಪಾಂಡವರ ಗುಹೆಗಳೆಂದು ಕರೆಯಯುತ್ತಿರುವುದಾಗಿ ಊರ ಪ್ರಮುಖರು ಹೇಳುತ್ತಾರೆ.'[೧೯] ದೇವಿಯ ಪೂಜೆ, ಭಜನೆ, ಜಾತ್ರೆ ಮತ್ತು ದೇವಸ್ಥಾನದ ಎಲ್ಲಾ ಕೆಲಸ ಕಾರ್ಯಗಳನ್ನು ಯಾವ ಜಾತಿ ಭೇದವಿಲ್ಲದೇ ಊರಿನ ಪ್ರತಿಯೊಬ್ಬರು ಒಂದೊಂದಾಗಿ ನೆರವೇರಿಸುತ್ತಾ ಇತರರಿಗೆ ಮಾದರಿಯಾಗಿದ್ದಾರೆ. ಚಿಕ್ಕನಹಳ್ಳಿಯಲ್ಲಿ ಕಲ್ಮನೆ ಮತ್ತು ಕಲ್ಲು ವೃತ್ತಗಳಿರುವ ಬಗ್ಗೆ ಊರಿನ ಜನರಿಗೆ ಸ್ಪಷ್ಟ ಮಾಹಿತಿಗಳಿಲ್ಲ. ಆದ್ದರಿಂದ ಇಲ್ಲಿ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ. ಇನ್ನೊಂದು ಮಹತ್ವದ ವಿಷಯವನ್ನು ಇಲ್ಲಿ ವಿಶ್ಲೇಶಿಸಬೇಕಾಗಿದೆ. 'ಖ್ಯಾತ ಪತ್ರಕರ್ತರಾದ ಡಾ॥ ಪಾಟೀಲ ಪುಟ್ಟಪ್ಪರವರ "ನನ್ನದು ಈ ಕನ್ನಡ ನಾಡು" ಪುಸ್ತಕದಲ್ಲಿ ಯಾದಗಿರಿ ಜಿಲ್ಲೆಯ ಈ ಭಾಗವನ್ನು ಭವ್ಯ ಇತಿಹಾಸವಿರುವ ನೆಲೆಯೆಂಬ ಶಿರೋನಾಮೆಯಲ್ಲಿ ಬರೆದ ಲೇಖನದಲ್ಲಿ ಸಗರ ಸೀಮೆಯ ಈ ಪ್ರದೇಶದ ರಾಜನಕೋಳೂರು, ಹಗರಟಗಿ, ಜೇವರ್ಗಿ, ಮದ್ದರಿಕಿ ಚಿಕ್ಕಹಳ್ಳಿ ನೆಲವಿಗೆ ಮೊದಲಾದ ಗ್ರಾಮಗಳಲ್ಲಿಯ ತ್ರಿಕೋಣಾಕೃತಿಯ ವರ್ತುಲಾಕಾರದ ಸಮಾಧಿಗಳು ಮಧ್ಯ ಏಷ್ಯ, ಇಂಗ್ಲೆಂಡ್,

ಫ್ರಾನ್ಸ್ ಹಾಗೂ ಜರ್ಮನಿಯಲ್ಲಿಯ ಸಮಾಧಿಗಳನ್ನು ಹೋಲುತ್ತದೆ. ಮೆಹೆಂಜೋದಾರೋ ಹರಪ್ಪಗಳಲ್ಲಿ ಈ ಮಾದರಿ ಸಮಾಧಿಗಳನ್ನು ಕಾಣಬಹುದು. ಇವುಗಳನ್ನು ದ್ರಾವಿಡ್ ಬುಡಕಟ್ಟಿನ ಪ್ರಾಚೀನ ಜನರು ಕಟ್ಟಿರಬೇಕೆಂದು ಅಭಿಪ್ರಾಯಪಡುತ್ತಾ ಈ ಸಮಾಧಿಗಳ ಕಾರಣದಿಂದ ಇಲ್ಲಿನ ಜನರ ಇತಿಹಾಸವು ಮೂರು ಸಾವಿರ ವರ್ಷಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆಂದು ಉಲ್ಲೇಖಿಸುತ್ತಾರೆ.'[೧೧] ಸುಮಾರು ೩೦–೪೦ ವರ್ಷಗಳ ಹಿಂದೆ ಎಲ್ಲೆಡೆ ಮರೆಮ್ಮನ ಹಾವಳಿ (ಕಾಲರಾ) ಬಹು ಜೋರಾಗಿತ್ತು. ಈ ಕಾಯಿಲೆಗೆ ದೊಡ್ಡವರು ಮಕ್ಕಳು ಎನ್ನದೇ ಎಲ್ಲಾ ವಯೋಮಾನದವರು ತುತ್ತಾದರು. ಈ ಕಾಯಿಲೆಯು ಚಿಕ್ಕನಹಳ್ಳಿಗೆ ಕಾಲಿಟ್ಟಿತು. ಈ ಕಾಯಿಲೆಯಿಂದ ೨೫–೩೦ ಜನರ ಸಾವು ಸಂಭವಿಸಿ, ಇನ್ನೂ ಹಲವಾರು ಜನರು ಈ ರೋಗದಿಂದ ಸಾಯುವ ಸ್ಥಿತಿಯಲ್ಲಿದ್ದರು. ಇದು ಊರಿನ ಹಿರಿಯರಿಗೆಲ್ಲಾ ಚಿಂತೆಯ ವಿಷಯವಾಗಿ ಏನು ಮಾಡಬೇಕೆಂದು ಯೋಚಿಸುತ್ತಿದ್ದರು!

'ಆಗ ತಳ್ಳಳ್ಳಿ ಮುತ್ಯಾನನ್ನು ವಿಚಾರಿಸಿದರೆ ಪರಿಹಾರ ಸಿಗಬಹುದೆಂದು ಕೆಲವರು ಹೇಳಿದರು. ೪ ಜನ ತಳ್ಳಳ್ಳಿಗೆ ಹೋಗಿ ಮುತ್ಯಾನನ್ನು ಚಿಕ್ಕನಹಳ್ಳಿಗೆ ಕರೆದುಕೊಂಡು ಬಂದು ಗುಡಿಯ ಮುಂದೆ ಕುಳಿತರು. ಊರ ಹಿರಿಯರು ಊರಿನಲ್ಲಿ ಮರೆಮ್ಮನ ಹಾವಳಿಯಿಂದ ಜನರು ಜೀವಕಳೆದು ಕೊಂಡವರ ಬಗ್ಗೆ ಇದರಿಂದ ಊರ ಜನರು ಕಳವಳಕ್ಕೆ ಈಡಾದ ಬಗೆ ತಿಳಿಸಿದರು. ಅಗ ತಳ್ಳಳ್ಳಿಯ ಮುತ್ಯಾ ಆ ಕಡೆ ಈ ಕಡೆ ನೋಡಿದವನೇ ದೊಡ್ಡ ಧ್ವನಿಯಲ್ಲಿ ಈ ಊರಿನ್ಯಾಗೆ ಮರೆಮ್ಮನ ಹಾವಳಿ ಇನ್ನೂ ಮೂರ್ನಾಲ್ಕು ದೊಡ್ಡ ತಲೆ ಹೋದಮ್ಯಾಲೆ ನಿಂತೈತಿ (ದೊಡ್ಡ ತಲೆ ಎಂದರೆ ಊರ ಹಿರಿಯರ ಸಾವು) ಎಂದನು. ಊರ ಜನರಿಗೆ ಆಕಾಶವೇ ಕಳಚಿ ಬಿದ್ದಂತಾಗಿ ಒಬ್ಬರ ಮುಖ ಒಬ್ಬರು ನೋಡುವಂತಿರುವಾಗ ಅಷ್ಟರಲ್ಲಿಯೇ ಸಂಜೀವಪ್ಪಾ ಪೂಜಾರಿ ಇಲ್ಲಾ ಇಲ್ಲಾ ಈಗ ಇವತ್ತು ಕೊನೆ ಇನ್ ಮ್ಯಾಲೆ ನಮ್ಮೂರಾಗ ಈ ಮರೆಮ್ಮನ ಹಾವಳಿ ಇರಂಗಿಲ್ಲಾ ಎಂದವರೆ ಸರಸರನೇ ಎದ್ದು ಹೋಗಿಯೇ ಬಿಟ್ಟರು. ಜನರು ಏನಾಗಬಹುದೆಂಬ ಆತಂಕದಲ್ಲಿದ್ದರು.'[೧೨] ಅವರು ಹೋದದ್ದು ದೇವಿಯ ಗರ್ಭಗುಡಿಯೊಳಗೆ. ದೇವಿಗೆ ಈ ರೀತಿ ಸಾವುಗಳಾಗದಂತೆ ಆಶೀರ್ವದಿಸುವಂತೆ ಪ್ರಾರ್ಥಿಸಿದರು. ಆ ಕ್ಷಣದಿಂದಲೇ ಈ ಊರಿಗೆ ಮರೆಮ್ಮನ ಹಾವಳಿ ನಿಂತು ಯಾವುದೇ ಸಾವುಗಳು ಸಂಭವಿಸಲಿಲ್ಲಾ. ಈ ಘಟನೆಗೆ ಸಾಕ್ಷಿಯಾಗಿರುವ ಊರಿನ ಹಿರಿಯರು ಹಾಗೂ ಈಗಿನ ಪೂಜಾರಿಯಾದ ಗುಂಡಮ್ಮನವರು ಈಗಲೂ ನೆನಪಿಸುತ್ತಾರೆ. ಇನ್ನೊಂದು ಮುಖ್ಯ ವಿಷಯವೇನೆಂದರೆ ಈ ಗ್ರಾಮದಲ್ಲಿ ಯಲ್ಲಮ್ಮ ದೇವಿಯ ದೇವಸ್ಥಾನದಲ್ಲಿ ಎಣ್ಣೆ ಇಲ್ಲದೇ ದೀಪ ಉರಿದಿರುವ ಆಶ್ಚರ್ಯಕರ ಘಟನೆ ನಡೆದಿದೆ. ಇದು ವಿಚಿತ್ರವಾದ ಘಟನೆಯಾದರೆ ಇದನ್ನು ಕಣ್ಣಾರೆ ಕಂಡ ಹಿರಿಯರು ಈಗಲೂ ಇದ್ದಾರೆ. ೪–೬ ಜನ ಹಿರಿಯರಿಂದ ಈ ಘಟನೆಯನ್ನು ಖುದ್ದಾಗಿ ಕೇಳಿದ ನಂತರವೇ ನಾನು ಈ ಪವಾಡವನ್ನು ಇಲ್ಲಿ ದಾಖಲಿಸಿದ್ದೇನೆ. ಪ್ರತಿ

ದಿನ ಮುಂಜಾನೆ ಮತ್ತು ಸಂಜೆ ದೇವಸ್ಥಾನಕ್ಕೆ ದೀಪ ಹಚ್ಚಲು ಸಂಜೀವಪ್ಪಾ ಪೂಜಾರಿ ಹೋಗುತ್ತಿದ್ದರು. ಒಂದು ಸಲ ಅವರು ಆರೋಗ್ಯ ಸರಿ ಇಲ್ಲದೇ ೪ ದಿನ ದೇವಸ್ಥಾನಕ್ಕೆ ದೀಪ ಹಚ್ಚಲು ಹೋಗಲಿಲ್ಲಾ. ಬೇರೆ ಯಾರೂ ದೀಪಗಳಿಗೆ ಎಣ್ಣೆಯನ್ನು ಸಹ ಹಾಕಲಿಲ್ಲಾ. ಪೂಜಾರಿಯು ಆರೋಗ್ಯ ಸುಧಾರಿಸಿದ ನಂತರ ಗುಡಿಗೆ ಹೋದಾಗ ದೇವಿಯ ಮುಂದಿನ ದೀಪಗಳು ಉರಿಯುತ್ತಿರುವುದನ್ನು ಕಂಡು ಸ್ವತಃ ಪೂಜಾರಿಯೇ ಚಕಿತಗೊಂಡರು. ೪ ದಿನಗಳವರೆಗೆ ಎಣ್ಣೆ ಇಲ್ಲದಿದ್ದರೂ ದೀಪ ಉರಿಯುತ್ತಿದ್ದ ಈ ಆಶ್ಚರ್ಯಕರ ಘಟನೆಯನ್ನು ಹಲವಾರು ಬಾರಿ ನೆನಪಿಸಿಕೊಳ್ಳುತ್ತಿದ್ದರೆಂದು ಊರ ಪ್ರಮುಖರು ತಿಳಿಸಿದರು. ದೇವಿಯ ಮಹಿಮೆಯಿಂದ ಮಾತ್ರ ಇಂತಹ ಪವಾಡ ನಡೆದು ದೀಪ ಬೆಳಗಲು ಕಾರಣವೆಂದು ಜನ ಈಗಲೂ ಮಾತನಾಡುತ್ತಾರೆ. ಹೀಗೆ ಚಿಕ್ಕನಹಳ್ಳಿಯ ಸಾಂಸ್ಕೃತಿಯ ಸಂಪ್ರದಾಯದ ಜೊತೆಗೆ ಇಲ್ಲಿನ ಬೇಡರು ಆರ್ಥಿಕವಾಗಿ ರಾಜಕೀಯವಾಗಿ ಹಿಂದುಳಿದಿರುವುದು ದುರಾದೃಷ್ಟಕರ ಸಂಗತಿ. ಕೆಲವರು ಕೂಲಿ ಮಾಡಲೂ ಹೋದರೆ ಇನ್ನು ಕೆಲವರು ಬೆಂಗಳೂರ-ಮುಂಬಯಿಗಳಿಗೆ ವಲಸೆ ಹೋಗಿದ್ದಾರೆ. ಕೇವಲ ಬೆರಳಣಿಕೆಯಷ್ಟು ಜನರು ಮಾತ್ರ ಉತ್ತಮ ಸ್ಥಿತಿಯಲ್ಲಿದ್ದಾರೆ. ನೀರಾವರಿ ಸೌಕರ್ಯದಿಂದ ಭತ್ತವನ್ನು ಬೆಳೆದರೂ ಮಾರುಕಟ್ಟೆಯಲ್ಲಿ ಸೂಕ್ತ ಬೆಲೆ ಇಲ್ಲದ ಕಾರಣ ಆರ್ಥಿಕ ಸಂಕಷ್ಟವನ್ನು ಅನುಭವಿಸುತ್ತಾರೆ. ಇಲ್ಲಿ ಬೇಡರು ಇನ್ನೂ ಸಾಂಪ್ರದಾಯಿಕ ಆಚಾರ ವಿಚಾರ ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ.

**ಬೆಂಚ್‌ಗಡ್ಡಿ:** ಸುರಪುರ ತಾಲೂಕಿನ ಕಕ್ಕೇರಾ ಗ್ರಾಮದಿಂದ ಸುಮಾರು ೬ ಕಿ.ಮೀ. ಈ ಬೆಂಚಿಗಡ್ಡಿ ನದಿಯ ತೀರದಲ್ಲಿದೆ. ನೀಲಕಂಠರಾಯನ ಗಡ್ಡಿಯು ನದಿಯ ಒಂದು ತುದಿಯಲ್ಲಿದ್ದರೆ, ಕೃಷ್ಣ ನಡಿಯ ದಂಡೆಯ ಮೇಲೆ ಈ ಗ್ರಾಮ ಇದೆ. ಈ ಗ್ರಾಮದಲ್ಲಿಯೂ ಕೂಡಾ ಬೇಡರೇ ವಾಸವಾಗಿದ್ದಾರೆ. ಬಹುತೇಕ ಬೇಡರು ಬಡವರಾಗಿದ್ದು ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ತೀರಾ ಹಿಂದುಳಿದಿದ್ದಾರೆ. ಇವರಿಗೆ ಇದ್ದಂತಹ ಅಲ್ಪ ಸ್ವಲ್ಪ ಕೃಷಿ ಭೂಮಿಯನ್ನು ಸರ್ಕಾರ ಪವರ್ ಪ್ರೊಜೆಕ್ಟ್ (ವಿದ್ಯುತ್ ಉತ್ಪಾದನೆ) ಗಾಗಿ ಕಡಿಮೆ ಬೆಲೆ ಕೊಟ್ಟು ಕೊಂಡುಕೊಂಡಿದೆ. ಈ ಗ್ರಾಮದ ಸುತ್ತಮುತ್ತಲಿನ ಕೃಷಿ ಭೂಮಿಯ ಬೆಲೆ ಸುಮಾರು ೨-೩ ಲಕ್ಷ ಇದೆ. ಕೇವಲ ಎಕರೆಗೆ ೩೦-೪೦ ಸಾವಿರ ಕೊಟ್ಟು ರೈತರ ಹೊಟ್ಟೆಗೆ ತಣ್ಣೀರು ಬಟ್ಟೆ ಹಾಕಿದೆ. ಅಲ್ಲದೆ ಸುರಪುರ ನಗರದಿಂದ ಸುಮಾರು ೩೦ ಕಿ.ಮೀ. ದೂರ ಇರುವುದರಿಂದ ಶಾಲೆ ಮತ್ತು ಕಾಲೇಜು ಓದುವ ಯುವ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಇದೆ. ಅಂದರೆ ಈ ಗ್ರಾಮದಲ್ಲಿ ಅನಕ್ಷರತೆ ತಾಂಡವವಾಡುತ್ತಿದೆ. ಪಕ್ಕದ ನೀಲಕಂಠರಾಯನ ಗಡ್ಡಿ ಬೇಡ ಸಮುದಾಯದವರ ಜೊತೆ ವೈವಾಹಿಕ ಸಂಬಂಧವನ್ನು ಹೊಂದಿದ್ದಾರೆ. ಮತ್ತು ಪ್ರತಿ ಮಳೆಗಾಲದಲ್ಲಿ ಗ್ರಾಮ ಪ್ರವಾಹಕ್ಕೆ ಈಡಾಗುತ್ತಿದೆ. ಸರ್ಕಾರದ

ಗಮನಕ್ಕೆ ಬಾರದ ಈ ಗ್ರಾಮ ಕುಗ್ರಾಮವಾಗಿದೆ. ಇವರ ಮೂಲ ವೃತ್ತಿ ಬೇಟೆಯಾಡುವುದಾದರೂ ನದಿ ಪಕ್ಕದಲ್ಲಿರುವುದರಿಂದ ಮೀನಿನ ಬೇಟೆಯನ್ನು ನಿತ್ಯ ಆಡುತ್ತಲೇ ಇರುತ್ತಾರೆ. ಆದ್ದರಿಂದ ಸ್ಥಳೀಯ ಸರ್ಕಾರಗಳು ರಾಜ್ಯ ಸರ್ಕಾರ ಇಂತಹ ಅನೇಕ ಗ್ರಾಮಗಳನ್ನು ಗುರುತಿಸಿ ಪುನರ್ವಸತೀಕರಣ ಮಾಡುವ ಅವಶ್ಯಕತೆ ಇದೆ. ಇಲ್ಲಿನ ಜನರು ಮುಗ್ಧರಾಗಿರುವುದರಿಂದ ಸರ್ಕಾರದ ಸೌಲಭ್ಯಗಳು ಸಿಗದಂತಾಗಿದೆ. ತಮಗೆ ಇರುವ ಸೌಲಭ್ಯಗಳ ಬಗ್ಗೆಯೂ ಜ್ಞಾನವಿಲ್ಲದೆ ಮೂರು ಹೊತ್ತಿನ ಊಟಕ್ಕೂ ಪರದಾಡುವಂತಹ ಸಂಕಷ್ಟದಲ್ಲಿದ್ದಾರೆ.

**ನೀಲಕಂಠರಾಯನ ಗಡ್ಡಿ:**

ಈ ಗ್ರಾಮ ತನ್ನದೇ ಆದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಸುರಪುರದ ಸಂಸ್ಥಾನದ ಮೂಲ ಪುರುಷರು ಪ್ರಾರಂಭದಲ್ಲೆ ಇದೇ ಗ್ರಾಮದಲ್ಲಿಯೇ ಸಂಸ್ಥಾನವನ್ನು ಕಟ್ಟಿಕೊಂಡಿದ್ದರು ಎನ್ನುವ ಕುರುಹುಗಳು, ಐತಿಹ್ಯಗಳು ಇವೆ. ಇದು ಒಂದು ವಿಶಿಷ್ಟ ಪುಟ್ಟ ದ್ವೀಪ ಗ್ರಾಮ. ಸುತ್ತಲೂ ಕೃಷ್ಣಾ ನದಿಯ ನೀರು ಆವರಿಸಿದ್ದು ನಡುವೆ ಒಂದು ಗಡ್ಡೆ ಅಥವಾ ಬೆಟ್ಟವಿದೆ. ಆ ಬೆಟ್ಟದಲ್ಲಿ ಸುಮಾರು ೩೦ ರಿಂದ ೪೦ ಬೇಡ ಕುಟುಂಬಗಳ ಮನೆಗಳಿವೆ. ಆ ಬೆಟ್ಟದಲ್ಲಿ ತುಂಡು ಭೂಮಿಗಳನ್ನು ಸಾಗುವಳಿ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಮಳೆಗಾಲದಲ್ಲಿ ನದಿ ತುಂಬಿ ಹರಿದರೂ ಅಲ್ಲಿ ವಾಸಿಸುವ ಜನ ಗಡ್ಡೆಯನ್ನು ಬಿಟ್ಟು ಬರುವುದಿಲ್ಲ. ಕಾರಣ ಈ ಸ್ಥಳದಲ್ಲಿ ಐತಿಹಾಸಿಕವಾದ ಈಶ್ವರನ ಲಿಂಗವಿದೆ. ಈ ಈಶ್ವರ ಲಿಂಗವೇ ಈ ಗ್ರಾಮದ ದೇವರು. ಒಂದು ವೇಳೆ ಗಡ್ಡಿಯನ್ನು ಬಿಟ್ಟು ಬೇರೆಕಡೆ ಸ್ಥಳಾಂತರವಾದರೆ ಇವರಿಗೆ ನಾನಾ ಕಾರಣಗಳಿಂದ ತೊಂದರೆ ಕೊಟ್ಟು ಮೂಲ ಸ್ಥಾನದಿಂದ ಕದಲದಂತೆ ನೋಡಿಕೊಂಡಿದ್ದಾನೆ. ಹಾಗೂ ಎಷ್ಟೇ ಪ್ರವಾಹ ಬಂದರೂ ಗಡ್ಡಿ ಮುಳುಗಡೆ ಆಗದಂತೆ ಈ ಈಶ್ವರನು ನಮ್ಮನ್ನು ಕಾಪಾಡುತ್ತಾ ಬಂದಿದ್ದಾನೆ. ಆದ್ದರಿಂದ ನಾವು ಎಷ್ಟೇ ಸೌಲಭ್ಯಕೊಟ್ಟರೂ ನಾವು ಈ ನಡುಗಡೆಯನ್ನು ಬಿಟ್ಟು ಬರುವುದಿಲ್ಲ. ಸೌಲಭ್ಯಗಳೇನಿದ್ದರೂ ಇದೇ ಗಡ್ಡಿಗೆ ನೀಡಲಿ. ನಮಗೆ ನದಿಯನ್ನು ದಾಟಲು ಒಂದು ಸೇತುವೆಯನ್ನು ಮಾಡಿಕೊಡಲಿ ಎಂಬ ತಮ್ಮ ಸಂಕಷ್ಟಗಳನ್ನು ತೋಡಿಕೊಳ್ಳುತ್ತಾರೆ. ಅಶ್ಚರ್ಯ ವಿಷಯವೇನೆಂದರೆ ಎಷ್ಟೇ ನದಿ ಬಂದರೂ ದೇವರ ಮೇಲೆ ಭಾರ ಹಾಕಿ ಹೆಣ್ಣು, ಗಂಡು, ಮಕ್ಕಳೆನ್ನದೇ ಎಲ್ಲರೂ ಈಜಿಕೊಂಡು ನಗರ ಪ್ರದೇಶಕ್ಕೆ ಬರುತ್ತಾರೆ. ಅಲ್ಲಿ ವಾಸಿಸುವ ಜನರಿಗೆ ಮಳೆಗಾಲದಲ್ಲಿ ಸ್ಥಳೀಯ ಸರಕಾರ ಆಹಾರ ಧಾನ್ಯಗಳನ್ನು ಒದಗಿಸುತ್ತದೆ. '೨೦೦೯ ಮತ್ತು ೨೦೧೩ರ ಮಳೆಗಾಲದಲ್ಲಿ ನದಿ ತುಂಬಿ ಹರಿದು ಸುತ್ತಮುತ್ತಲ ಗ್ರಾಮಗಳು ಮುಳುಗಡೆಯಾದರೆ ಆ ಗಡ್ಡೆ ಮಾತ್ರ ಮುಳುಗಡೆ ಯಾಗಲಿಲ್ಲ. ಇದು ಎಲ್ಲರ

ಆಶ್ಚರ್ಯಕ್ಕೆ ಕಾರಣವಾಯಿತು. ನದಿ ಧುಮ್ಮಿಕ್ಕಿ ಹರಿದು ಪ್ರವಾಹ ಉಂಟಾದರೂ ಅಲ್ಲಿದ್ದ ಜನರು ಮಾತ್ರ ಎಲ್ಲಿಯೂ ಕದಲಲಿಲ್ಲ. ಇದು ಅವರ ಸ್ವಾಭಿಮಾನ ಧೈರ್ಯವನ್ನು ತೋರಿಸುತ್ತದೆ. ಈ ಗಡ್ಡಿಯಲ್ಲಿ ವಾಸಿಸುವ ಎಲ್ಲಾ ಜನರೂ ಬೇಡರಾಗಿದ್ದು, ಕಡುಬಡವರಾಗಿದ್ದಾರೆ. ಇವರಿಗೆ ವಿದ್ಯುತ್‌ನ ಸೌಕರ್ಯವಿಲ್ಲ. ಎಷ್ಟೇ ಕಷ್ಟ ಬಂದರೂ ಒಗ್ಗಟ್ಟಿನಿಂದ ಜೀವನ ಸಾಗಿಸುತ್ತಿದ್ದಾರೆ.'[೧೩]

**ಕೊಡೇಕಲ್ಲು ಗ್ರಾಮ:**

ಈ ಗ್ರಾಮವೂ ಕೂಡಾ ಇತಿಹಾಸ ಪೌರಾಣಿಕ ಪ್ರಸಿದ್ಧವಾದ ಗ್ರಾಮ. ೧೫ನೇ ಶತಮಾನದ ಕೊಡೇಕಲ್ಲ ಬಸವಣ್ಣ ಇಲ್ಲಿಯೇ ನೆಲೆಸಿದ್ದನು. ಇಂತಹ ಮಹಾನ್ ಪುರುಷ ವಾಸವಾಗಿದ್ದ ಗ್ರಾಮದಲ್ಲಿ ಬೇಡರು ಬಹು ಸಂಖ್ಯಾತರಾಗಿದ್ದಾರೆ. ಪ್ರಸ್ತುತ ದಿನಮಾನಗಳಲ್ಲಿ ಬೇಡರು ಎಲ್ಲಾ ರೀತಿಯಿಂದಲೂ ಸದೃಢರಾಗಿದ್ದಾರೆ. ಇಲ್ಲಿನ ಬೇಡ ಜನಾಂಗದವರಿಗೆ ಕೃಷಿ ಭೂಮಿಗಳು ಸಾಕಷ್ಟು ಇದ್ದು, ಒಕ್ಕಲುತನ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಈಗಿನ ಸಣ್ಣ ಕೈಗಾರಿಕಾ ಸಚಿವರಾದ ಶ್ರೀ ನರಸಿಂಹನಾಯಕರವರು ಈ ಗ್ರಾಮದವರು. ಇಲ್ಲಿನ ಬೇಡರಿಗೆ ಜಾಗಿರದಾರ, ಗೌಡರು, ಜಮೀನುದಾರರು ಎಂಬ ಪರ್ಯಾಯ ಹೆಸರುಗಳಿಂದ ಕರೆಯುತ್ತಾರೆ.

**ವಾಗಿನಗೇರಿ ಗ್ರಾಮ:**

'ಸಗರನಾಡಿನ ಬೇಡ ದೊರೆಗಳು ಸುರಪುರ ಸಂಸ್ಥಾನವನ್ನು ಸ್ಥಾಪನೆ ಮಾಡುವುದಕ್ಕಿಂತಲೂ ಮೊದಲೇ ವಾಗನಗೇರಿ ಗ್ರಾಮದಲ್ಲಿ ಸಂಸ್ಥಾನವನ್ನು ಸ್ಥಾಪಿಸಿದರು. ಈಗಲೂ ಕೂಡಾ ಆ ಗ್ರಾಮದಲ್ಲಿ ಶಾಸನಗಳು, ದೇವಸ್ಥಾನಗಳು, ಕೋಟೆಗಳು, ಹಳೆಯ ಮನೆಗಳು ಕಾಣಸಿಗುತ್ತವೆ. ಸುರಪುರದ ಬೇಡ ದೊರೆಗಳು ಮದ್ದುಗುಂಡು, ತೋಪು ಮುಂತಾದವುಗಳನ್ನು ಸಂಗ್ರಹಿಸಿಡಲು ವಾಗಿನಗೇರಿ ಗ್ರಾಮದಲ್ಲಿ ಬೃಹತ್ ಪ್ರಮಾಣದ ಕೋಟೆ ಕಿಲ್ಲೆಗಳನ್ನು ನಿರ್ಮಿಸಿದ್ದರು.'[೧೪] ಅಲ್ಲದೇ ಈ ಗ್ರಾಮದಿಂದ ಸುರಪುರದತನಕ ಸುರಂಗ ಮಾರ್ಗವಿದೆ. ಇದು ಸರಿ ಸುಮಾರು ೫ ರಿಂದ ೮ ಕಿ.ಮೀ.ವರೆಗೆ ಇದೆ. ಪ್ರಸ್ತುತ ಈ ಗ್ರಾಮದಲ್ಲಿ ಬೇಡರು ಸ್ವಲ್ಪ ಮಟ್ಟಿಗೆ ಆರ್ಥಿಕವಾಗಿ ಚೇತರಿಸಿಕೊಂಡಿದ್ದಾರೆ. ಬೇಸಾಯ ಮಾಡುವುದರ ಜೊತೆಗೆ ಗುತ್ತಿಗೆ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಾರೆ.

**ಮಲ್ಲಿಬಾಯಿ ಗ್ರಾಮ:**

'ಹಿಂದೆ ವಾಗಿನಗೇರಿಯಲ್ಲಿ ಪಿತ್ರಾರ್ಜಿತ ಆಸ್ತಿಯ ಸಲುವಾಗಿ ಪಿಡ್ಡನಾಯಕನಿಗೂ ಲಿಂಗನಾಯಕನಿಗೂ ನಡುವೆ ತಲೆದೋರಿದ್ದ ಹಗೆತನವು ಏಳು ವರ್ಷಗಳ ನಂತರ ಇಬ್ಬರ ನಡುವೆ ಮಲ್ಲಿಬಾಯಿ ಕಾಳಗದಿಂದ ಕೊನೆಗೊಂಡಿದ್ದು, ಇವರಿಬ್ಬರ ಅಕ್ಕತಂಗಿಯರಾದ

ಕರಿಗುಡ್ಡದ ಯಂಕಮ್ಮ ಮತ್ತು ಎರಡಗಲ್ಲಿನ ಯಲ್ಲವ್ವ ಇವರ ಮಧ್ಯಸ್ಥಿಕೆಯಿಂದ ಈ ಸಮಸ್ಯೆಯು ಬಗೆಹರಿಯಿತೆಂದು ಕೈಪಿಯತ್ತಿನಲ್ಲಿ ತಿಳಿಸಲಾಗಿದೆ.'[೧೫] ಆದ್ದರಿಂದ ಮಲ್ಲಿಬಾಯಿ ಗ್ರಾಮ ಪ್ರಮುಖ ವಾದದ್ದು ಎಂದು ಹೇಳಬಹುದು. ಪ್ರಸ್ತುತ ಈ ಗ್ರಾಮಕ್ಕೆ ೦೫ ವರ್ಷದ ಹಿಂದೆ ವಿದ್ಯುತ್ತಿನ ಸೌಕರ್ಯವಿರಲಿಲ್ಲ. ಇದು ಒಂದು ಕುಗ್ರಾಮ ಎಂದು ಹೇಳಿದರೆ ತಪ್ಪಾಗಲಾರದು. ಈ ಗ್ರಾಮದಲ್ಲಿ ವಾಸಿಸುವ ಬಹುಸಂಖ್ಯಾತರು ಬೇಡರೇ ಆಗಿದ್ದು ಕಡು ಬಡವರಾಗಿದ್ದಾರೆ. ಇಲ್ಲಿನ ಗ್ರಾಮಕ್ಕೆ ನೀರಾವರಿ ಸೌಕರ್ಯ ಇಲ್ಲದ್ದರಿಂದ ಆರ್ಥಿಕವಾಗಿ ಹಿಂದೆ ಉಳಿದಿದ್ದಾರೆ. ಇತ್ತೀಚಿನ ದಿನಮಾನಗಳಲ್ಲಿ ಬೇಡ ನಾಯಕರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುತ್ತಿದ್ದಾರೆ.

**ಕಕ್ಕೇರಿ ಗ್ರಾಮ:**

'ಸುರಪುರ ಬೇಡ ದೊರೆಗಳ ಕೆಲವು ಕುರುಹುಗಳು ಈ ಕಕ್ಕೇರಿಯಲ್ಲಿಯೂ ಕಾಣಬಹುದು. ಗಡ್ಡಿ ಪಿಡ್ಡನಾಯಕನು ಇದೇ ಗ್ರಾಮದಲ್ಲಿ ಕೆಲವು ವರ್ಷಗಳ ಆಳ್ವಿಕೆ ನಡೆಸಿದ್ದನು ಎಂಬುದನ್ನು ಇತಿಹಾಸ ಹೇಳುತ್ತದೆ.'[೧೬] ಆದ್ದರಿಂದ ಈ ಗ್ರಾಮದಲ್ಲಿ ಬೇಡ ಜನಾಂಗದವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಗ್ರಾಮಕ್ಕೆ ಹೊಂದಿಕೊಂಡಿರುವ ದೇವರಗಡ್ಡಿ, ಜಂಗಿನಗಡ್ಡಿ, ತೊಲಿಗೆಗಡ್ಡಿಗಳಲ್ಲಿ ಬೇಡರು ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಕೆಲವು ಬೇಡರು ತಮ್ಮ ತಮ್ಮ ಕೃಷಿ ಭೂಮಿಗಳಲ್ಲಿ ವಾಸವಾಗಿದ್ದಾರೆ. ಅಲ್ಲದೇ ಕೆಲವು ಶ್ರೀಮಂತ ಬೇಡ ನಾಯಕರು ಪೆಟ್ರೋಲ್ ಬಂಕ್‌ನ್ನು ನಡೆಸುತ್ತಿದ್ದಾರೆ. ಅಲ್ಲದೇ ದ್ವಿಚಕ್ರ ವಾಹನಗಳ ಷೋರೂಮ್ (ಆಟೋಮೊಬೈಲ್ಸ್) ನಡೆಸುತ್ತಿದ್ದಾರೆ. ಸೀತಾರಾಮನಾಯಕ ಮತ್ತು ರಾಜು ಹವಾಲ್ದಾರ ಗ್ರಾಮದ ಮುಖಂಡತ್ವವನ್ನು ವಹಿಸಿಕೊಂಡಿದ್ದಾರೆ. ರಾಜು ಹವಾಲ್ದಾರವರು ತಾಲೂಕ ಪಂಚಾಯತಿಯ ಸದಸ್ಯರಾಗಿದ್ದಾರೆ.

**ತಿಂಥಣಿ ಗ್ರಾಮ:** ಸಗರನಾಡಿನ ಸುರಪುರದ ಐತಿಹಾಸಿಕ ಸ್ಥಳ ತಿಂಥಣಿ ಗ್ರಾಮ "ದಕ್ಷಿಣ ಕಾಶಿ" ಎಂದು ಹೆಸರುವಾಸಿಯಾಗಿದೆ. ಭೌಗೋಳಿಕವಾಗಿ, ಕಿರಿದಾದ ಬೆಟ್ಟಗಳನ್ನು ಹೊಂದಿದ್ದು, ಇಲ್ಲಿನ ಜೀವ ನದಿಯಾಗಿ ಕೃಷ್ಣೆ ಹರಿಯುತ್ತಾಳೆ. ಕೃಷ್ಣಾ ನದಿಯ ದಡದಲ್ಲಿ ಪವಿತ್ರ ಮಾನಪ್ಪಯ್ಯನ ದೇವಸ್ಥಾನವಿದೆ. ಈ ಗ್ರಾಮದ ಆರಾಧ್ಯದೈವ ಮಾನಪ್ಪಯ್ಯ (ಮೌನೇಶ್ವರ) ಎಂದರೆ ಅತಿಶಯೋಕ್ತಿಯಾಗಲಾರದು. ಇಲ್ಲಿ ವಾಸಿಸುವ ಪ್ರತಿಯೊಬ್ಬ ವ್ಯಕ್ತಿ ಈ ದೇವರ ಭಕ್ತರಾಗಿದ್ದರೆ ಈ ಗ್ರಾಮದಲ್ಲಿ ಬೇಡರು ಹೆಚ್ಚಿನ ಸಂಖ್ಯೆಯಲ್ಲಿದ್ದು ಪ್ರಾಬಲ್ಯವನ್ನು ಹೊಂದಿದ್ದಾರೆ. ಶೇ. ೫೦% ರಷ್ಟು ಜನ ಬಡವರಾಗಿದ್ದಾರೆ. ಇನ್ನುಳಿದವರು ಮಧ್ಯಮವರ್ಗದವರಾಗಿದ್ದಾರೆ. ಅಲ್ಪ ಸ್ವಲ್ಪ ಕೃಷಿ ಭೂಮಿಯನ್ನು ಹೊಂದಿ ವ್ಯವಸಾಯವನ್ನು ಮಾಡುತ್ತಾರೆ. ಕೆಲವು ಜನ ಬೇಡರು ಭೂ ರಹಿತ ಕೂಲಿ ಕಾರ್ಮಿಕರಾಗಿ ದುಡಿಯುತ್ತಾರೆ. ವನವಾಸಿ ಕಲ್ಯಾಣ ಸಂಸ್ಥೆ ಇವರ ಅಭಿವೃದ್ಧಿಗಾಗಿ ನಿರಂತರವಾಗಿ ಕಾರ್ಯಚಟುವಟಿಕೆಗಳನ್ನು

ಮಾಡುತ್ತಿದೆ. ಇಲ್ಲಿನ ಕೆಲವು ಮಹಿಳೆಯರು ಈ ಸಂಸ್ಥೆಯಿಂದ ಹೊಲಿಗೆ ಯಂತ್ರವನ್ನು ಪಡೆದಿದ್ದಾರೆ. ಅಲ್ಲದೆ ಅನಕ್ಷರಸ್ಥರಿಗೆ ರಾತ್ರಿ ಶಾಲೆಯನ್ನು ನಡೆಸುತ್ತದೆ. ಈ ಗ್ರಾಮದ ಯುವಕ ಅಯ್ಯಪ್ಪ ಎಂಬುವವನಿಗೆ ಉನ್ನತ ಶಿಕ್ಷಣಕ್ಕಾಗಿ ಅಲಹಾಬಾದಿಗೆ ಕಳುಹಿಸಿಕೊಟ್ಟಿದ್ದಾರೆ. ಪ್ರಸ್ತುತ ದಿನಮಾನಗಳಲ್ಲಿ ಸರಕಾರಿ ಸೌಲಭ್ಯಗಳನ್ನು ಉಪಯೋಗಿಸಿಕೊಂಡು ಸಾಮಾಜಿಕವಾಗಿ, ಆರ್ಥಿಕವಾಗಿ ಸುಧಾರಣೆಗೊಳ್ಳುತ್ತಿದ್ದಾರೆ.

**ಬಂಡೊಳ್ಳಿ ಗ್ರಾಮ:**

ತಿಂಥಣಿ ಗ್ರಾಮದ ಸಮೀಪವಿರುವ ಈ ಪುಟ್ಟ ಗ್ರಾಮ ಕೃಷ್ಣಾ ನದಿ ತೀರದಲ್ಲಿದೆ. ಇಲ್ಲಿ ವಾಸಿಸುವ ಬಹುತೇಕರು ಅಂದರೆ ಶೇ.೮೦% ರಷ್ಟು ಜನ ಬೇಡರೇ ಆಗಿದ್ದಾರೆ. ಕಡು ಬಡತನದಿಂದ ಬಳಲುತ್ತಿದ್ದಾರೆ. ೨೦೦೮ರಲ್ಲಿ ಪ್ರಕೃತಿ ವಿಕೋಪದಿಂದ ನದಿ ಪ್ರವಾಹವಾದಾಗ ಈ ಗ್ರಾಮ ಸಂಪೂರ್ಣ ಮುಳುಗಿ ಹೋಗಿತ್ತು. ಆಗ ಸರಕಾರ ನದಿಯ ದಡದಲ್ಲಿ ಪುನರ್ವಸತಿ ಕಲ್ಪಿಸಿಕೊಟ್ಟಿದೆ. ಇವರು ದಿನನಿತ್ಯ ಜೀವನೋಪಾಯಕ್ಕಾಗಿ ಬೇರೆಯವರ ಹೊಲಗದ್ದೆಗಳಲ್ಲಿ ಕೂಲಿ ಮಾಡಲು ಹೋಗುತ್ತಾರೆ. ಸರಕಾರದ ವಸತಿ ಸೌಲಭ್ಯವನ್ನು ಪಡೆದಿರುವ ಈ ಗ್ರಾಮದ ಬೇಡರು ಆಧುನಿಕ ಲೌಕಿಕ ಜೀವನಕ್ಕೆ ಹೊಂದಿಕೊಂಡಿದ್ದಾರೆ.

**ಮುದನೂರು ಗ್ರಾಮ:**

ಸುರಪುರ ಪಟ್ಟಣದಿಂದ ೪೦ ಕಿ.ಮೀ. ದೂರವಿರುವ ಈ ಗ್ರಾಮ ಪೌರಾಣಿಕ ಹಿನ್ನೆಲೆಯನ್ನು ಹೊಂದಿದೆ. '೧೧ನೇ ಶತಮಾನದ ಮಹಾಶಿವಶರಣರಲ್ಲಿ ಒಬ್ಬರಾದ ಜೇಡರ ದಾಸಿಮಯ್ಯನವರು ಇದೆ ಗ್ರಾಮದವರು ಎಂದು ಹೇಳುವುದಕ್ಕೆ ಹೆಮ್ಮೆಯಾಗುತ್ತದೆ. ದಾಸಿಮಯ್ಯ ನವರ ವಚನಗಳನ್ನು ಪ್ರತಿಯೊಬ್ಬ ಮಾನವನು ತನ್ನ ಹೃದಯದಲ್ಲಿ ಎಂದೂ ಮರೆಯದೇ ಇಟ್ಟುಕೊಳ್ಳಬೇಕಾಗುತ್ತದೆ. ದೇವನ ದಾನ ಆತನ ಪ್ರಸಾದವನ್ನು ಉಂಡು ಎಲ್ಲಾ ವಿಶ್ವ ಎಲ್ಲಾ ಮಾನವ ಕೋಟಿ ಬದುಕಬೇಕೆಂಬುದೇ ದಾಸಿಮಯ್ಯನವರು ಹೇಳುವ ಜೀವಂತ ಜೀವನದ ಪರಮ ರಹಸ್ಯ.'[೧೧೨] ಇಂತಹ ದೇವರು ದಾಸಿಮಯ್ಯನವರು ಹುಟ್ಟಿದ ಈ ಗ್ರಾಮದಲ್ಲಿ ಬೇಡರು ಶೇ. ೫೦% ರಷ್ಟು ಜನಸಂಖ್ಯೆ ಇದೆ. ಬೇಡರು ಕೂಡಾ ದೇವರ ದಾಸಿಮಯ್ಯನವರ ಪರಮ ಭಕ್ತರು. ಬಹುತೇಕ ಕುಟುಂಬಗಳು ಬಡತನದಿಂದ ಬಳಲುತ್ತಿದ್ದು, ತಮ್ಮ ಉಪಜೀವನಕ್ಕಾಗಿ ಕೃಷಿಯನ್ನೇ ಅವಲಂಬಿಸಿದ್ದಾರೆ. ಕೆಲವು ಬೇಡರಿಗೆ ೫-೧೦ ಎಕರೆ ಕೃಷಿ ಭೂಮಿ ಇದ್ದು, ಹತ್ತಿ ತೊಗರಿ ಬೇಳೆಯನ್ನು ಹೆಚ್ಚಾಗಿ ಬೆಳೆಯುತ್ತಾರೆ. ಪ್ರಸ್ತುತ ದಿನಮಾನಗಳಲ್ಲಿ ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸುತ್ತಿದ್ದು, ಕೆಲವರು ಸರ್ಕಾರಿ ನೌಕರಿಯನ್ನು ಮಾಡುತ್ತಿದ್ದಾರೆ.

**ಹುಣಸಗಿ ಪಟ್ಟಣ:**

ಸುರಪುರ ತಾಲೂಕಿನ ವ್ಯಾಪ್ತಿಗೆ ಒಳಪಟ್ಟಿರುವ ಈ ಹುಣಸಗಿ ಪಟ್ಟಣ ಸುಮಾರು ೨೦ ಸಾವಿರ ಜನಸಂಖ್ಯೆಯನ್ನು ಹೊಂದಿದೆ. ಈ ಪಟ್ಟಣದಲ್ಲಿ ಎಲ್ಲಾ ಜಾತಿ ಜನಾಂಗ

ಸಮುದಾಯದವರು ವಾಸವಾಗಿದ್ದಾರೆ. ಲಿಂಗಾಯತ, ಬೇಡರ ಪ್ರಭಾವ ಹೆಚ್ಚಾಗಿರುವುದರಿಂದ ನಿರಂತರವಾಗಿ ರಾಜಕೀಯದಲ್ಲಿ ಇವೆರಡೂ ಜಾತಿಗಳ ನಡುವೆ ಸ್ಪರ್ಧೆ ನಡೆಯುತ್ತಲೇ ಇರುತ್ತದೆ. ನೀರಾವರಿ ಸೌಲಭ್ಯವನ್ನು ಹೊಂದಿರುವ ಈ ಪಟ್ಟಣದಲ್ಲಿ ಬೇಡರು ಆರ್ಥಿಕವಾಗಿ ಚೇತರಿಸಿಕೊಂಡಿದ್ದಾರೆ. ಬೆರಳಣಿಕೆಯಷ್ಟು ಬೇಡರು ಮಾತ್ರ ಬಡವರಾಗಿದ್ದಾರೆ. ಬಟ್ಟೆ ಅಂಗಡಿ, ಕಿರಾಣಿ ಅಂಗಡಿ, ಗೊಬ್ಬರದ ಅಂಗಡಿಗಳನ್ನು ಇಟ್ಟುಕೊಂಡು ತಮ್ಮ ಜೀವನವನ್ನು ಸಾಗಿಸುತಿದ್ದಾರೆ. ಇನ್ನೂ ಕೆಲವರು ಸರ್ಕಾರಿ ಉದ್ಯೋಗದಲ್ಲಿದ್ದಾರೆ. ಈ ಪಟ್ಟಣದಲ್ಲಿ ಶಾಲಾ ಕಾಲೇಜು ಗಳಿರುವುದರಿಂದ ತಮ್ಮ ಮಕ್ಕಳಿಗೆ ಹೆಚ್ಚಿನ ಶಿಕ್ಷಣವನ್ನು ಕೊಡಿಸುತ್ತಿದ್ದಾರೆ. ಸುರಪುರದ ವಿಧಾನಸಭೆ ಚುನಾವಣೆಯಲ್ಲಿ ಈ ಪಟ್ಟಣ ಪ್ರಮುಖ ನಿರ್ಣಾಯಕ ಪಾತ್ರವಹಿಸುತ್ತದೆ.

**ದೇವಾಪುರ ಗ್ರಾಮ:**

'ಜೈಮಿನಿ ಭಾರತ ಕರ್ನಾಟಕ ಕವಿಚೂತವನ ಚೈತ್ರನೆಂದು ಬಿರುದಾಂಕಿತನಾದ ಕವಿ ಲಕ್ಷ್ಮೀಶನ ಜನ್ಮಸ್ಥಾನವೇ ಈ ದೇವಾಪೂರ ಗ್ರಾಮ ಎಂದು ಹೇಳಲು ಹೆಮ್ಮೆಯಾಗುತ್ತದೆ.'[೧೫] ಪ್ರಸ್ತುತ ಈ ಗ್ರಾಮದಲ್ಲಿ ೩೫೦೦ ಜನಸಂಖ್ಯೆಯಿದ್ದು, ಬೇಡರ ಜನಸಂಖ್ಯೆ ೧ ಸಾವಿರವಿದೆ. ಬಹುತೇಕ ಬೇಡರು ಕಡು ಬಡವರಾಗಿದ್ದು, ಮೂಲಭೂತ ಸೌಕರ್ಯದಿಂದ ವಂಚಿತರಾಗಿದ್ದಾರೆ. ಕೃಷ್ಣಾ ನದಿ ಪಕ್ಕದಲ್ಲಿದ್ದರೂ ಸಂಪೂರ್ಣ ನೀರಾವರಿಯಿಂದ ಆವೃತ್ತವಾಗಿರುವುದಿಲ್ಲ. ಕೆಲವು ಕೃಷಿ ಭೂಮಿಗಳಿಗೆ ನೀರಾವರಿ ಸೌಕರ್ಯಗಳಿವೆ. ಜನರು ಟೀನ್ ಮನೆಗಳಲ್ಲಿ ಗುಡಿಸಲುಗಳಲ್ಲಿ ಇನ್ನೂ ಸಹ ವಾಸವಾಗಿದ್ದಾರೆ. ಇವರು ವಾಸಿಸುವ ಪ್ರದೇಶ ಸಂಪೂರ್ಣ ಕೊಳಚೆಯಿಂದ ಕೂಡಿದೆ. ಅನಕ್ಷರತೆಯು ತಾಂಡವಾಡುತ್ತಿದೆ. ವಿಶೇಷವೆಂದರೆ ಅಮರಮ್ಮ ಗಂ/ ಬಸವರಾಜ ಕವಲಿ ಇವರು ಬೇಡರಾಗಿದ್ದು ತಾಲೂಕ ಪಂಚಾಯಿತ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಇವರು ಆರ್ಥಿಕವಾಗಿ ಸದೃಢರಾಗಿದ್ದು, ಪ್ರಸ್ತುತ ತಮ್ಮ ಅವಧಿಯಲ್ಲಿ ಜನರಿಗೆ ಸರ್ಕಾರಿ ಸೌಲಭ್ಯಗಳನ್ನು ಒದಗಿಸಿದ್ದಾರೆ. ಆದರೂ ಜನರ ನಿರ್ಲಕ್ಷ್ಯತೆಯಿಂದ ಈ ಗ್ರಾಮ ಎಲ್ಲಾ ರೀತಿಯಿಂದಲೂ ಹಿಂದುಳಿದಿದೆ.

**ಬೆನಕನಹಳ್ಳಿ ಗ್ರಾಮ:**

ಸುರಪುರ ಪಟ್ಟಣದಿಂದ ೧೫ ಕಿ.ಮೀ. ದೂರವಿರುವ ಈ ಗ್ರಾಮ ನೀರಾವರಿ ಸೌಲಭ್ಯವನ್ನು ಹೊಂದಿದೆ. ಈ ಗ್ರಾಮದ ಒಟ್ಟು ಜನಸಂಖ್ಯೆ ೧೩೦೦ ಇದ್ದು, ಬೇಡರ ಜನಸಂಖ್ಯೆ ೪೦೦ ಇದೆ. ಬೆಟ್ಟ ಗುಡ್ಡ ಫಲವತ್ತಾದ ಕೃಷಿ ಭೂಮಿಯನ್ನು ಹೊಂದಿರುವ ಈ ಗ್ರಾಮ ದುರದೃಷ್ಟವಶಾತ್ ಆರ್ಥಿಕವಾಗಿ ಹಿಂದುಳಿದಿದ್ದಾರೆ. ಕಚಕನೂರು ಗ್ರಾಮ ಪಂಚಾಯತಿ ವ್ಯಾಪ್ತಿಗೆ ಒಳಪಟ್ಟ ಈ ಗ್ರಾಮದಲ್ಲಿ ೨-೩ ಸಲ ಬೇಡರೇ ಗ್ರಾಮಪಂಚಾಯತಿಯ ಅಧ್ಯಕ್ಷ ಉಪಾಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ಆದರೂ ಕೂಡಾ ಇಲ್ಲಿನ ಬೇಡರಿಗೆ ರಾಜಕೀಯ

ನಿರಾಸಕ್ತಿ ಇದೆ. ಇಲ್ಲಿನ ಬಹುತೇಕ ಬೇಡರ ಮನೆ ದೇವರು ವೆಂಕಟರಮಣ, ಪರಮಾನಂದ ಸ್ವಾಮಿಯಾಗಿದ್ದು, ಈ ಗ್ರಾಮ ಬೆಟ್ಟದಲ್ಲಿ ಪರಮಾನಂದನ ದೇವಸ್ಥಾನ ಸುಂದರವಾಗಿದೆ.

**ಸಿದ್ದಾಪುರ (ಬಿ) ಗ್ರಾಮ:**

ಸುರಪುರ ತಾಲೂಕಿನ ಬೇಡರು ಹೆಚ್ಚಾಗಿ ವಾಸಿಸುವ ಪ್ರಮುಖ ಗ್ರಾಮಗಳಲ್ಲಿ ಸಿದ್ದಾಪೂರ ಬಿ ಗ್ರಾಮ ಪ್ರಮುಖವಾಗಿದ್ದು, ಊರಿನ ಒಟ್ಟು ಜನಸಂಖ್ಯೆ ೧೪೦೦ ಆಗಿದ್ದು, ಇದರಲ್ಲಿ ಬೇಡರ ಜನಸಂಖ್ಯೆ ೧ ಸಾವಿರ ಇದೆ. ಒಂದು ರೀತಿಯಲ್ಲಿ ಬೇಡರ ಗೂಡು ಎಂದು ಕರೆದರೆ ತಪ್ಪಾಗಲಾರದು. ಈ ಗ್ರಾಮ ಬೇಡರ ನಿಯಂತ್ರಣದಲ್ಲಿದ್ದರೂ ಗ್ರಾಮದಲ್ಲಿ ಇವರ ನಡುವೆ ಒಗ್ಗಟ್ಟಿನ ಕೊರತೆ ಇದೆ. ತಮ್ಮ ತಮ್ಮಲ್ಲಿ ದ್ವೇಷ, ಅಸೂಯೆ ಸಂಘರ್ಷವಿದೆ. ಕಡುಬಡತನ ಇಲ್ಲಿ ತಾಂಡವವಾಡುತ್ತಿದೆ. ಮೂಲಭೂತ ಸೌಕರ್ಯಗಳಾದ ವಸತಿ ವಿದ್ಯುತ್ ಶಿಕ್ಷಣದ ಕೊರತೆ ಇದೆ. ಈ ಗ್ರಾಮದಲ್ಲಿ ವಾಸಿಸುವ ಕೆಲವು ಬೇಡ ಜನಾಂಗದ ವಿದ್ಯಾರ್ಥಿಗಳು ತಮ್ಮ ಹೆಚ್ಚಿನ ಶಿಕ್ಷಣಕ್ಕಾಗಿ ೦೪ ಕಿ.ಮೀ. ಬೆನಕನಹಳ್ಳಿಗೆ ನಡೆದುಕೊಂಡು ಬಂದು ಸುರಪುರ ಹುಣಸಗಿ ಪಟ್ಟಣಕ್ಕೆ ಬರಬೇಕು. ಇನ್ನೂ ಸಹ ಜಂತಿ ಟೀನ್ ಮನೆಗಳಲ್ಲಿ ವಾಸವಾಗಿದ್ದಾರೆ. ಸರ್ಕಾರಿ ಸೌಲಭ್ಯವನ್ನು ಪಡೆಯುವಲ್ಲಿಯೂ ವಂಚಿತರಾಗಿದ್ದಾರೆ.

**ದೇವತ್ಕಲ್ ಗ್ರಾಮ:**

ಸುರಪುರ ಪಟ್ಟಣದಿಂದ ೨೦ ಕಿ.ಮೀ. ದೂರವಿರುವ ಈ ಗ್ರಾಮ ಫಲವತ್ತಾದ ಕೃಷಿ ಭೂಮಿಗಳನ್ನು ಒಳಗೊಂಡಿದೆ. ಈ ಗ್ರಾಮದಲ್ಲಿ ಎಲ್ಲಾ ಜಾತಿ ಜನಾಂಗದವರ ಜೊತೆ ಬೇಡರು ವಾಸವಾಗಿದ್ದು ಅನ್ಯೋನ್ಯತೆಯಿಂದ ಜೀವನ ಸಾಗಿಸುತ್ತಿದ್ದಾರೆ. ಈ ಗ್ರಾಮದ ಸುತ್ತ ಬೇಡರು ಚದುರಿ ಹೋಗಿದ್ದು, ತಮ್ಮ ತಮ್ಮ ಹೊಲ ಗದ್ದೆಗಳಲ್ಲಿ ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ. ತಮ್ಮ ಜೀವನೋಪಾಯಕ್ಕಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಇಲ್ಲಿನ ಬೇಡರು ಬಡವರಾಗಿದ್ದಾರೆ. ಪ್ರತಿಯೊಂದು ಕುಟುಂಬಕ್ಕೆ ಒಂದರಿಂದ ೫ ಎಕರೆ ಕೃಷಿ ಭೂಮಿ ಇದೆ. ಮಳೆಗಾಲದಲ್ಲಿ ವ್ಯವಸಾಯವನ್ನು ಮಾಡಿಕೊಂಡು ಬೇಸಿಗೆಯಲ್ಲಿ ಬೆಂಗಳೂರು, ಪುನಾ, ಬಾಂಬೆ ಮಹಾನಗರಗಳಿಗೆ ದುಡಿಯಲು ವಲಸೆ ಹೋಗುತ್ತಾರೆ. ಈ ಗ್ರಾಮದ ಶತಾಯುಷಿ ಮೌನಶೆಪ್ಪ ಮಾಸ್ತರ್ ಗ್ರಾಮದ ಹಿಂದಿನ ಮತ್ತು ಇಂದಿನ ಸ್ಥಿತಿಗತಿಗಳನ್ನು ಎಳೆ ಎಳೆಯಾಗಿ ಬಿಚ್ಚಿಟ್ಟು ತಮ್ಮ ಮನದಾಳದ ಮಾತುಗಳನ್ನು ಹೇಳುತ್ತಾರೆ.

**ಶಹಾಪೂರ ತಾಲೂಕಿನ ಬೇಡ ಸಮುದಾಯ:**

**ಶಹಾಪೂರ ಪಟ್ಟಣ:**

"ವಿಸ್ತೀರ್ಣ (ಚ. ಕಿ.ಮೀ.) : ೧೬೯೪ ಚ.ಕಿ.ಮೀ.

ತಾ. ಒಟ್ಟು ಜನಸಂಖ್ಯೆ : ೨,೯೩,೫೧೮

| | | |
|---|---|---|
| ಪುರುಷರು | : | ೧,೪೮,೩೯೯ |
| ಸ್ತ್ರೀಯರು | : | ೧,೪೫,೧೯೯ |
| ನಗರ | : | ೪೩,೬೯೯ |
| ಗ್ರಾಮೀಣ ಪ್ರದೇಶ | : | ೨,೪೯,೧೯೯ |
| ಬೇಡರು ಜನಸಂಖ್ಯೆ | : | ೯.೦೧"೯ |

ಈಗಿನ ಶಹಾಪುರಕ್ಕೆ ಪೌರಾಣಿಕ ಕಾಲದಲ್ಲಿ ಸಗರ ಎಂದು ಕರೆಯುತ್ತಿದ್ದರು. ಮೊಘಲರ ಆಳ್ವಿಕೆಯಲ್ಲಿ ಸಗರ ಶಹಾಪುರವಾಗಿ ಬದಲಾವಣೆಯನ್ನು ಹೊಂದಿತು. ಇಂದಿಗೂ ಶಹಾಪುರದಲ್ಲಿ ಹಳೆಯ ಸಗರ ಎಂಬ ಓಣಿ ಇದೆ. ಇಲ್ಲಿನ ಹಳೆಸಗರದಲ್ಲಿ ಬೇಡರು ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದು, ಸ್ವಲ್ಪಮಟ್ಟಿಗೆ ಆರ್ಥಿಕವಾಗಿ ಚೇತರಿಸಿಕೊಂಡಿದ್ದಾರೆ. ಕೆಲವರು ಸರ್ಕಾರಿ ನೌಕರಿಯಲ್ಲಿ ಇನ್ನೂ ಕೆಲವು ಜನ ವ್ಯಾಪಾರಸ್ಥರಾಗಿ ಹಾಗೂ ಮಾರುಕಟ್ಟೆಯಲ್ಲಿ ಹಣ್ಣು ಹಂಪಲು ಮಾರಾಟ ಮಾಡುವವರಾಗಿದ್ದಾರೆ. ಆದರೆ ಸುರಪುರದ ಬೇಡರಿಗೆ ಇರುವ ಪ್ರಾಮುಖ್ಯತೆ ಶಹಾಪುರದ ಬೇಡರಿಗೆ ಇಲ್ಲ. ಸುರಪುರದಲ್ಲಿ ಬೇಡ ಜನಾಂಗದವರೇ ರಾಜಕೀಯ ನಾಯಕರಾದರೆ ಶಹಾಪುರದಲ್ಲಿ ಲಿಂಗಾಯತ ಜನಾಂಗವು ರಾಜಕೀಯ ಚುಕ್ಕಾಣಿಯನ್ನು ಹಿಡಿದಿದೆ. ಆದ್ದರಿಂದ ರಾಜಕೀಯವಾಗಿ ಇವರು ತುಳಿತಕ್ಕೆ ಒಳಗಾಗಿದ್ದಾರೆ.

**ದೊಡ್ಡ ಸಗರಗ್ರಾಮ:** ಈ ಗ್ರಾಮ ಸುರಪುರ ಮತ್ತು ಶಹಾಪುರದ ಮಧ್ಯದಲ್ಲಿದೆ. ಸಗರ ಗ್ರಾಮ ಶಹಾಪುರ ತಾಲೂಕಿನ ವ್ಯಾಪ್ತಿಗೆ ಬರುತ್ತದೆ. ಈಗಿನ ಶಹಾಪುರದ ಮೇಲೆ (ಹಳೆ ಸಗರ) ಮುಸ್ಲಿಂ ಅರಸರು ದಾಳಿಮಾಡಿದ ದಾಳಿಕೋರರಿಂದ ತಪ್ಪಿಸಿಕೊಂಡು ಶಹಾಪುರ ಬೆಟ್ಟದ ಹಿಂದೆ ಬಂದು ವಾಸವಾಗಿದ್ದರು. ಈ ಪ್ರದೇಶವನ್ನು ದೊಡ್ಡ ಸಗರ ಅಥವಾ ಹೊಸ ಸಗರ ಎಂದು ಕರೆಯಲಾಯಿತು. ಈ ಗ್ರಾಮದಲ್ಲಿ ಮೊದಲು ಬೇಡರು ಎಲ್ಲಾ ರೀತಿಯಿಂದಲೂ ಹಿಂದುಳಿದಿದ್ದರು. ಬಡತನವೆಂಬುದು ಈ ಗ್ರಾಮದಲ್ಲಿ ತಾಂಡವಾಡುತ್ತಿತ್ತು. ನೀರಾವರಿ ಸೌಕರ್ಯ ಸಿಕ್ಕ ಮೇಲೆ ತಮಗೆ ಇದ್ದ ಅಲ್ಪ ಸ್ವಲ್ಪ ಕೃಷಿ ಭೂಮಿಗಳಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪ್ರಾರಂಭಿಸಿದರು. ಅಂದಿನಿಂದ ಬೇಡರು ಸ್ವಲ್ಪ ಮಟ್ಟಿಗೆ ಚೇತರಿಸಿಕೊಂಡರು. ಪ್ರಸ್ತುತ ಬೇಡರು ಸಣ್ಣ ವೃತ್ತಿ, ಸೌಲಭ್ಯಗಳನ್ನು ಪಡೆದು ಉತ್ತಮ ಸ್ಥಿತಿವಂತರಾಗುತ್ತಿದ್ದಾರೆ. ಇಲ್ಲಿನ ಬಹುತೇಕ ಬೇಡರಿಗೆ ಬಿ.ಪಿ.ಎಲ್. ರೇಷನ್ (ಪಡಿತರ) ಕಾರ್ಡಿನ ಸೌಲಭ್ಯವಿದೆ. ವಿಶೇಷವೆಂದರೆ ಮಂದಲರು ಎಂಬ ಬೆಡಗಿನ ಬೇಡರ ಜನಸಂಖ್ಯೆ ಹೆಚ್ಚಿಗೆ ಇದೆ. ಆಂಜನೇಯ ಸ್ವಾಮಿಯೇ ಇವರ ಮನೆಯ ದೇವರು. ಆಂಜನೇಯನಿಗೆ ಭಕ್ತರಾದ ಇವರು ಶನಿವಾರದಂದು ಯಾವುದೇ ಕಾರಣಕ್ಕೂ ಮಾಂಸ ಆಹಾರವನ್ನು ಸೇವನೆ ಮಾಡುವುದಿಲ್ಲ. ಗ್ರಾಮದ ಬೇಡರ ಹಿರಿಯ ವ್ಯಕ್ತಿ ಮೈಲಾರಪ್ಪನು

ಸಂಗೀತ ಪ್ರೀಯನಾಗಿದ್ದು, ಮಧುರ ಕಂಠದಿಂದ ಹಾಡುಗಳನ್ನು ಹಾಡುತ್ತಾನೆ. ಇದನ್ನು ಜನಪ್ರೀಯ ನಾಯಕ ನಟ ಡಾ॥ ರಾಜಕುಮಾರರವರು ಈತನನ್ನು ಬರಮಾಡಿಕೊಂಡು ಹಾಡುಗಳನ್ನು ಹಾಡಲು ಪ್ರೋತ್ಸಾಹಿಸಿದ್ದರು. ಸುರಪುರದ ವೀರದುಂದುಮೆ ಗೀತೆಯನ್ನು ಯುವಕರ ಮೈನವಿರೇಳಿಸುವಂತೆ ಹಾಡುತ್ತಾರೆ. ಆದರೆ ಇವರು ಈಗ ಎಲೆಮರೆ ಕಾಯಿಯಂತಾಗಿದ್ದಾರೆ.

**ನಾಗನಟಗಿ ಗ್ರಾಮ:**

ಶಹಾಪುರ ತಾಲೂಕಿನಲ್ಲಿ ಬರುವ ನಾಗನಟಗಿ ಗ್ರಾಮ ತೀರಾ ಹಿಂದುಳಿದಿರುವ ಗ್ರಾಮ. ಅಂದರೆ ನಾಗನಟಗಿ ಗ್ರಾಮ ಮೂಲಸೌಕರ್ಯಗಳಿಂದ ವಂಚಿತವಾಗಿದೆ. ಸುರಪುರ, ಶಹಾಪುರ ಬೆಟ್ಟಗಳ ಸಮೀಪ ಇರುವ ಈ ಗ್ರಾಮದಲ್ಲಿ ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿದೆ. ಅದರಲ್ಲಿಯೂ ಬೇಡರು ಗುಡಿಸಲು ಮನೆಗಳಲ್ಲಿ, ಟೀನ್ ಮನೆ, ಜಂತಿ ಮನೆಗಳಲ್ಲಿ ವಾಸವಾಗಿದ್ದಾರೆ. ಈ ಗ್ರಾಮದಲ್ಲಿರುವ ಶೇ. ೭೫% ರಷ್ಟು ಜನ ಬೇಡರು ಬಡತನದಿಂದ ಬಳಲುತ್ತಿದ್ದಾರೆ. ಹೆಚ್ಚಾಗಿ ಗೋಸಲ ವಂಶದ ಬೆಡಗಿನವರಾದ ಇವರು ಶಹಾಪುರ ಬಲಭೀಮೇಶ್ವರನು ಇವರ ಮನೆ ದೇವರಾಗಿದ್ದಾನೆ. ಇಂದಿಗೂ ಇವರ ಮನೆಗಳಲ್ಲಿ ಎಮ್ಮೆ, ಆಕಳು, ಎತ್ತುಗಳು ಕಂಡುಬರುತ್ತವೆ. ಆ ಗ್ರಾಮದವರು ಗೋಪಾಲಪ್ಪ, ಬಸವಣ್ಣ ಮತ್ತು ಇನ್ನಿತರು ಬೇಟೆಯಾಡುವುದರಲ್ಲಿ ನಿಪುಣರು. ಅಲ್ಲದೇ ಇದೇ ಗ್ರಾಮದ ಪಕ್ಕದಲ್ಲಿರುವ ಬಾಣತಿಹಾಳ ಗ್ರಾಮವು ಸಹ ಆರ್ಥಿಕವಾಗಿ ಹಿಂದೆ ಉಳಿದಿದೆ. ಬೇಟೆಯೇ ಇವರ ಉಪ ಉದ್ಯೋಗವಾಗಿದೆ. ಇವರ ಪ್ರತಿಯೊಬ್ಬರ ಮನೆಯಲ್ಲಿಯೂ ಬೇಟೆಯ ನಾಯಿಗಳಿವೆ. ಪ್ರತಿ ರವಿವಾರದಂದು ನಾಯಿಗಳನ್ನು ಹಿಡಿದುಕೊಂಡು ಗುಡ್ಡಗಳಿಗೆ ಏದಿನ ಬೇಟೆ ಮತ್ತು ಮೊಲದ ಬೇಟೆಯಾಡಲು ಹೊರಡುತ್ತಾರೆ. ಈ ಗ್ರಾಮದ ಒಟ್ಟು ಜನಸಂಖ್ಯೆ ೧೫೦೦ ಆಗಿದ್ದು ಬೇಡರ ಜನಸಂಖ್ಯೆ ೬೦೦ ಆಗಿದೆ.

**ವನದುರ್ಗ ಗ್ರಾಮ:**

ಈ ಹಿಂದೆ ಈ ಗ್ರಾಮ ಸುರಪುರದ ಸಂಸ್ಥಾನದ ಅಪರಾಧಿಗಳ ಬಂಧಿಖಾನೆಯಾಗಿತ್ತು. ಇಲ್ಲಿ ಈಗಲೂ ಕೋಟೆ ಕೊತ್ತಲುಗಳನ್ನು ಅಗಸಿಗಳನ್ನು ನೋಡಬಹುದು. ಈ ಗ್ರಾಮ ತನ್ನದೇ ಆದ ಒಂದು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಪ್ರಸ್ತುತ ಈ ಗ್ರಾಮ ಮೂಲಭೂತ ಸೌಕರ್ಯಗಳನ್ನು ಹೊಂದಿದ್ದು ಇಲ್ಲಿ ವಾಸಿಸುವ ಬಹುತೇಕರು ಸ್ಥಿತಿವಂತರಾಗಿದ್ದಾರೆ. ಬೇಡರು ತಮ್ಮ ತಮ್ಮ ಮಕ್ಕಳಿಗೆ ಶಾಲಾ ಕಾಲೇಜು ಶಿಕ್ಷಣವನ್ನು ಕೊಡಿಸಿ ಅಕ್ಷರಸ್ಥರನ್ನಾಗಿ ಮಾಡುತ್ತಿದ್ದಾರೆ. ಇಲ್ಲಿ ವಾಸಿಸುವ ಬಹುತೇಕ ಬೇಡರು ಗೋಸಲವಂಶ ಬೆಡಗಿನವರಾಗಿದ್ದು, ಶ್ರೀ ವೇಣುಗೋಪಾಲ ಸ್ವಾಮಿ ಇವರ ಮನೆದೇವರಾಗಿದ್ದಾನೆ. ಶುಕ್ರವಾರ-ಶನಿವಾರದಂದು ಮಾಂಸ ಆಹಾರವನ್ನು ಸೇವನೆ ಮಾಡುವುದಿಲ್ಲ. ಹಿಂದೆ ಸುರಪುರ

ತಾಲೂಕಿಗೆ ಒಳಪಟ್ಟ ಈ ಗ್ರಾಮ ಜನಸಂಖ್ಯಾ ಆಧಾರದ ಮೇಲೆ ಶಹಾಪೂರ ತಾಲೂಕಿಗೆ ಒಳಪಟ್ಟಿದೆ. ಈ ಗ್ರಾಮದಲ್ಲಿ ವಾಸವಾಗಿರುವ ವೆಂಕಟಪ್ಪ ನಾಯಕ ಎಂಬ ಹಿರಿಯ ವ್ಯಕ್ತಿ ರಾಜಕಾರಣಿ ಒಳ್ಳೆಯ ಭಾಷಣಕಾರರಲ್ಲದೇ ಹೈದರಾಬಾದ ಕರ್ನಾಟಕ ಶಿಕ್ಷಣ ಸಂಸ್ಥೆಯ ಸದಸ್ಯರು ಆಗಿದ್ದರು. ಪ್ರಸ್ತುತ ಈಗ ವಿಧಿವಶರಾಗಿದ್ದಾರೆ. ಇಂತಹ ಹಲವಾರು ಜನ ಬೇಡರು ಯುವಕರು ಉನ್ನತ ಸರ್ಕಾರಿ ನೌಕರಿಯಲ್ಲಿದ್ದಾರೆ. ಅಲ್ಲದೆ ಈ ಗ್ರಾಮದ ಒಬ್ಬ ಯುವಕ ಶ್ರೀ ತಿಪ್ಪರಾಜ ಹವಾಲ್ದಾರರವರು ರಾಯಚೂರ ಗ್ರಾಮೀಣ ಕ್ಷೇತ್ರದ ಶಾಸಕರಾಗಿದ್ದಾರೆ.

**ಮುಡಬೋಳ ಗ್ರಾಮ:**

ಮುಡಬೋಳ ಗ್ರಾಮಕ್ಕೂ ಹಾಗೂ ಸುರಪುರ ಸಂಸ್ಥಾನಕ್ಕೂ ಧಾರ್ಮಿಕ ಸಂಬಂಧವಿದೆ. ಸುರಪುರದಲ್ಲಿರುವ ಶ್ರೀವೇಣುಗೋಪಾಲಸ್ವಾಮಿಯು ಈ ಗ್ರಾಮದಲ್ಲಿ ನೆಲೆಸಿದ್ದಾನೆ. ಸುರಪುರ ಬೇಡ ದೊರೆಗಳು ಈ ದೇವರ ದೇವಸ್ಥಾನವನ್ನು ಕಟ್ಟಿಸಿದ್ದಾರೆ ಎಂಬ ಐತಿಹ್ಯವಿದೆ. ಪ್ರತಿವರ್ಷ ಸುರಪುರದಲ್ಲಿ ನಡೆಯುವ ಜಾತ್ರೆಯಂತೆ ಇಲ್ಲಿಯೂ ಶ್ರೀ ಕೃಷ್ಣ ಜನ್ಮಾಷ್ಟಮಿಯಂದು ಜಾತ್ರೆ ನಡೆಯುತ್ತದೆ. ಇಲ್ಲಿಯೂ ಕೂಡಾ ಹಾಲಹೋಕಳಿ, ಕಂಬದ ಸ್ಪರ್ಧೆ ನಡೆಯುತ್ತದೆ. ಊರಿಗೇ ಒಂದು ಬಾವಿ ಇದ್ದು ಈ ಐತಿಹಾಸಿಕ ಬಾವಿಯನ್ನು ನಾಗರಬಾವಿ ಎಂದು ಕರೆಯುತ್ತಾರೆ. ಕಾರಣ ಈ ಬಾವಿ ಕಟ್ಟಡ ಹಾವಿನ ಆಕಾರದಲ್ಲಿದೆ. ಬಾವಿಯ ನೀರನ್ನು ಈಗಲೂ ಕುಡಿಯಲು ಬಳಸುತ್ತಾರೆ. ಈ ಬಾವಿಯನ್ನು ಸ್ವಚ್ಛಮಾಡುವಾಗ ಅನೇಕ ನಾಗದೇವತೆಯ ಮೂರ್ತಿಗಳು ಸಿಕ್ಕಿವೆ. ಈ ಗ್ರಾಮದಲ್ಲಿ ಬೇಡರ ಜನಸಂಖ್ಯೆ ಹೆಚ್ಚಾಗಿದ್ದು ಬಹುತೇಕ ಬಡವರಾಗಿದ್ದು, ಇನ್ನೂ ಕೆಲವರು ಉತ್ತಮ ಸ್ಥಿತಿಯಲ್ಲಿದ್ದಾರೆ. ಈ ಗ್ರಾಮಕ್ಕೆ ನೀರಾವರಿ ಇಲ್ಲದ ಕಾರಣ ಒಣ ಬೇಸಾಯ ಪದ್ಧತಿಯನ್ನು ಅನುಸರಿಸಿದ್ದಾರೆ. ಕೊಳವೆ ಬಾವಿ ಹಾಕಿಸಿ ನೀರಾವರಿ ಸೌಲಭ್ಯ ಪಡೆದು ಅಲ್ಪ ಸ್ವಲ್ಪ ವಾಣಿಜ್ಯ ಬೇಸಾಯ ಮಾಡುತ್ತಿದ್ದಾರೆ. ಈ ಗ್ರಾಮದಲ್ಲಿ ಮಳೆ ಬಂದರೆ ಮಾತ್ರ ಬೆಳೆ. ಆದ್ದರಿಂದ ಬಹುತೇಕ ಬೇಡರು ಶಹಾಪೂರ–ಗುಲಬರ್ಗಾಕ್ಕೆ ಒಲಸೆ ಹೋಗಿದ್ದಾರೆ. ಈ ಗ್ರಾಮದಲ್ಲಿ ವಾಸಿಸುವ ಬಹುತೇಕ ಬೇಡರ ಮನೆಗಳಿದ್ದು ಇವರ ದೇವರು ತಿರುಪತಿ ವೆಂಕಟರಮಣ ಆಗಿದ್ದು, ಮೀನಗಲರೂ, ಗೋಸಲರೂ, ಬೆಡಗಿನ ಬೇಡರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಶುಕ್ರವಾರ ಶನಿವಾರ ಗುರುವಾರದಂದು ಮಾಂಸ ಆಹಾರವನ್ನು ಸೇವನೆ ಮಾಡುವದಿಲ್ಲ. ಕೆಲವು ಬೇಡರೂ ಸುಮಾರು ೧೬ ರಿಂದ ೨೦ ಎಕರೆ ಭೂಮಿಗಳನ್ನು ಹೊಂದಿದ್ದಾರೆ. ಇನ್ನೂ ಕೆಲವರಿಗೆ ಕೃಷಿ ಭೂಮಿಗಳೆ ಇಲ್ಲ. ಇಂಥವರು ಬೇರೆಯವರ ಹೊಲ–ಗದ್ದೆಗಳಲ್ಲಿ ಕೂಲಿ ಕಾರ್ಮಿಕರಾಗಿ ಹೋಗುತ್ತಾರೆ. ಈ ಗ್ರಾಮದ ಬೇಡರ ಮುಖಂಡರಾದ ರಂಗಣ್ಣಗೌಡ, ಚಂದ್ರಶೇಖರ ನಾಯಕ, ತಿರುಪತಿ ನಾಯಕ, ತಿಮ್ಮಣ್ಣ ನಾಯಕ, ಹಣಮಂತ್ರಾಯ, ಭೀಮರಾಯ ನಾಯಕ, ಆನಂದ ನಾಯಕ ಇವರು ತಮ್ಮ ಸಮುದಾಯದವರನ್ನು ಸುಧಾರಿಸಲು ಪ್ರಯತ್ನಪಡುತ್ತಿದ್ದಾರೆ. ತಮ್ಮ ಸಮುದಾಯದವರಲ್ಲಿ ಐಕ್ಯತೆ ತರಲು ಯತ್ನಿಸುತ್ತಿದ್ದಾರೆ. ಈ

ಗ್ರಾಮದಲ್ಲಿ ಯಾವುದೇ ಸಮಸ್ಯೆ ಬಂದರೂ ಇವರು ಮುಂದಾಗಿ ಆ ಸಮಸ್ಯೆಯನ್ನು ಬಗೆಹರಿಸುತ್ತಾರೆ. ಈ ಗ್ರಾಮದಲ್ಲಿ ಅನೇಕರು ವಿದ್ಯಾವಂತರು ಇದ್ದಾರೆ. ಅವರಲ್ಲಿ ಒಬ್ಬ ಯುವಕ ಸ್ನಾತಕೊತ್ತರ ಪದವಿಧರನಾಗಿದ್ದಾನೆ. ಜೊತೆಯಲ್ಲಿ ಈರಣ್ಣ ಎಂಬುವರು ಉಪನ್ಯಾಸಕ ರಾಗಿದ್ದಾರೆ. ಅಲ್ಲದೆ ಸಮುದಾಯ ಬೆಳೆಯುವ ಕಾಳಜಿ ಜೊತೆ ನಾಗರಾಜ ಮತ್ತು ಈರಣ್ಣ ಪ್ರಸ್ತುತ ಪಿಹೆಚ್.ಡಿ. ಮಾಡುತ್ತಿದ್ದಾರೆ.

### ಜೇವರ್ಗಿ ತಾಲೂಕು ಬೇಡ ಸಮುದಾಯ:

**ಜೇವರ್ಗಿ ಪಟ್ಟಣ:**

| | |
|---|---|
| "ತಾ. ಭೌಗೋಳಿಕ ವಿಸ್ತೀರ್ಣ | : ೧೮೨೨ |
| ತಾ. ಒಟ್ಟು ಜನಸಂಖ್ಯೆ | : ೨,೩೫,೨೫೪ |
| ಪುರುಷರು | : ೧,೧೯,೫೯೮ |
| ಮಹಿಳೆಯರು | : ೧,೧೫,೬೫೬ |
| ಗ್ರಾಮೀಣ ಜನಸಂಖ್ಯೆ | : ೨,೧೬,೦೭೫ |
| ಪಟ್ಟಣ | : ೧೯,೭೫೯ |
| ತಾ. ಬೇಡರ ಜನಸಂಖ್ಯೆ | : ೪.೦೮ |
| ಒಟ್ಟು ಗ್ರಾಮಗಳು | : ೧೪೫"[೨೦] |

ಸಗರ ನಾಡಿನ ಕೊನೆಯ ಭಾಗ ಜೇವರ್ಗಿ ಪಟ್ಟಣ ಭೌಗೋಳಿಕವಾಗಿ ಇದು ಬಯಲು ಪ್ರದೇಶವನ್ನು ಹೊಂದಿದ್ದು, ಫಲವತ್ತಾದ ಭೂಪ್ರದೇಶವನ್ನು ಹೊಂದಿದೆ. ಭೀಮನದಿ ಇಲ್ಲಿಯ ಜೀವ ನದಿಯಾಗಿದೆ. ಇಲ್ಲಿ ಹೆಚ್ಚಾಗಿ ಪಾಟಿಕಲ್ಲಿನ (ಫರ್ಸಿ) ಗಣಿಗಾರಿಕೆ ನಡಿಯುತ್ತದೆ. ವಿವಿಧ ಜನಾಂಗದ ಜನರು ಈ ಗಣಿಗಾರಿಕೆಯಲ್ಲಿ ನಿರತರಾಗಿದ್ದಾರೆ. ಇಲ್ಲಿ ಹೆಚ್ಚಾಗಿ ತೊಗರಿಯನ್ನು ಬೆಳೆಯುತ್ತಾರೆ. ಈ ಜೇವರ್ಗಿ ಪಟ್ಟಣ ಗುಲ್ಬರ್ಗಾ ಜಿಲ್ಲೆ ವ್ಯಾಪ್ತಿಗೆ ಒಳಪಟ್ಟಿದೆ. ಆದರೆ ಐತಿಹಾಸಿಕವಾಗಿಯೂ ಸಗರನಾಡಿನ ವ್ಯಾಪ್ತಿಗೆ ಒಳಪಟ್ಟಿದೆ. ಜೇವರ್ಗಿ ಪಟ್ಟಣದ ಕೆಲವು ಓಣಿಗಳಲ್ಲಿ ಬೇಡರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇಲ್ಲಿ ವಾಸವಾಗಿರುವ ಬಹುತೇಕರು ಬಡವರಾಗಿದ್ದಾರೆ. ದಿನ ಬೆಳಗಾದರೆ ತಮ್ಮ ಜೀವನೋಪಾಯಕ್ಕಾಗಿ, ಕೂಲಿ ಮಾಡುವುದಕ್ಕಾಗಿ, ಮನೆ ಕಟ್ಟಡ ಕೆಲಸಕ್ಕಾಗಿ, ಗಣಿಗಾರಿಕೆಯಲ್ಲಿ ಕೆಲಸಕ್ಕೆ ಹೋಗುತ್ತಾರೆ. ಜಂಪಲರು, ಗುಜ್ಜಲರು, ಗೋಸಲ, ಬೆಡಗಿನವರು ಹೆಚ್ಚಾಗಿದ್ದಾರೆ. ಇವರು ಹೆಚ್ಚಾಗಿ ಪಾಟಿಕಲ್ಲಿನ ಮನೆಯನ್ನು ಹೊಂದಿದ್ದು ಮಧ್ಯಮ ವರ್ಗದವರಾಗಿದ್ದಾರೆ. ಇನ್ನುಳಿದವರು ಭೂ ರಹಿತ ಕೂಲಿಕಾರ್ಮಿಕರಾಗಿದ್ದಾರೆ. ಗುಡಿಸಲು ಮನೆಯನ್ನು ಹೊಂದಿದ್ದು ಬಡವರು

ಮಧ್ಯಮ ವರ್ಗದವರಾಗಿದ್ದಾರೆ. ಇನ್ನು ಕೆಲವರಿಗೆ ೫ ರಿಂದ ೧೦ ಎಕರೆ ಕೃಷಿ ಭೂಮಿಗಳು ಇವೆ. ಇನ್ನುಳಿದವರು ಭೂರಹಿತ ಕಾರ್ಮಿಕರಾಗಿದ್ದಾರೆ.

**ನರಿಬೊಳ ಗ್ರಾಮ:**

ಭೀಮಾನದಿಯ ದಂಡೆಯ ಮೇಲಿರುವ ಈ ಗ್ರಾಮ ತನ್ನದೇಯಾದ ಐತಿಹಾಸಿಕ ಹಿನ್ನಲೆ ಹೊಂದಿದೆ. ಸುರಪುರ ಸಂಸ್ಥಾನದ ದೊರೆಗಳು ನರಿಬೋಳಿ ಗ್ರಾಮದ ಬೇಡ ನಾಯಕರು ಅವಿನಾಭಾವ ಸಂಬಂಧವಿದೆ. ಇಂದಿಗೂ ತಲೆತಲಾಂತರದಿಂದ ಸಂಬಂಧಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಅಂದು ಸುರಪುರ ಸಂಸ್ಥಾನದ ನ್ಯಾಯ ಪಂಚಾಯತಿಯಲ್ಲಿ ಅಪರಾಧಿಗಳೆಂದು ಕರೆಸಿಕೊಂಡವರನ್ನು ಸಗರನಾಡಿನ ಭೀಮಾನದಿಯ ದಡದಲ್ಲಿರುವ ಈ ಗ್ರಾಮಕ್ಕೆ ತಂದು ಮತ್ತೊಮ್ಮೆ ವಿಚಾರಿಸಿ ತಪ್ಪು ಮಾಡಿದ್ದಾನೆ ಎಂದು ತೀರ್ಮಾನಿಸಲ್ಪಟ್ಟ ಮೇಲೆ ಹೊಳೆಯ ದಂಡೆಯ ಮೇಲಿರುವ ದೇವರ ಕಟ್ಟೇಯ ಮೇಲೆ ನಿಲ್ಲಿಸಿ ರುಂಡವನ್ನು ಕಡಿಯುತ್ತಿದ್ದರಂತೆ. ಆಗ ಆ ದೇಹಗಳನ್ನು ಹೊಳೆ-ನದಿಗೆ ಎಸೆಯುತ್ತಿದ್ದರಂತೆ. ಆದ್ದರಿಂದ ಈ ಗ್ರಾಮದಲ್ಲಿ ಅಪರಾಧಿಗಳ ನರಬಲಿ ಕೊಡುವುದರಿಂದ ಅಂದಿನಿಂದ ಈ ಗ್ರಾಮಕ್ಕೆ ನರಬಲಿ ಗ್ರಾಮ ಎಂದು ಹೆಸರಿಸಲಾಯಿತಂತೆ. ಕಾಲಕ್ರಮೇಣ ಜನರ ಆಡುಭಾಷೆಯಲ್ಲಿ ನರಬೋಳಿ ಗ್ರಾಮವಾಗಿ ಬದಲಾಯಿತು. ಇಂದಿಗೂ ಕೂಡಾ ನರಬಲಿ ಕೊಡುವ ಅಂದಿನ ಸ್ಥಳವನ್ನೇ ಈಗಲೂ ನೋಡಬಹುದು. ಅಂದು ಈ ಗ್ರಾಮದಲ್ಲಿರುವ ಬೇಡರ ಯಜಮಾನರಿಗೆ ಸುರಪುರ ಸಂಸ್ಥಾನದ ರಾಜರು ಸುಬೇದಾರ ಬಿರುದನ್ನು ಅಥವಾ ಜವಾಬ್ದಾರಿಯನ್ನು ನೀಡಿ ಸುತ್ತ-ಮುತ್ತಲ ಗ್ರಾಮಗಳ ಅಧಿಕಾರವನ್ನು ನೀಡಿದರು. ಇತಿಹಾಸ ಹೇಳುತ್ತದೆ. ಪ್ರಸ್ತುತ ಈ ಗ್ರಾಮದಲ್ಲಿ ಬೇಡರು ಬಹುಸಂಖ್ಯಾತರಾಗಿದ್ದು ಶೇ. ೫೦% ರಷ್ಟು ಜನ ಬಡವರಾಗಿದ್ದು ಇನ್ನುಳಿದ ಶೇ. ೫೦% ರಷ್ಟು ಬೇಡರು ಉತ್ತಮ ಸ್ಥಿತಿಯಲ್ಲಿದ್ದಾರೆ. ಇಲ್ಲಿರುವ ಕೆಲವು ಗೌರವಾನ್ವಿತ ಬೇಡರಿಗೆ ೬೦ ರಿಂದ ೧೦೦ ಎಕರೆ ಕೃಷಿ ಭೂಮಿಗಳಿವೆ. ಇನ್ನುಳಿದ ಮಧ್ಯಮ ವರ್ಗದ ಬೇಡರಿಗೆ ೧೦ ರಿಂದ ೨೦ ಎಕರೆ ಕೃಷಿ ಭೂಮಿಗಳು ಇವೆ. ಬಡತನದಲ್ಲಿರುವ ಬೇಡರಿಗೆ ೫ ರಿಂದ ೭ ಎಕರೆ ಕೃಷಿ ಭೂಮಿಗಳು ಇವೆ. ಇದ್ದುದರಲ್ಲಿಯೇ ಉತ್ತಮ ಜೀವನ ಸಾಗಿಸುವವರಾಗಿದ್ದಾರೆ. ಇಲ್ಲಿನ ಬಹುತೇಕ ಮನೆಗಳು ಪಾಟಿಕಲ್ಲಿನ ಮನೆಗಳಾಗಿದ್ದು, ಟೀನ್ ಮನೆ, ಜಂತಿ ಮನೆಗಳು ತೀರಾ ವಿರಳ. ಶ್ರೀಮಂತರಾದವರು ಕಾಂಕ್ರೀಟ್ (ಆರ್.ಸಿ.ಸಿ.) ಕಟ್ಟಡಗಳನ್ನು ಕಟ್ಟಿಕೊಂಡಿದ್ದಾರೆ. ಈ ಗ್ರಾಮದ ಬೇಡ ನಾಯಕರ ಮನೆ ದೇವರು ಮಲ್ಲಯ್ಯನಾಗಿದ್ದು ಪ್ರತಿ ರವಿವಾರದಂದು ತಪ್ಪದೇ ಪೂಜೆ ಪುನಸ್ಕಾರ ಮಾಡುತ್ತಾರೆ. ರವಿವಾರದಂದು ಇವರು ಯಾವುದೇ ಕಾರಣಕ್ಕೂ ಮಾಂಸ ಆಹಾರವನ್ನು ಸೇವನೆ ಮಾಡುವುದಿಲ್ಲ. ಉಳಿದ ಸೋಮವಾರದಿಂದ ಶನಿವಾರದ

ವರೆಗೆ ಮಾಂಸ ಆಹಾರವನ್ನು ತಿನ್ನುತ್ತಾರೆ. ಇದು ಸುರಪುರ-ಜೇವರ್ಗಿ ತಾಲೂಕಿನ ಬೇಡರು ಇರುವ ವಿಶೇಷ ವ್ಯತ್ಯಾಸ. ಇಲ್ಲಿನ ಮುಖ್ಯ ಬೆಳೆ ತೊಗರಿ ಬೆಳೆಯಾಗಿದ್ದು, ಅಲ್ಪ-ಸ್ವಲ್ಪ ಹತ್ತಿ ಬೆಳೆಯುತ್ತಾರೆ. ಕೃಷಿಭೂಮಿ ಫಲವತ್ತತೆಯಿಂದ ಕೂಡಿರುವುದರಿಂದ ಬೇಡರು ತಮ್ಮ ಹೊಲಗಳಲ್ಲಿ ೧ ಎಕರೆಗೆ ಸುಮಾರು ೮ ರಿಂದ ೧೦ ಚೀಲ ತೊಗರಿಯನ್ನು ಬೆಳೆಯುತ್ತಾರೆ. ಆದ್ದರಿಂದ ಈ ಪ್ರದೇಶಗಳಲ್ಲಿ ತೊಗರಿಯ ಕಣಜ ಎಂದು ಕರೆಯುತ್ತಾರೆ. ಈ ಗ್ರಾಮದ ಬೇಡರ ಮುಖಂಡರಾದ ತಿಪ್ಪಣ್ಣ ಸುಬೇದಾರ, ಮಲ್ಲಣ್ಣ ಸುಬೇದಾರ ಗುರುಸುಬೇದಾರ, ಇವರು ಬೇಡರ ನ್ಯಾಯ ಪಂಚಾಯತಿ ಮಾಡುತ್ತಾರೆ. ಗ್ರಾಮದ ಬೇಡ ಯುವಕರು ಶಿಕ್ಷಣ ಪಡೆದವರಾಗಿದ್ದು ಇಂದು ಉತ್ತಮ ಒಳ್ಳೆಯ ಸರ್ಕಾರಿ ನೌಕರಿಯಲ್ಲಿದ್ದಾರೆ. ಬೇಡರಾದ ಸುಬೇದಾರ ಕುಟುಂಬಕ್ಕೆ ಸೇರಿದ ಶರಣಪ್ಪ ಸುಬೇದಾರ ಎಂಬುವವರು ಇಂದು ಪೋಲೀಸ್ ಅಧಿಕಾರಿಯಾಗಿ ಗುಲ್ಬರ್ಗಾದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ನರಬೋಳಿ ಗ್ರಾಮದ ಯುವಕರಿಗೆ ಇವರು ಆದರ್ಶ ವ್ಯಕ್ತಿಯಾಗಿದ್ದಾರೆ. ಜೇವರ್ಗಿ ತಾಲೂಕಿನ ಶಾಸಕರಾದ ಲಿಂಗಾಯತ ಸಮುದಾಯದ ದೊಡ್ಡಪ್ಪಗೌಡ ನರಬೋಳಿ ಇದೇ ಗ್ರಾಮದವರಾಗಿದ್ದು ಬೇಡ ಸಮುದಾಯದ ಮತ್ತು ಲಿಂಗಾಯತ ಸಮುದಾಯದ ನಡುವೆ ಅನ್ಯೋನ್ಯ ಸಂಬಂಧವಿದೆ. ಈ ಗ್ರಾಮದ ಜಾತ್ರೆ ಉತ್ಸವ ಧಾರ್ಮಿಕ ಸಮಾರಂಭಗಳು ಬೇಡ ಮುಖಂಡರ ನೇತೃತ್ವದಲ್ಲಿಯೇ ನಡೆಯುತ್ತದೆ.

**ಹಸನಾಪುರ ಗ್ರಾಮ:** ಈ ಗ್ರಾಮವು ಕೂಡಾ ಭೀಮಾನದಿಯ ತೀರದಲ್ಲಿ ನೋಡುವುದಕ್ಕೆ ಪುಟ್ಟ ಗ್ರಾಮವಾದರೂ ಬೇಡರ ಪ್ರಾಬಲ್ಯ ಅತಿಯಾಗಿದೆ. ಇಲ್ಲಿ ವಾಸಿಸುವ ಬಹುತೇಕರು ಬೇಡರಾಗಿದ್ದು ಗ್ರಾಮವನ್ನು ನಿಯಂತ್ರಣದಲ್ಲಿ ಇಟ್ಟುಕೊಂಡಿದ್ದಾರೆ. ಒಟ್ಟು ಜನಸಂಖ್ಯೆ ೬೫೦ ಇದ್ದು ಬೇಡರ ಸಂಖ್ಯೆ ೪೦೦ ಇದೆ. ಇಲ್ಲಿ ವಾಸವಾಗಿರುವ ಬಹುತೇಕ ಬೇಡರು ಬಡವರು. ಇನ್ನುಳಿದ ಬೇಡ ನಾಯಕರು ಶ್ರೀಮಂತರಾಗಿದ್ದಾರೆ. ಶ್ರೀಮಂತ ಬೇಡರು ೮೦ ಎಕರೆಯಿಂದ ೧೦೦ ಎಕರೆ ಕೃಷಿ ಭೂಮಿಗಳಿವೆ. ಈ ಗ್ರಾಮ ಹಿಂದೆ ಸಗರ ನಾಡಿನ ವ್ಯಾಪ್ತಿಗೆ ಒಳಪಟ್ಟಿತ್ತು. ಈ ಗ್ರಾಮದ ಬೇಡ ಮುಖಂಡನಿಗೆ ಸುಬೇದಾರನೆಂದು ನೇಮಕಮಾಡಿ ಊರಿನ ಜವಾಬ್ದಾರಿಯನ್ನು ನೀಡಿದರಂತೆ ಎಂದು ತಾಲೂಕು ಪಂಚಾಯತಿಯ ಸದಸ್ಯರಾದ ಸೀತು ಸುಬೇದಾರರು ಹೇಳುತ್ತಾರೆ. ಈ ಗ್ರಾಮದ ಬಸವರಾಜ ಸುಬೇದಾರ ಮತ್ತು ಸೀತಾರಾಮ ಸುಬೆದಾರ ಊರಿನ ಬೇಡರ ನ್ಯಾಯ ಪಂಚಾಯತಿಯನ್ನು ಮಾಡುತ್ತಾರೆ. ಇತರೆ ಜನಾಂಗದ ಜನರು ಸಹ ಇವರಲ್ಲಿ ನ್ಯಾಯ ಕೇಳಲು ಬರುತ್ತಾರೆ.

**ಬಿರಾಳ ಕೆ ಗ್ರಾಮ:**

ಜೇವರ್ಗಿ ತಾಲೂಕಿನಲ್ಲಿ ಬೇಡರು ಹೆಚ್ಚಾಗಿದ್ದಾರೆ. ಪ್ರಮುಖ ಗ್ರಾಮಗಳಲ್ಲಿ ಬಿರಾಳ ಕೆ ಗ್ರಾಮ ಪ್ರಮುಖವಾಗಿದ್ದು ಇಲ್ಲಿ ವಾಸಿಸುವ ಬಹುತೇಕ ಬೇಡರು ಬಡತನದಿಂದ

ಬಳಲುತ್ತಿದ್ದಾರೆ. ಊರಿನಲ್ಲಿ ಇವರ ನಡುವೆ ಐಕ್ಯತೆ ಇದ್ದು ಮೂಲಭೂತ ಸೌಕರ್ಯದಿಂದ ವಂಚಿತರಾಗಿದ್ದಾರೆ. ಈ ಗ್ರಾಮ ಸಂಪೂರ್ಣ ನೀರಾವರಿಯಿಂದ ವಂಚಿತವಾಗಿದೆ. ಮಳೆಯನ್ನೇ ಅವಲಂಬಿಸಿದೆ. ಈ ಗ್ರಾಮದ ಜನರು ಮತ್ತು ಬೇಡರು ಮಳೆಗಾಲದಲ್ಲಿ ಮಾತ್ರ ಬಿತ್ತನೆ ಮಾಡುತ್ತಾರೆ. ಉಳಿದ ದಿನಗಳಲ್ಲಿ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಜಾತಿಯಿಂದ ಸಂಘಟಿತರಾಗಿದ್ದು ಆರ್ಥಿಕವಾಗಿ ರಾಜಕೀಯವಾಗಿ ತೀರ ಹಿಂದುಳಿದಿದ್ದಾರೆ. ಅಲ್ಲದೆ ಮೇಲ್ವರ್ಗದ ಜನಾಂಗದವರಿಂದ ತುಳಿತಕ್ಕೆ ಒಳಗಾಗಿದ್ದಾರೆ.

**ಅಡಿಟಿಪ್ಪಣಿ**

೧. ಬಿ.ಕೃಷ್ಣಮಾಚಾರ್ಯ, ೨೦೦೩, ಮರೆಯಲಾಗದ ಸುರಪುರ ರಾಜರ ಚರಿತ್ರೆ, ಪು.ಸಂ. ೭

೨. ಅದೇ, ಪು.ಸಂ. ೮

೩. ಅದೇ, ಪು.ಸಂ. ೯

೪. ಅದೇ, ಪು.ಸಂ. ೧೩

೫. ಯಾದಗಿರಿ ಜಿಲ್ಲಾ ಮಾನವ ಅಭಿವೃದ್ಧಿ ವರದಿ, ೨೦೧೧, ಪು.ಸಂ. ೨೦೦

೬. ತಾರಿಹಳ್ಳಿ ಹನುಮಂತಪ್ಪ (ಸಂ), ೨೦೧೨, ನಾಯಕರ ಮಹಾಸಂಸ್ಥಾನ ಸುರಪುರ, ಪು.ಸಂ. ೧೭೯

೭. ಅದೇ, ಪು.ಸಂ. ೧೮೦

೮. ಅದೇ, ಪು.ಸಂ. ೧೮೫

೯. ಅದೇ, ಪು.ಸಂ. ೧೭೦

೧೦. ವಿರೂಪಾಕ್ಷ ಕಟ್ಟಿಮನಿ, ೨೦೧೦, ಹಳ್ಳಿ ಹಾದಿ ಪುಸ್ತಕ ಪು.ಸಂ. ೫

೧೧. ಅದೇ, ಪು.ಸಂ. ೮

೧೨. ಅದೇ, ಪು.ಸಂ. ೯

೧೩. ವಿಜಯವಾಣಿ ದಿನಪತ್ರಿಕೆ ವರದಿಯಿಂದ ಮಾಹಿತಿ ಸಂಗ್ರಹ

೧೪. ಬಿ.ಕೃಷ್ಣಮಾಚಾರ್ಯ, ೨೦೦೩, ಮರೆಯಲಾಗದ ಸುರಪುರ ರಾಜರ ಚರಿತ್ರೆ, ಪು.ಸಂ. ೧೧

೧೫. ಅದೇ, ಪು.ಸಂ. ೧೩

೧೬. ಅದೇ, ಪು.ಸಂ. ೧೬

೧೭. ಪೂಜ್ಯ ಶ್ರೀ ಮಹಾಂತ ಸ್ವಾಮಿಜಿ (ಸಂ), ೨೦೧೧, ಶ್ರೀ ದಾಸಿಮಾರ್ಯರ ಪುರಾಣ ಗ್ರಂಥ, ಪು.ಸಂ. ೧

೧೮. ಎ. ಕೃಷ್ಣ, ೧೯೮೫, ಸಗರನಾಡಿನ ದರ್ಶನ ಸಂಚಿಕೆ, ಪು.ಸಂ. ೧೫

೧೯. ಸೆನ್ಸಸ್ ಆಫ್ ಇಂಡಿಯಾ ವಿಲೇಜ್ ಡೈರಕ್ಟರಿ ೨೦೧೧, ಪು.ಸಂ. ೨೫೦

೨೦. ಕಲಬುರಗಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ, ೨೦೦೧, ಪು.ಸಂ. ೧೮೦.

# ಅಧ್ಯಾಯ ೪

## ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಜೀವನ

೧. ಬಂಧುತ್ವ

೨. ಕೌಟುಂಬಿಕ ಜೀವನ ಪದ್ಧತಿ

೩. ವಿವಾಹ ಪದ್ಧತಿ

೪. ಗೃಹ ನಿರ್ಮಾಣ

೫. ಆಹಾರ ಸೇವನೆಯ ಪದ್ಧತಿ

೬. ಬೇಡ ಸಮುದಾಯದ ಸಾಮಾಜಿಕ ನ್ಯಾಯ ಪದ್ಧತಿ

೭. ಬೇಡರು ಅನುಸರಿಸುವ ಚಿಕಿತ್ಸಾ ಪದ್ಧತಿ (ಜನಪದ ವೈದ್ಯ)

೮. ಬೇಡರ ಬೇಟೆ ಪದ್ಧತಿ

೯. ಬೇಡರ ಸಾಮಾಜಿಕ ಜೀವನದಲ್ಲಿ ಘೋಷಾ ಪದ್ಧತಿ

೧೦. ಬೇಡ ಸಮುದಾಯದ ಮಹಿಳೆಯರ ಸ್ಥಾನಮಾನ

೧೧. ಬೇಡ ಸಮುದಾಯದ ಕಲೆ ಮತ್ತು ಕ್ರೀಡೆ

೧೨. ಬೇಡ ಸಮುದಾಯದ ಸಂಘ ಸಂಸ್ಥೆ, ಸಂಘಟನೆಗಳು

೧೩. ಜಾಜ್‌ಮಾನ್ ಪದ್ಧತಿ

# ಅಧ್ಯಾಯ ೪

## ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಜೀವನ

ಈ ಜಗತ್ತಿನಲ್ಲಿ ಪ್ರತಿಯೊಂದು ಜಾತಿ, ಧರ್ಮ, ಜನಾಂಗದ ಸಮುದಾಯಗಳಿಗೆ ತನ್ನದೆಯಾದ ಸಾಮಾಜಿಕ ಅಂತಸ್ತು ಸಾಮಾಜಿಕ ರೀತಿ-ನೀತಿಗಳು ಸಾಮಾಜಿಕ ಜೀವನವಿರುತ್ತದೆ. ಮನುಷ್ಯ ಸಮಾಜದಲ್ಲಿ ಹೇಗೆ ಇರಬೇಕು ಹೇಗೆ ಬಾಳಬೇಕು. ಹೇಗೆ ನಡೆದುಕೊಳ್ಳಬೇಕು. ಎಂಬುದನ್ನು ಸಾಮಾಜೀಕರಣದ ಮೂಲಕ ಕಲಿಸಿಕೊಡುತ್ತದೆ. ಕಲಿಸಿಕೊಡುವುದಕ್ಕಾಗಿಯೇ ಸಮಾಜದಲ್ಲಿ ಸಾಮಾಜಿಕ ನಿಯಮಗಳು, ಸಾಮಾಜಿಕ ಸಂಸ್ಥೆಗಳು, ಸಾಮಾಜಿಕ ಕಟ್ಟಳೆಗಳು, ಸಾಮಾಜಿಕ ನಿಯಂತ್ರಣಗಳು, ವಿವಿಧ ವಿಧಿ ನಿಷೇಧಗಳು ಇವೆ. ಇವುಗಳನ್ನು ಬಿಟ್ಟು ಮನುಷ್ಯ ಬದುಕಿದ್ದೇಯಾದರೆ ಅವನು ಮನುಷ್ಯನಲ್ಲ. ಪ್ರಾಣಿಗಳಿಗೆ ಸರಿಸಮಾನನಾಗುತ್ತಾನೆ. ಅಂತೆಯೇ ನಮ್ಮ ದಾಸ ಮಹನೀಯರುಗಳು ಮಾನವ ಜನ್ಮ ದೊಡ್ಡದು ಎಂದು ಸಾರಿದ್ದಾರೆ. ಅದೇ ರೀತಿಯಾಗಿ ರಾಜ್ಯಶಾಸ್ತ್ರ ಪಿತಾಮಹರಾದ ಅರಿಸ್ಟಾಟಲ್‌ರವರು ಮನುಷ್ಯ ಸಮಾಜ ಜೀವಿ ಸಂಘ ಜೀವಿ ಎಂದಿದ್ದಾನೆ. (Man is a social animal)

### ೪.೧ ಬಂಧುತ್ವ:

'ಮಾನವ ಮೂಲತಃ ಸಂಘಜೀವಿ. ತನ್ನ ಸಾಮೂಹಿಕ ಜೀವನದಲ್ಲಿ ಒಬ್ಬ ವ್ಯಕ್ತಿ ಅನೇಕ ವ್ಯಕ್ತಿಗಳೊಡನೆ ಸಮೂಹಗಳಲ್ಲಿ ವಿವಿಧ ರೀತಿಯ ಸಂಬಂಧಗಳಿಂದ ಬಂಧಿಸಲ್ಪಟ್ಟಿದ್ದಾನೆ. ಈ ರೀತಿಯ ಬಂಧನದಲ್ಲಿ ಅತೀ ಮುಖ್ಯವಾದ, ಸಾರ್ವತ್ರಿಕವಾದ. ಮೂಲಭೂತವಾದ ಮತ್ತು ಸಂತಾನೋತ್ಪತ್ತಿಯ ಆಧಾರದ ಮೇಲೆ ರಚಿತವಾದ ಬಂಧುತ್ವ ಎನ್ನಬಹುದು. ಇದು ಜಗತ್ತಿನಾದ್ಯಂತ ಏಕರೂಪವಾಗಿಲ್ಲ. ಇದರ ಪ್ರಕಾರ ಮಾದರಿಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿವೆ. ಬಂಧುತ್ವ ಮತ್ತು ವಿವಾಹ ಎನ್ನುವುದು ನಮ್ಮ ಜೀವನದ ಎರಡು ಮೂಲಭೂತ ಸತ್ಯಗಳು. ಹುಟ್ಟು, ಸಂಭೋಗ ಹಾಗೂ ಸಾವಿಗೆ ಸಂಬಂಧಿಸಿದೆ.

ಬಂಧುತ್ವ ವ್ಯಕ್ತಿಯ ಹುಟ್ಟಿನಿಂದಲೇ ಬರುವುದು. ತಂದೆ ತಾಯಿಗಳ ಸಂಪರ್ಕದಿಂದ ಅದು ವೃದ್ಧಿಗೊಳ್ಳಬಹುದು. ಸಾಮಾಜಿಕ ಬಂಧುತ್ವ, ವಯಸ್ಸು, ಲಿಂಗ, ಜಾತಿ ಇತ್ಯಾದಿಗಳನ್ನು ಅವಲಂಬಿಸಿರುತ್ತದೆ. ಹಾಗೇ ಸಗರನಾಡಿನ ಬೇಡ ಸಮುದಾಯದಲ್ಲಿ ಬಂಧುತ್ವಕ್ಕೆ ಅದರ ಬಳಕೆಗೆ ಸಾಕಷ್ಟು ಪ್ರಾಮುಖ್ಯತೆ ಇದೆ.

**ಬಂಧುತ್ವ ಎಂದರೆ:** 'ಬಂಧುತ್ವವು ಸಂಬಂಧಿಕರ ನಡುವಣ ನಿಜವಾದ ಅಥವಾ ನಂಬಲಾಗಿರುವ ಕಾಲ್ಪನಿಕ ರಕ್ತ ಸಂಬಂಧಗಳನ್ನು ಸೂಚಿಸುವುದು. ಸಗರನಾಡಿನ ಬೇಡರ ಬಂಧುತ್ವ ಹಾಗೂ ವಿವಾಹದ ಬಗ್ಗೆ ಅಧ್ಯಯನ ಮಾಡುವಾಗ ನಾಲ್ಕು ಅಂಶಗಳನ್ನು ಗಮನಿಸಬಹುದು.'[೧]

೧. ಬೇಡ ಸ್ತ್ರೀ ಮಕ್ಕಳಿಗೆ ಜನ್ಮ ಕೊಡುತ್ತಾರೆ.

೨. ಪುರುಷರಾದವರು ಸ್ತ್ರೀಯರು ಗರ್ಭ ಧರಿಸುವಂತೆ ಮಾಡುತ್ತಾರೆ.

೩. ಪುರುಷರು ಸಾಮಾನ್ಯವಾಗಿ ಪ್ರಜನನವನ್ನು ಒಳಗೊಂಡಂತೆ ನಿಯಂತ್ರಣವನ್ನು ಸ್ಥಾಪಿಸುವವರಾಗುತ್ತಾರೆ.

೪. ಪ್ರಾಥಮಿಕ ಸಂಬಂಧಗಳು ಸಾಮಾನ್ಯವಾಗಿ ಪರಸ್ಪರ ತಮ್ಮೊಳಗೆ ಸಂಭೋಗ ನಡೆಸುವುದಿಲ್ಲ.

ಈ ಎಲ್ಲಾ ಅಂಶಗಳು ಬೇಡರ ಬಂಧುತ್ವ ವ್ಯವಸ್ಥೆಗೆ ಸಹಾಯಕವಾಗಿವೆ, ಈ ನಾಲ್ಕು ಅಂಶಗಳ ಮೇಲೆ ಬಂಧುತ್ವವು ನಿಂತಿದೆ.

**ಸಗರನಾಡಿನ ಬೇಡರ ಬಂಧುತ್ವದ ಬಳಕೆಗಳು:**

ಒಂದು ಗುಂಪಿಗೆ ಸೇರಿದ ವ್ಯಕ್ತಿಗಳು ಒಬ್ಬರನ್ನೊಬ್ಬರು ಯಾವ ರೀತಿ ಸಂಬೋಧಿಸಬೇಕು ಯಾವ ರೀತಿ ವರ್ತಿಸಬೇಕು, ಯಾರ ಜೊತೆ ಹೇಗೆ ನಡೆದುಕೊಳ್ಳಬೇಕು ಎನ್ನುವ ಬಗ್ಗೆ ಕೆಲವು ನಿಯಮಗಳು ಬೇಡ ಸಮುದಾಯದಲ್ಲಿವೆ. ಅವುಗಳಲ್ಲಿ ಮುಖ್ಯವಾದವು ದೂರವಿಡುವಿಕೆ ವಿನೋದ ಸಂಬಂಧಗಳು ಶಿಶುಮೂಲ ಸಂಭೋದನೆ.

**೧) ದೂರವಿಡುವಿಕೆ ನಿಯಮ:**

ಬೇಡರಲ್ಲಿ ಕೆಲವೊಂದು ನಿಯಮಗಳು ವ್ಯಕ್ತಿಗಳ ನಡುವಣ ನಿಕಟತೆಯನ್ನು ತಗ್ಗಿಸಲು ಏರ್ಪಾಡಾಗಿವೆ. ಅದನ್ನು ಮಾನವ ಶಾಸ್ತ್ರದಲ್ಲಿ ದೂರವಿಡುವಿಕೆ ನಿಯಮಗಳು ಎಂದು ಕರೆಯುತ್ತಾರೆ. ಬೇಡ ಜನಾಂಗದಲ್ಲಿ ಗಂಡು ಹೆಣ್ಣಿನ ನಡುವೆ ಸಂಬಂಧಗಳು ಸಾರ್ವಜನಿಕ ಸ್ಥಳಗಳಲ್ಲಿನ ಅವರುಗಳ ವರ್ತನೆ ಮಾತುಗಳು ಮುಂತಾದವುಗಳಿಗೆ ನಿಯಮಗಳಿವೆ. ಬೇಡ ಜನಾಂಗದಲ್ಲಿ ಸಹೋದರ ಸಹೋದರಿಯರು, ಅಳಿಯ ಮತ್ತು ಅತ್ತೆ ಸೊಸೆ ಮತ್ತು

ಮಾವ ಇವರುಗಳು ತಮ್ಮಲ್ಲಿ ಅಂತರವನ್ನು ಕಾಯ್ದುಕೊಂಡು ದೂರವಿರುತ್ತಾರೆ. ನಮ್ಮ ಹಿಂದೂ ಧರ್ಮದಲ್ಲಿ ಸಂಬಂಧಗಳಿಗೆ ಪವಿತ್ರ ಸ್ಥಾನಮಾನವಿದೆ.

**೨) ವಿನೋದ ಸಂಬಂಧಗಳ ನಿಯಮಗಳು:**

ಬೇಡ ಸಮುದಾಯದಲ್ಲಿ ಸಮಾನತೆಯನ್ನು ಹಾಗೂ ಪರಸ್ಪರತೆಯನ್ನು ಸೂಚಿಸಲು ವಿನೋದ ಅಥವಾ ಹಾಸ್ಯ ನಿಂದ್ಯೆ ಬೈಗುಳಗಳ ವಿನಿಮಯ ಮಾಡುವುದು ತುಂಟತನದ ಭಾಷೆಗಳನ್ನು ಬಳಸುವುದು ನಾನು ಕಂಡು ಕೊಂಡಿದ್ದೇನೆ. ಇಂತಹ ವರ್ತನೆಗೆ ಅವಕಾಶವೀಯುವ ಸಂಬಂಧಗಳನ್ನು ವಿನೋದ ಸಂಬಂಧ ಎನ್ನಲಾಗಿದೆ. ವಿನೋದ ಸಂಬಂಧಗಳು ಅಣ್ಣ ತಮ್ಮ ತಂದೆ ತಾಯಿ ಮಕ್ಕಳು ಸಹೋದರ ಸಹೋದರಿಯರ ನಡುವೆ ಯಾವತ್ತೂ ನಡೆಯಬಾರದು ಎಂಬ ನಿಯಮ ನಿರ್ಬಂಧಗಳಿವೆ. ಆದರೆ ತಂಗಿಯ ಅಕ್ಕನ ಜೊತೆ ಅಥವಾ ಮಗನ ಜೊತೆ ತಾತಾ ಮೊಮ್ಮಕ್ಕಳ ಜೊತೆ, ಹೆಣ್ಣು ಅಜ್ಜಿಯ ಮೊಮ್ಮಕ್ಕಳ ಜೊತೆ ಯಾವಾಗಲೂ ವಿನೋದ ರೀತಿಯಲ್ಲಿ ತಮಾಷೆಯಲ್ಲಿ ತೊಡಗಬಹುದೆಂಬ ನಿಯಮಗಳಿವೆ.

**೩) ಶಿಶು ಮೂಲ ಸಂಬೋಧನೆ:**

ಸಗರ ನಾಡಿನಲ್ಲಿ ಈ ಪದ್ಧತಿಯ ಪ್ರಕಾರ ಬಂಧುವನ್ನು ನೇರವಾಗಿ ಸಂಬೋಧಿಸದೇ ಇತರ ಬಂಧುಗಳ ಮೂಲಕ ಉಲ್ಲೇಖಿಸಲಾಗುವುದು. ತಾಯಿ ತಂದೆಗಳನ್ನು ಮಗುವಿನ ಹೆಸರಿನ ಮೂಲಕ ಸೂಚಿಸುವ ಪದ್ಧತಿ ಕಂಡು ಬರುತ್ತದೆ. ಇದನ್ನು ಶಿಶುಮೂಲ ಸಂಬೋಧನೆ ಎಂದು ಕರೆಯುತ್ತಾರೆ. ಉದಾ: ಹನುಮಂತನ ತಂದೆ ಇಲ್ಲವೇ ಲಕ್ಷ್ಮಿಯ ತಾಯಿ ಎಂದು ಸಂಬೋಧಿಸಿದ ಕ್ರಮವಿದೆ. ಅಲ್ಲದೇ ಪತ್ನಿಯಾದವಳು ತನ್ನ ಮಗುವಿನ ತಂದೆಯ ಬಗ್ಗೆ ಬೇರೆಯವರಲ್ಲಿ ಉಚ್ಚರಿಸುತ್ತಾಳೆ.

**೪.೨ ಕೌಟುಂಬಿಕ ಜೀವನ ಪದ್ಧತಿ:**

ಸಾಮಾಜೀಕರಣಗೊಳ್ಳಬೇಕಾದರೆ ಕುಟುಂಬದ ಪಾತ್ರ ಮಹತ್ವದ್ದಾಗಿರುತ್ತದೆ. ಕುಟುಂಬದ ಪರಿಸರದ ಮೇಲೆ ಆ ಮಗುವಿನ ಜೀವನ ವ್ಯಕ್ತಿತ್ವ ವಿಕಸನ ನಿರ್ಮಾಣವಾಗುತ್ತದೆ. ಆದ್ದರಿಂದ ಕುಟುಂಬವು ಸಾಮಾಜಿಕ ವ್ಯವಸ್ಥೆಯ ಕೇಂದ್ರ ಬಿಂದು. ಕುಟುಂಬವೆಂಬ ಘಟಕಗಳ ಆಧಾರದ ಮೇಲೆ ಈ ಸಾಮಾಜಿಕ ವ್ಯವಸ್ಥೆ ನಿಂತಿದೆ. ಎಲ್ಲಾ ಸಮಾಜಗಳಲ್ಲಿಯೂ ಸಮುದಾಯಗಳಲ್ಲಿಯೂ ಈ ಮಾತು ನಿಜ. ಅಂತೆಯೇ ಕುಟುಂಬ ಭಾರತೀಯ ಸಾಮಾಜಿಕ ವ್ಯವಸ್ಥೆಗೆ ಒತ್ತಾಸೆ ನೀಡಿರುವ ಒಂದು ಪ್ರಮುಖ ಸಾಮಾಜಿಕ ಸಂಸ್ಥೆಯಾಗಿದೆ. ಪರಿವರ್ತನೆಯ ದಾಳಿಯನ್ನು ಎದುರಿಸಿಯೂ ತಮ್ಮ ಅಸ್ತಿತ್ವವನ್ನು ಕಾಯ್ದುಕೊಂಡ ಸಂಸ್ಥೆ ಇದಾಗಿದೆ. ಬೇಡ ಸಮುದಾಯದಲ್ಲಿ ಕುಟುಂಬಕ್ಕೆ ಹೆಚ್ಚಿನ ಮಹತ್ವವಿದೆ. ಅದರಲ್ಲಿಯೂ ಸಗರನಾಡಿನ ಬೇಡರು ಅವಿಭಕ್ತ ಕುಟುಂಬಕ್ಕೆ ಹೆಚ್ಚಿನ ಒಲವನ್ನು ತೋರುವವರು. ಕೂಡಿ ಬಾಳಿದರೆ

ಮನೆಯು ಸ್ವರ್ಗವೆಂಬ ಭಾವನೆ ಈ ಸಮುದಾಯದಲ್ಲಿದೆ. ನಾವು, ನಮ್ಮವರು, ನಮ್ಮ ಕುಟುಂಬ, ರಕ್ತ ಸಂಬಂಧಕ್ಕೆ ಬೆಲೆ ಕೊಡುತ್ತಾರೆ. ಇಂದು ಆಧುನೀಕರಣ, ಜಾಗತೀಕರಣ, ಪಾಶ್ಚ್ಯಾತೀಕರಣದ ಪ್ರಭಾವಕ್ಕೆ ಬೇಡರ ಅವಿಭಕ್ತ ಕುಟುಂಬಗಳು ಒಳಗಾಗಿವೆ. ಆದರೂ ಕೂಡ ಇನ್ನೂ ಇವರಲ್ಲಿ ಕೂಡಿ ಬಾಳುವ ಆಸೆ ಇದೆ. ಸಗರನಾಡಿನ ಬೇಡರು ಸರಳ ಜೀವಿಗಳಾಗಿದ್ದು, ಸ್ವಾಭಿಮಾನ ಜೀವನವನ್ನು ಸಾಗಿಸುತ್ತಿದ್ದಾರೆ. ದೇಶ ಶ್ರೀಮಂತವಾದರೂ ಇವರು ಇನ್ನೂ ಬಡವರಾಗಿದ್ದಾರೆ. ಇವರಲ್ಲಿ ೨-೩ ತಲೆಮಾರಿನ ಜನರು ಒಂದೇ ಕುಟುಂಬದಲ್ಲಿ ವಾಸಿಸುತ್ತಿದ್ದಾರೆ. ಇದರ ಜೊತೆಗೆ ತಂದೆ ತಾಯಿ ಮತ್ತು ಮಕ್ಕಳು ಸೇರಿ ವಾಸಿಸುವ ಕುಟುಂಬಗಳು ಸಹ ಇವೆ. ಕುಟುಂಬದಲ್ಲಿ ಸದಸ್ಯರ ಸಂಖ್ಯೆ ಹೆಚ್ಚಾದಂತೆ ನಾವು ನಮ್ಮವರು ಎಂಬ ಭಾವನೆಯು ಬೆಳೆದು ಅದು ಪರಸ್ಪರ ರಕ್ಷಣೆಗೆ ಕಾರಣವಾಗಿದೆ. ಸಗರನಾಡಿನ ಬೇಡರ ಕುಟುಂಬದಲ್ಲಿ ಸಾಮಾನ್ಯವಾಗಿ ಯಜಮಾನನಿಗೆ ಪ್ರಾಮುಖ್ಯತೆ ಇದೆ. ಕುಟುಂಬದ ಸಮಸ್ತ ಕಾರ್ಯಗಳು ಈತನ ಅಣತಿಯಂತೆ ನಡೆಯುತ್ತವೆ. ಕುಟುಂಬದಲ್ಲಿ ಮಕ್ಕಳು ತಂದೆ-ತಾಯಿ ಮಾತುಗಳನ್ನು ಮೀರಿ ನಡೆಯುವುದು ತೀರ ವಿರಳ. ಹಾಗೆಯೇ ಪತ್ನಿಯೂ ಕೂಡ ಪತಿಯ ಬಯಕೆಯಂತೆ ನಡೆದುಕೊಳ್ಳುತ್ತಾಳೆ. ಇನ್ನೂ ಸಹ ಸಗರ ನಾಡಿನ ಕೆಲವು ಗ್ರಾಮಗಳಲ್ಲಿ ಬೇಡರ ಅವಿಭಕ್ತ ಕುಟುಂಬಗಳಿವೆ. ಶಹಾಪೂರ ಒಂದು ಗ್ರಾಮದಲ್ಲಿ ೮೦-೧೦೦ ಸದಸ್ಯರನ್ನೊಳಗೊಂಡ ಬೃಹತ್ ಅವಿಭಕ್ತ ಕುಟುಂಬವಿದೆ. ಹಾಗೆಯೇ ಸುರಪುರ ತಾಲೂಕಿನಲ್ಲಿ ಕಕ್ಕಸಗೇರಾ ಗ್ರಾಮದಲ್ಲಿಯೂ ಸುಮಾರು ೫೦-೬೦ ಸದಸ್ಯರನ್ನು ಒಳಗೊಂಡ ಅವಿಭಕ್ತ ಕುಟುಂಬವಿದೆ. ಹೀಗೆ ಸಗರನಾಡಿನ ಕೆಲವು ಗ್ರಾಮಗಳಲ್ಲಿ ಅವಿಭಕ್ತ ಕುಟುಂಬ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ. ಆದರೆ ಇತ್ತೀಚಿನ ದಿನಮಾನಗಳಲ್ಲಿ ನಾಗರೀಕರಣದ ಆಕರ್ಷಣೆಯಿಂದ ಮತ್ತು ಉದ್ಯೋಗಕ್ಕಾಗಿ ಶಿಕ್ಷಣಕ್ಕಾಗಿ ಅವಿಭಕ್ತ ಕುಟುಂಬಗಳು ವಿಘಟನೆಯಾಗುತ್ತಿರುವುದು ದುರದೃಷ್ಟಕರ.

**೪.೩ ವಿವಾಹ ಪದ್ಧತಿ:**

ವಿವಾಹವು ಪ್ರಾಥಮಿಕ ಸಾಮಾಜಿಕ ಸಂಸ್ಥೆಯಾಗಿದೆ. ಪುರುಷಾರ್ಥಗಳ ಸಾಧನೆಗಾಗಿ ವಿವಾಹದ ಮೂಲಕ ಗ್ರಹಸ್ಥಾಶ್ರಮವನ್ನು ಸ್ವೀಕರಿಸುವುದು ಹಿಂದೂಗಳಿಗೆ ಪವಿತ್ರವಾದ ಕಾರ್ಯವಾಗಿದೆ ಎಂಬ ನಂಬಿಕೆ ಇದೆ. ವಿವಾಹವು ಸಾರ್ವತ್ರಿಕವು ಕೂಡಾ. ಮನುಷ್ಯ ವಿವಿಧ ಬಯಕೆಗಳನ್ನು ಬೇಡಿಕೆಗಳನ್ನು ಹಾಗೂ ಆಸಕ್ತಿಗಳನ್ನು ಹೊಂದಿದ್ದಾನೆ. ಅವುಗಳ ಪೂರೈಕೆಗಾಗಿ ವಿವಾಹ ಎಂಬ ಸಂಸ್ಥೆ ಅಗತ್ಯ. ವಿವಾಹ ಸಂಸ್ಥೆಯೂ ರೂಪ, ವಯಸ್ಸು, ಜೀವನ ಸಂಗಾತಿಯ ಆಯ್ಕೆಯ ಕ್ರಮ, ಸಮಾರಂಭದ ಸ್ವರೂಪ, ವಿವಾಹ ವಿಚ್ಛೇದನೆ ಹಾಗೂ ಲೈಂಗಿಕ ಜೀವನಕ್ಕೆ ಸಂಬಂಧಿಸಿದ ನಿಯಮಗಳು ಇತ್ಯಾದಿ ಅಂಶಗಳು ಒಳಗೊಂಡಿದೆ. ಸಮಾಜದಿಂದ ಸಮಾಜಕ್ಕೆ ಜಾತಿಯಿಂದ ಜಾತಿಗೆ ಈ ಸಂಸ್ಥೆಯಲ್ಲಿ ಭಿನ್ನತೆ ಇದೆ. ಹಾಗೆಯೇ ಸಗರನಾಡಿನ ಬೇಡ ಜನಾಂಗದವರ ವಿವಾಹ ಪದ್ಧತಿಯೆ ಕೂಡಾ ವಿಭನ್ನತೆಯಿಂದ

ಕೂಡಿದೆ. ವೈಜ್ಞಾನಿಕವಾಗಿ ವಿವಾಹ ವೆಂದರೆ ಸ್ತ್ರೀ ಪುರುಷರ ಪರಸ್ಪರ ಒಪ್ಪಿಗೆಯಿಂದ ಲೈಂಗಿಕ ಬಯಕೆಯನ್ನು ಈಡೇರಿಸಿಕೊಳ್ಳುವುದಕ್ಕೋಸ್ಕರ ಸಮಾಜದಿಂದ ಒಪ್ಪಿಗೆ ಪಡೆದ ವ್ಯವಸ್ಥೆಯೇ ವಿವಾಹ ಎಂದು ಕರೆಯಬಹುದು. ಆದರೆ ಬೇಡ ಜನಾಂಗದವರಲ್ಲಿ ವಿವಾಹ ಎಂದರೆ ಜನ್ಮ ಜನ್ಮಗಳ ಪವಿತ್ರ ಸಂಬಂಧ ಎಂಬ ಭಾವನೆ ಇದೆ. ಈ ಮೊದಲು ಸಗರನಾಡಿನ ಕೆಲವು ಶ್ರೀಮಂತ ರಾಜಮನೆತನದವರು ಹೆಚ್ಚಾಗಿ ಬಹು ಪತ್ನಿತ್ವವನ್ನು ಮಾಡಿಕೊಳ್ಳುತ್ತಿದ್ದರು. ಆದರೆ ಪ್ರಸ್ತುತ ದಿನಮಾನಗಳಲ್ಲಿ ಈ ಪದ್ಧತಿ ನಶಿಸಿ ಹೋಗುತ್ತಿದೆ. ಇದು ಒಳ್ಳೆಯ ಬೆಳವಣಿಗೆಯು ಕೂಡಾ. ಸಗರನಾಡಿನ ಬೇಡರಲ್ಲಿ ವಿವಾಹದ ನಿಯಮಗಳಿವೆ. ಆ ನಿಯಮಗಳೆಂದರೆ,

**ಅಗಮ್ಯ ಗಮನ ನಿಷೇಧ:** 'ಅಂದರೆ ಅತ್ಯಂತ ಸಮೀಪ ರಕ್ತ ಸಂಬಂಧಿಗಳ ನಡುವೆ ವೈವಾಹಿಕ ಸಂಬಂಧವಿರಕೂಡದು ಎಂಬ ನಿಷೇಧ. ಅಂದರೆ ದೊಡ್ಡಪ್ಪನ ಮಕ್ಕಳು, ಚಿಕ್ಕಪ್ಪನ ಮಕ್ಕಳು ಇವರ ನಡುವೆ ಎಂದೂ ವಿವಾಹ ಸಂಬಂಧವಿರಕೂಡದು ಎಂಬ ಭಾವನೆ ಇದೆ. ಅಲ್ಲದೇ ಒಂದೇ ಬೆಡಿಗಿಗೆ ಸೇರಿದ ಸ್ತ್ರೀ ಪುರುಷರು ಸಹೋದರ ಸಹೋದರಿಯುರಾಗಿರುತ್ತಾರೆ. ಆದ್ದರಿಂದ ಒಂದೇ ಬೆಡಗಿದೆ ಸೇರಿದವರು ವಿವಾಹವಾಗುವಂತಿಲ್ಲ.'[೨]

**ಅಂತರ್ ಜಾತಿ ವಿವಾಹ ನಿಷೇಧ:** ಸಗರನಾಡಿನ ಬೇಡರಲ್ಲಿ ಅಂತರಜಾತಿ ವಿವಾಹಕ್ಕೆ ಆಸ್ಪದವಿಲ್ಲ. ಒಂದು ವೇಳೆ ವಿವಾಹವಾದರೆ ಆ ವ್ಯಕ್ತಿಗಳನ್ನು ಜಾತಿಯಿಂದ ಹೊರಗಿಡಲಾಗುತ್ತದೆ. ಒಂದೇ ಜಾತಿಗೆ ಸೇರಿದವರು ವಿವಾಹವಾಗಬೇಕು ಎನ್ನುವ ಸಾಂಪ್ರದಾಯಿಕ ನಿಯಮ ಇನ್ನೂ ಇವರಲ್ಲಿ ಇದೆ. ಸಗರನಾಡಿನ ಬೇಡರು ವಿವಾಹಗಳನ್ನು ಸಂಸ್ಕಾರಗಳ ಮುಖಾಂತರ ನಿರವೇರಿಸಿಕೊಳ್ಳುತ್ತಾರೆ. ಈಗಲೂ ಕೂಡ ಹಿಂದೂ ವಿವಾಹದ ಧಾರ್ಮಿಕ ಕ್ರಿಯಾ ವಿಧಿಗಳು ಇವರಲ್ಲಿ ಇವೆ. ಅದನ್ನು ಚಾಚೂ ತಪ್ಪದೇ ಪಾಲಿಸುತ್ತಾರೆ. ಆ ಧಾರ್ಮಿಕ ಕ್ರಿಯಾ ವಿಧಿಗಳೆಂದರೆ,

**ವಾಗ್ದಾನ:** 'ಅಂದರೆ ವಧು-ವರರ ಗೋತ್ರ, ಪ್ರವರ, ಪಂಗಡ ಹಾಗೂ ಜಾತಕ ಇತ್ಯಾದಿ ಅಂಶಗಳನ್ನೊಳಗೊಂಡ ಸರಿಯಾದದ್ದನ್ನು ಖಚಿತಪಡಿಸಿಕೊಳ್ಳುವುದಾಗಿದೆ. ನಂತರ ವಧುವಿನ ತಂದೆ ಕನ್ಯೆಯನ್ನು ಧಾರೆಯೆರೆದು ಕೊಡುತ್ತಾನೆ. ಈ ಪದ್ಧತಿ ಇನ್ನೂ ಬೇಡ ಜನಾಂಗದಲ್ಲಿದೆ.

**ಕನ್ಯಾದಾನ:** ಕನ್ಯೆಯ ತಂದೆ ವರನಿಗೆ ಅಗ್ನಿಸಾಕ್ಷಿಯಾಗಿ ಧಾರೆಯೆರೆದುಕೊಡುವ ಪದ್ಧತಿಯೇ ಕನ್ಯಾದಾನವಾಗಿದೆ. ಇಲ್ಲಿಂದ ಕನ್ಯೆಯ ಜವಾಬ್ದಾರಿಯನ್ನು ವರನಿಗೆ ವಹಿಸಿಕೊಡುವ ವಿಧಿಯಾಗಿದೆ.'[೩]

**ಮಾಂಗಲ್ಯ ಧಾರಣೆ:** ಮಾಂಗಲ್ಯಧಾರಣೆ ಪತಿ-ಪತ್ನಿಯ ಬಂಧನದ ಸಂಕೇತವಾಗಿದೆ. ವಿವಾಹ ಸಂದರ್ಭದಲ್ಲಿ ವರನು ವಧುವಿಗೆ ತಾಳಿಯನ್ನು ಕಟ್ಟುವುದೇ ಈ ವಿಧಿಯಾಗಿದೆ.

ಮಾಂಗಲ್ಯ ದಲ್ಲಿರುವ ಒಂದು ಚಂದ್ರಾಕೃತಿಯ ಬಂಗಾರದ ತಾಳಿ ವಧುವಿನ ಕಡೆಯವರದ್ದಾಗಿದ್ದರೆ, ಮತ್ತೊಂದು ವರನ ಕಡೆಯವರದ್ದಾಗಿರುತ್ತದೆ. ಆ ಎರಡೂ ತಾಳಿಗಳಲ್ಲಿ ಅವರವರ ಮನೆ ದೇವರ ಚಿನ್ಹೆಗಳು ಇರುತ್ತದೆ. ಇದು ಇವರ ಸಂಪ್ರದಾಯ.

**ಸಪ್ತಪದಿ:** 'ಸಪ್ತಪದಿ ಎಂಬುದು ಹಿಂದೂಗಳ ವಿವಾಹಗಳಲ್ಲಿ ನಡೆಯುವ ವಿಶೇಷ ಸಂಸ್ಕಾರ ವಾಗಿದೆ. ಬೇಡರು ಹಿಂದೂಗಳಾಗಿರುವುದರಿಂದ ಇವರಲ್ಲಿ ಸಾಮಾನ್ಯವಾಗಿ ಈ ಪದ್ಧತಿ ಇದೆ. ಸಪ್ತ ಎಂದರೆ ಏಳು ಸಂಖ್ಯೆ ಪದಿ ಎಂದರೆ ಸುತ್ತುವುದು ಅಥವಾ ಏಳು ಹೆಜ್ಜೆಗಳನ್ನು ಹಾಕುವುದು ಎಂದರ್ಥ. ಒಂದೊಂದು ಹೆಜ್ಜೆಗೂ ಒಂದೊಂದು ಅರ್ಥವಿದೆ. ಇದು ಒಂದು ಪವಿತ್ರವಾದದ್ದು ಎಂಬ ಭಾವನೆ ಇದೆ.'[೪]

ಈ ತೆರನಾಗಿ ಅನುಸರಿಸುವ ಹತ್ತು ಹಲವಾರು ವಿಧಿ ವಿಧಾನಗಳು ಇನ್ನೂ ಸಹ ಸಗರನಾಡಿನ ಬೇಡ ಸಮುದಾಯದವರಲ್ಲಿ ಕಾಣಬಹುದು. ವಿವಾಹ ಇವರಿಗೆ ಪವಿತ್ರ ಬಂಧನದಂತೆ. ಪತಿಯನ್ನು ದೇವರಂತೆ ಪೂಜಿಸುತ್ತಾರೆ. ಆತನ ಅಣತೆಯಂತೆ ನಡೆದುಕೊಳ್ಳುತ್ತಾರೆ. ಆದರೆ ಇತ್ತೀಚಿನ ದಿನಮಾನಗಳಲ್ಲಿ ವಿವಾಹದ ಸಂಸ್ಕಾರ ವಿಧಿ ವಿಧಾನಗಳು ಸ್ವಲ್ಪ ಮಟ್ಟಿಗೆ ನಶಿಸಿ ಹೋಗುತ್ತಿರುವುದು ದುರದೃಷ್ಟಕರ.

### ೪.೪ ಗೃಹ ನಿರ್ಮಾಣ:

ಹಕ್ಕಿಗೆ ಗೂಡಿನ ಆಸರೆ ಹೇಗೊ ಹಾಗೆ ಮಾನವನಿಗೆ ಮನೆ ಆಸರೆ ಇರಲೇ ಬೇಕು. ಈ ಮೊದಲು ಆದಿ ಮಾನವರು ಅಂದರೆ ಬೇಡರು ಕಾಡುಗಳಲ್ಲಿ ಬೆಟ್ಟ ಗುಡ್ಡಗಳಲ್ಲಿ ಬಿದುರಿನ ಮತ್ತು ಮರದ ಕಟ್ಟಿಗೆಗಳಿಂದ ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಕಾಲ ಬದಲಾದಂತೆ ಮನೆ ನಿರ್ಮಾಣಕ್ಕೆ ಹೆಚ್ಚಿನ ಪಾಮುಖ್ಯತೆಯನ್ನು ಕೊಟ್ಟು ವಾಸ್ತು ಪ್ರಕಾರವಾಗಿ ಮನೆಯನ್ನು ಕಟ್ಟಿಕೊಳ್ಳುತ್ತಿದ್ದಾರೆ. ಈ ಮೊದಲು ಬೇಡರಿಗೆ ವಾಸ್ತುವಿನ ಬಗ್ಗೆ ಅರಿವು, ಆಸಕ್ತಿ ಇರಲಿಲ್ಲ. ಆದರೆ ತಮ್ಮ ಮನಶಾಂತಿಗಾಗಿ ಇಂದು ಎಲ್ಲರಂತೆ ಪ್ರತಿಯೊಂದು ಕೋಣೆ, ಅಡುಗೆ ಮನೆ, ಸ್ನಾನದ ಕೋಣೆ ನಿರ್ಮಾಣ ಮಾಡುವಾಗ ಮೊದಲು ಜ್ಯೋತಿಷ್ಯವನ್ನು ಕೇಳಿಕೊಂಡು ಮನೆಯನ್ನು ಕಟ್ಟುತ್ತಿದ್ದಾರೆ. ಬಡವರು ಜಂತಿ ಮಣ್ಣಿನ ಮನೆಗಳನ್ನು ಕಟ್ಟಿಕೊಂಡರೆ ಶ್ರೀಮಂತರು ಕಾಂಕ್ರೆಟ್ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ. ಸಗರನಾಡಿನ ಬೇಡರ ಮನೆಗಳು ಪೂರ್ವ–ಪಶ್ಚಿಮ ಮತ್ತು ಉತ್ತರ ದಿಕ್ಕುಗಳಿಗೆ ಮುಖಮಾಡಿದ ಬಾಗಿಲುಗಳನ್ನು ಹೊಂದಿವೆ. ಮನೆ ಕಟ್ಟುವ ಪ್ರಾರಂಭದಲ್ಲಿ ಜಾಗ ಅಳತೆ ಮಾಡಿಕೊಂಡು ಆಯ ನಿರ್ಧರಿಸಿ ಬುನಾದಿಯನ್ನು ಹಾಕುತ್ತಾರೆ. ಮನೆ ಒಳಗೆ ಅರ್ಧ ಭಾಗ ದನ–ಕರುಗಳನ್ನು ಕಟ್ಟುವ ಕೋಣೆಗಳಿರುತ್ತವೆ. ಮತ್ತು ಸಗರನಾಡಿನ ಬೇಡರು ತಿರುಪತಿ ತಿಮ್ಮಪ್ಪನ ಭಕ್ತರಾಗಿರುವುದರಿಂದ ಗುರುವಾರ, ಶುಕ್ರವಾರ, ಶನಿವಾರ ಮನೆಯಲ್ಲಿ ಮಾಂಸಾಹಾರವನ್ನು ಮಾಡಿ ಸೇವಿಸುವುದಿಲ್ಲ. ಮನೆಯನ್ನು ಕಟ್ಟುವಾಗ ಯಾವುದೇ ಅಶುಭ ನಡೆಯದಿರಲೆಂದು

ಅನೇಕ ಆಚರಣೆಗಳನ್ನು ಮಾಡುತ್ತಾರೆ. ಗುದ್ದಲಿ ಪೂಜೆ, ಬಾಗಿಲ ಪೂಜೆಯನ್ನು ಭಯ-ಭಕ್ತಿಯಿಂದ ಮಾಡುತ್ತಾರೆ. ಮನೆಯ ಮೇಲ್ಛಾವಣಿ ಅಂದರೆ ಛತ್ತನ್ನು ಹಾಕುವಾಗ ಗೌಂಡಿಗಳಿಗೆ ಕೆಲಸಗಾರರಿಗೆ ಊಟವನ್ನು ಹಾಕಿಸುತ್ತಾರೆ. ಇನ್ನು ಸಗರನಾಡಿನ ಜೇವರ್ಗಿಯಲ್ಲಿ ಭೂಮಿ ಕೆಳಗಡೆ ಪಾಟಿಕಲ್ಲುಗಳು ಸಿಗುತ್ತವೆ. ಇಲ್ಲಿ ಅತಿ ಹೆಚ್ಚಾಗಿ ಪಾಟಿಕಲ್ಲುಗಳ ಗಣಿಗಾರಿಕೆ ನಡೆಯುತ್ತದೆ. ಆದ್ದರಿಂದ ಜೇವರ್ಗಿ ತಾಲೂಕಿನ ಸುತ್ತಮುತ್ತಲ ಹಳ್ಳಿಗಳ ಮನೆಗಳನ್ನು ಕಟ್ಟುವಾಗ ಬುನಾದಿಯಿಂದ ಹಿಡಿದುಕೊಂಡು ಮೇಲ್ಛಾವಣಿವರೆಗೆ ಈ ವಿಶೇಷ ಪಾಟಿಕಲ್ಲುಗಳನ್ನು ಉಪಯೋಗಿಸುತ್ತಾರೆ. ಇದು ಇಲ್ಲಿನ ವಿಶೇಷವೂ ಕೂಡಾ. ಎಷ್ಟೇ ಮಳೆ ಗಾಳಿ ಬಂದರೂ ಈ ಮನೆಗಳಿಗೆ ಯಾವುದೇ ತೊಂದರೆಯಾಗುವುದಿಲ್ಲ. ಮಲೆನಾಡಿನ ಪ್ರದೇಶಗಳಲ್ಲಿ ಹಂಚಿನ ಮನೆಗಳು ಹೇಗೆ ನಿರ್ಮಾಣವಾಗಿರುತ್ತವೆಯೋ ಹಾಗೇ ಈ ಪಾಟಿಕಲ್ಲುಗಳ ಮನೆಗಳು ನಿರ್ಮಾಣವಾಗಿರುತ್ತವೆ. ಜಂತಿ ಮತ್ತು ಮಣ್ಣಿನ ಮೇಲ್ಛಾವಣಿಯನ್ನು ಹೊಂದಿದವರು ಇಲ್ಲಿ ಸಿಗುವ ಸವಳು ಮಣ್ಣನ್ನು ಹಾಕುತ್ತಾರೆ. ಕಾರಣ ಮಳೆ ಬಂದಾಗ ನೀರು ಪೊನ್ನೋಳಗಿ ಮೂಲಕ ಸರಾಗವಾಗಿ ಹರಿಯುತ್ತವೆ. ಇನ್ನೊಂದು ವಿಶೇಷವೆಂದರೆ ಜೇವರ್ಗಿ ತಾಲೂಕಿನ ಬೇಡರ ಮನೆ ದೇವರು ಮಲ್ಲಯ್ಯ ಸ್ವಾಮಿ. ಆದಕಾರಣ ಇವರು ತಮ್ಮ ಮನೆಗಳಲ್ಲಿ ರವಿವಾರದಂದು ಮಾಂಸ ಆಹಾರವನ್ನು ಸೇವನೆ ಮಾಡುವುದಿಲ್ಲ. ಇದು ಸುರಪುರ ಶಹಾಪುರ ಮತ್ತು ಜೇವರ್ಗಿ ಬೇಡರ ನಡುವೆ ಇರುವ ವಿಶೇಷ ವ್ಯತ್ಯಾಸ. ಸಗರನಾಡಿನ ಬೇಡರು ಗೋಕುಲಾಷ್ಟಮಿ, ದೀಪಾವಳಿ ಹಾಗೂ ಶ್ರೀ ವೇಣುಗೋಪಾಲ ಸ್ವಾಮಿ ಜಾತ್ರೆಯ ಅಂಗವಾಗಿ ಮನೆಗೆ ಸುಣ್ಣ ಬಣ್ಣ ಮಾಡಿ ಮನೆಯನ್ನು ಅಲಂಕರಿಸುತ್ತಾರೆ. ಅಮವಾಸ್ಯೆ ಹುಣ್ಣಿಮೆಯಂದು ಮನೆಗಳನ್ನು ನೀರಿನಿಂದ ತೊಳೆದು ಸ್ವಚ್ಛವಾಗಿ ಇಡುತ್ತಾರೆ. ಬೇಡರು ತಮ್ಮ ತಮ್ಮ ಮನೆಗಳಿಗೆ ತಮ್ಮ ದೇವರ ಹೆಸರುಗಳನ್ನು ಇಡುವುದು ಮತ್ತೊಂದು ವಿಶೇಷ. ಈ ರೀತಿಯಾಗಿ ಸಗರನಾಡಿನ ಬೇಡರು ಮನೆ ನಿರ್ಮಾಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಡುತ್ತಿರುವುದು ಇವರ ಬದಲಾವಣೆಗೆ ಸಾಕ್ಷಿ ಎಂದು ಹೇಳಬಹುದು.

**ಮನೆ ಶಾಂತಿ ಹಾಗೂ ಗೃಹ ಪ್ರವೇಶ:** ಪ್ರಸ್ತುತ ದಿನಮಾನಗಳಲ್ಲಿ ಆಧುನಿಕತೆಗೆ ಒಳಗಾಗಿರುವ ಬೇಡರು ಮನೆಶಾಂತಿ ಅಥವಾ ಗೃಹ ಪ್ರವೇಶಕ್ಕೆ ಹೆಚ್ಚಿನ ಆಸಕ್ತಿಯನ್ನು ತೋರಿಸುತ್ತಿದ್ದಾರೆ. ಬಡವರಾದವರು ತಕ್ಕಮಟ್ಟಿಗೆ ಸರಳವಾಗಿ ಗೃಹ ಪ್ರವೇಶವನ್ನು ಮಾಡಿದರೆ ಶ್ರೀಮಂತರಾದವರು ಗೃಹ ಪ್ರವೇಶಕ್ಕಾಗಿ ಜನರನ್ನು ತಮ್ಮ ಸಂಬಂಧಿಕರನ್ನು ಕರೆದು ವಿಜೃಂಭಣೆಯಿಂದ ಅದ್ದೂರಿಯಾಗಿ ವಿವಿಧ ಭೋಜನಗಳನ್ನು ಮಾಡಿಸಿ ಮನೆಗೆ ವಿದ್ಯುತ್ ದೀಪದ ಅಲಂಕಾರ ಮಾಡಿ ಈ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಗೃಹ ಪ್ರವೇಶ ಮಾಡುವಾಗ ಮೊದಲು ಆಕಳನ್ನು (ಹಸು) ಮೊದಲು ಮನೆಯೊಳಗೆ ತಂದು ಅಲ್ಲಿಯ ಆಹಾರವನ್ನು ನೀಡುತ್ತಾರೆ. ಅಂದರೆ ಆಕಳು ಮನೆಯನ್ನು ಪ್ರವೇಶಿಸಿದರೆ ಮೂರು ಕೋಟಿ ದೇವಾನು ದೇವತೆಗಳು ಮನೆಯನ್ನು ಪ್ರವೇಶಿಸಿದಂತೆ ಎಂಬ ನಂಬಿಕೆ ಈ ಸಗರನಾಡಿನ

ಬೇಡ ಸಮುದಾಯದವರಲ್ಲಿ ಇದೆ. ಅಲ್ಲದೆ ಮನೆಗೆ ಗೋ ಮೂತ್ರವನ್ನು ಸಿಂಪಡಿಸಿ ಶುದ್ಧೀಕರಿಸುತ್ತಾರೆ. ಇದಾದನಂತರ ಒಲೆಯ ಪೂಜೆ ಮಾಡಿ ಹಾಲು ಉಕ್ಕಿಸಿ ಬಂಧು ಬಳಗದವರಿಗೆ ಸ್ನೇಹಿತರಿಗೆ ಹಿತೈಷಿಗಳಿಗೆ ಊಟವನ್ನು ಹಾಕಿಸುತ್ತಾರೆ. ಮನೆ ದೇವರನ್ನು ಪೂಜಿಸಿಕೊಂಡು ಬರುವ ಪದ್ಧತಿ ಇಂತಹ ಸಂದರ್ಭದಲ್ಲಿ ಇರುತ್ತದೆ. ಮನೆಶಾಂತಿ ಮಾಡುವ ಸಮಯದಲ್ಲಿ ಸತ್ಯನಾರಾಯಣ ಪೂಜೆ ಕಥೆ ಹೇಳಿಸುವುದು, ವರಮಹಾಲಕ್ಷ್ಮಿ ಪೂಜೆಯನ್ನು ಮಾಡಿಸುವುದು ವಾಡಿಕೆಯಾಗಿದೆ. ಅಲ್ಲದೆ ಮನೆಗೆ ಸಂಬಂಧಿಸಿದಂತೆ ಯಾವುದನ್ನು ಮಾಡಬೇಕು ಯಾವುದನ್ನು ಮಾಡಬಾರದು ಒಳ್ಳೆಯದು ಕೆಟ್ಟದ್ದು ಎಂಬ ಪದ್ಧತಿಗಳು ಇವೆ. ಈ ಅಂಶಗಳನ್ನು ನಾವು ನಿರ್ಬಂಧಗಳು ಹಾಗೂ ವಿಧಿ ನಿಷೇಧಗಳು ಎಂದು ಕರೆಯಬಹುದು.

ಉದಾಹರಣೆಗೆ:

* ಮದುವೆಯಾದ ಒಂದು ವರ್ಷದ ಒಳಗಡೆ ಹೊಸ ಮನೆಗಾಗಿ ಬುನಾದಿಯನ್ನು ಹಾಕಬಾರದು.
* ಮನೆಯಲ್ಲಿ ಯಾರಾದರೂ ರಕ್ತ ಸಂಬಂಧಿಗಳು ಗರ್ಭವತಿಯಾಗಿದ್ದರೆ ಹೊಸ ಒಲೆಯನ್ನು ಹಾಕಬಾರದು.
* ಮನೆಯಲ್ಲಿ ಮೂರು ಒಲೆಗಳನ್ನು ಹೂಡಬಾರದು.
* ಆಂಜನೇಯ ಸ್ವಾಮಿ ದೇವರ ದಿಕ್ಕಿಗೆ ಬಾಗಿಲನ್ನು ಇಡಬಾರದು.
* ಹೊಸ್ತಿಲಿನ ಮೇಲೆ ಕೂಡಬಾರದು.
* ದೇವರ ಗುಡಿ ಅಥವಾ ಮಸದಿ-ಮದರಸಾ ಸಮೀಪದಲ್ಲಿ ಮನೆಯನ್ನು ಕಟ್ಟಬಾರದು.
* ಯಾರಾದರೂ ನಿಧನರಾದರೆ ಹೊರಗಡೆ ಸ್ನಾನ ಮಾಡಿ ಮನೆ ಪ್ರವೇಶ ಮಾಡಿ ದೇವರ ದರ್ಶನ ಮಾಡಬೇಕು.
* ಒಲೆ ಹೆಚ್ಚಾಗಿ ಉರಿದರೆ ಬೀಗರು ಅಥವಾ ಸಂಬಂಧಿಕರು ಬರುತ್ತಾರೆ ಎಂಬ ನಂಬಿಕೆ.
* ಮನೆಯಲ್ಲಿ ಇರುವ ಸಂಬಂಧಿಕರು ಬೇರೆ ಊರಿಗೆ ಹೋಗುವ ಸಂದರ್ಭದಲ್ಲಿ ಕಸವನ್ನು ಗೂಡಿಸಬಾರದು.
* ಮನೆಗೂಡಿಸುವ ಕಸಬಾರಿಗೆಯಿಂದ ಯಾರನ್ನೂ ಹೊಡೆಯಬಾರದು.
* ಹೊಸ್ತಿಲಿಗೆ ದಿನ ಬೆಳಿಗ್ಗೆ ಕುಂಕುಮ ಅರಿಷಿನ ಹಚ್ಚಿ ರಂಗೋಲಿ ಹಾಕಬೇಕು.
* ಮನೆ ಮುಂದೆ ತುಳಸಿ ಕಟ್ಟೆಯಲ್ಲಿ ತುಳಸಿ ಗಿಡ ನೆಡುವುದು.

* ದಿನ ಬೆಳಿಗ್ಗೆ ಮನೆಗೆ ಲೋಬಾನ ಹಾಕುವುದು.

* ಒಂದು ವೇಳೆ ಮನೆಯ ಮುಂಬಾಗಿಲಿಗೆ ಕಟ್ಟಿಗೆಯ ಕುದುರೆಗಳನ್ನು ಮಾಡಿಸಿದರೆ ಅದು ಮುಕ್ಕಾಗದಂತೆ ನೋಡಿಕೊಳ್ಳುವುದು.

ಹೀಗೆ ಹತ್ತು ಹಲವಾರು ಮನೆಗೆ ಸಂಬಂಧಿಸಿದ ವಿಧಿ ನಿಷೇಧಗಳು ಸಗರನಾಡಿನ ಬೇಡ ಸಮುದಾಯಗಳಲ್ಲಿ ಈಗಲೂ ಇವೆ. ಕಾಲ ಬದಲಾದರೂ ಪದ್ಧತಿಗಳು ಮಾತ್ರ ಇನ್ನೂ ಬದಲಾಗಿಲ್ಲಾ. ಇದು ಭಾರತೀಯ ಸಂಸ್ಕೃತಿಯ ಜೀವಂತಿಕೆಗೆ ಉದಾಹರಣೆ ಎಂದು ಹೇಳಬಹುದು.

**೪.೫ ಆಹಾರ ಸೇವನೆಯ ಪದ್ಧತಿ:**

ಈ ದೇಶದಲ್ಲಿ ಒಂದೊಂದು ಜಾತಿಗೆ ಧರ್ಮಕ್ಕೂ, ಜನಾಂಗಕ್ಕೂ ತನ್ನದೇಯಾದ ಆಹಾರ ಸೇವನೆಯ ಪದ್ಧತಿಗಳಿವೆ. ಹಾಗೆಯೇ ಸಗರನಾಡಿನ ಬೇಡರಿಗೂ ಆಹಾರ ಸೇವನೆಯಲ್ಲಿ ಪದ್ಧತಿಗಳಿವೆ. ಒಂದು ಅಣುವಿನಿಂದ ಪ್ರಾಣಿ ಪಕ್ಷಿ ಕ್ರಿಮಿ ಕೀಟ ಮನುಷ್ಯನಿಗೆ ಆಹಾರ ಬೇಕು. ಆಹಾರವಿಲ್ಲದೇ ಮನುಷ್ಯ ಬದುಕುವುದಕ್ಕೆ ಸಾಧ್ಯವೇ ಇಲ್ಲ. ಬೇಡರು ಈ ಮೊದಲು ಕಾಡು ಅರಣ್ಯ ಪ್ರದೇಶಗಳಲ್ಲಿ ವಾಸವಾಗಿದ್ದರಿಂದ ಗಡ್ಡೆ-ಗೆಣಸುಗಳನ್ನು ತಿಂದು ಬದುಕುತ್ತಿದ್ದರು. ಜೊತೆಗೆ ಬೇಟೆಯಾಡಿ ಪ್ರಾಣಿ ಪಕ್ಷಿಗಳನ್ನು ಸೇವನೆ ಮಾಡುತ್ತಿದ್ದರು. ಆದರೆ ಇಂದು ಆಧುನಿಕರಣಕ್ಕೆ ಒಗ್ಗಿಕೊಂಡಿರುವ ಬೇಡರು ಆಧುನಿಕ ಶೈಲಿಯಲ್ಲಿ ತಮ್ಮ ಆಹಾರ ಪದ್ಧತಿಯನ್ನು ರೂಪಿಸಿಕೊಂಡಿದ್ದಾರೆ. ಆಹಾರ ಸೇವನೆಯ ಶೈಲಿ ಬೇರೆಯಾದರೂ ಆಹಾರ ಪದಾರ್ಥಗಳು ಬದಲಾವಣೆ ಆಗಿಲ್ಲಾ. ಈಗಲೂ ಕೂಡ ಸಗರನಾಡಿನ ಶಹಾಪುರ, ಸುರಪುರ, ಜೇವರ್ಗಿಗಳಲ್ಲಿ ಕೌಜುಗ, ಬುರಲಿ, ಕಾಡು ಹಂದಿ, ಚಿಗರೆಗಳನ್ನು ಬೇಟೆಯಾಡಿ ಮನೆಗೆ ತಂದು ಎಲ್ಲರೂ ಹಂಚಿಕೊಂಡು ತಿನ್ನುತ್ತಾರೆ. ಆದರೆ ಇಂದು ಬೇಟೆ ಪದ್ಧತಿ ನಿಷೇಧವಿರುವುದರಿಂದ ಬೇಟೆ ಪದ್ಧತಿಯನ್ನು ಬಿಟ್ಟಿದ್ದಾರೆ. ಜೊತೆಗೆ ಧವಸ ಧಾನ್ಯಗಳಾದ ಅಕ್ಕಿ, ಗೋದಿ, ಜೋಳ, ಸಜ್ಜೆರೊಟ್ಟಿ ಇತ್ಯಾದಿ ಆಹಾರವನ್ನು ದಿನನಿತ್ಯ ಸೇವಿಸುತ್ತಾರೆ. ಶ್ರೀಮಂತರು ಗ್ಯಾಸಿನ ಮೂಲಕ ಕುಕ್ಕರಿನಿಂದ ಬೇಯಿಸಿಕೊಂಡು ತಿನ್ನುತ್ತಿದ್ದಾರೆ. ಬಡವರಾದವರು ಒಲೆಗಳ ಮೂಲಕ ಬೇಯಿಸಿಕೊಂಡು ತಿನ್ನುತ್ತಿದ್ದಾರೆ. ಜೇವರ್ಗಿ ತಾಲೂಕಿನ ಕೆಲವು ಗ್ರಾಮಗಳಲ್ಲಿರುವ ಬೇಡರ ಮನೆಯ ದೇವರು ಮಲ್ಲಯ್ಯ ಆಗಿರುವುದರಿಂದ ಮಲ್ಲಯ್ಯನ ವಾರ ರವಿವಾರದಂದು ಮಾಂಸ ಆಹಾರವನ್ನು ಮಾಡುವುದಿಲ್ಲ. ಉಳಿದ ಸೋಮವಾರದಿಂದ ಶನಿವಾರದವರೆಗೆ ಮಾಂಸ ಆಹಾರವನ್ನು ಸೇವನೆ ಮಾಡುತ್ತಾರೆ. ಆದರೆ ಸುರಪುರ ಶಹಾಪುರದ ಬೇಡರ ಮನೆಯ ದೇವರು ಶ್ರೀ ತಿರುಪತಿ ತಿಮ್ಮಪ್ಪನಾದ ಕಾರಣ ಶುಕ್ರವಾರ ಶನಿವಾರದಂದು ಮಾಂಸ ಅಹಾರವನ್ನು ಸೇವನೆ ಮಾಡುಷ್ಪದಿಲ್ಲ. ಕೆಲವು ವಿಶೇಷ

ಸಮಯದಲ್ಲಿ ಬೇಡರ ಮನೆಗೆ ಸಂಬಂಧಿಕರು ಅತಿಥಿಗಳು ಬಂದಾಗ ಮೇಕೆ, ಚಿಗರೆ, ಕೋಳಿ ಮಾಂಸದ ಅಡುಗೆ ಮಾಡಿ ಊಟವನ್ನು ಮಾಡಿಸುತ್ತಾರೆ. ಈ ನಾಡಿನಲ್ಲಿ ಅತಿಥಿಗಳಿಗೆ ಮಾಂಸದ ಊಟವನ್ನು ಮಾಡಿಸಿದರೆ ಬಂದ ಅತಿಥಿಗಳಿಗೆ ಗೌರವ ಕೊಟ್ಟಂತೆ ಎಂಬ ಭಾವನೆ ಇದೆ. ಬಡವರಾದವರು ತಕ್ಕ ಮಟ್ಟಿಗೆ ಸರಳ ಊಟ ಉಪಚಾರವನ್ನು ಮಾಡಿಸಿದರೆ ಶ್ರೀಮಂತ ಬೇಡ ಕುಟುಂಬಗಳು ವಿಶೇಷವಾದ ಮೃಷ್ಟಾನ್ನ ಭೋಜನವನ್ನು ಮಾಡಿಸುತ್ತಾರೆ. ಸಗರನಾಡಿನ ಬೇಡ ನಾಯಕರ ಕುಟುಂಬಗಳಲ್ಲಿ ಯಾರಾದರೂ ತೀರಿಕೊಂಡರೆ, ತೀರಿಕೊಂಡ ೩ ದಿನಗಳ ನಂತರ ಮರಣಹೊಂದಿದವರ ಪುಣ್ಯ ತಿಥಿಯನ್ನು ಮಾಡಿ ಮಾಂಸದ ಊಟವನ್ನು ಮಾಡಿಸುತ್ತಾರೆ. ನಂತರ ೧೧ ಮತ್ತು ೧೩ನೇ ದಿನಕ್ಕೆ ಸಂಬಂಧಿಕರನ್ನು ಸ್ನೇಹಿತರನ್ನು ಕರೆದು ತಿಥಿ ಅಥವಾ ಲೋಬಾನ ಹಾಕುವುದರ ಮೂಲಕ ಮಾಂಸದ ಊಟವನ್ನು ಮಾಡಿಸುತ್ತಾರೆ. ಸಗರನಾಡಿನ ಬೇಡರಿಗೆ ಪ್ರಿಯವಾದ ಇಷ್ಟವಾದ ಮಾಂಸದ ಊಟವೆಂದರೆ ಚಿಗರೆ, ಕೌಜುಗಾ, ಬುರಲಿ, ಏದು, ಮತ್ತು ಕಾಡುಹಂದಿ ಮಾಂಸ ಎಂದು ಹೇಳಬಹುದು. ಕೇವಲ ಮಾಂಸದ ಊಟ ಮಾತ್ರವಲ್ಲ ಸಸ್ಯ ಆಹಾರವನ್ನು ಮಾಡುತ್ತಾರೆ. ದಿನನಿತ್ಯ ಹಾಲಿನಿಂದ ಚಹಾ ಅಥವಾ ಕಾಫಿ ಮಾಡಿಕೊಂಡು ಕುಡಿಯುತ್ತಾರೆ. ಬೇಸಿಗೆಯ ಸಮಯದಲ್ಲಿ ಮೊಸರನ್ನ ಊಟ ಮಾಡುವುದು ಮತ್ತು ಮಜ್ಜಿಗೆಯನ್ನು ಕುಡಿಯುವುದು ಸರ್ವೆ ಸಾಮಾನ್ಯ ಹಾಗೂ ಸಗರನಾಡಿನಲ್ಲಿ ಕೃಷ್ಣೆ ಹಾಗೂ ಭೀಮಾ ನದಿಗಳು ಇರುವುದರಿಂದ ಮೀನುಗಾರರು ಮಾರಾಟಕ್ಕೆ ತಂದಿರುವ ವಿವಿಧ ರೀತಿಯ ಮೀನುಗಳನ್ನು ಬೇಯಿಸಿಕೊಂಡು ಊಟವನ್ನು ಮಾಡುತ್ತಾರೆ. ಅಲ್ಲದೇ ಸುರಪುರದ ಡೊಣ್ಣಿಗೇರಿ, ಬಿಚ್ಚಗತ್ತಿಗೇರಿ, ಕಬಾಡಗೇರಿ ಬೇಡರು ಉಡುವನ್ನು ಬೇಟೆಯಾಡಿ ಅಡುಗೆ ಮಾಡಿಕೊಂಡು ತಿನ್ನುತ್ತಾರೆ. ಡೊಣ್ಣಿಗೇರಿಯ ಕಿರ್ಣಗಿ ಮರಗಮ್ಮ, ಬಿಚ್ಚುಗತ್ತಿಗೇರಿಯ ದಂಡಿನ ಮರಗಮ್ಮ, ಹುಲಕಲ್ ರತ್ನಮ್ಮ, ಕಬಾಡಗೇರಿಯ ಗಡ್ಡೆ ದುರಗಮ್ಮ ದೇವತೆಗಳಿಗೆ ವರ್ಷಕ್ಕೊಮ್ಮೆ ಪೂಜೆ ಪುನಸ್ಕಾರ ಮಾಡುವುದರ ಮೂಲಕ ಕುರಿ–ಮೇಕೆ ಬಲಿಯನ್ನು ಕೊಟ್ಟು ಸಾಮೂಹಿಕವಾಗಿ ಮಾಂಸದ ಊಟವನ್ನು ಮಾಡುತ್ತಾರೆ. ಡೊಣ್ಣಿಗೇರಿಯ ಕಿರಣಗಿ ಮರಗಮ್ಮಗೆ ಕೋಣವನ್ನು ಬಲಿ ಕೊಟ್ಟರೂ ಅದನ್ನು ಊಟ ಮಾಡುವುದಿಲ್ಲ. ಯುಗಾದಿ ಅಮಾವಾಸ್ಯೆಯ ದಿನ ಮತ್ತು ಮನೆಗೆ ಹೆಣ್ಣು–ಗಂಡು ನೋಡುವುದಕ್ಕೆ ಬಂದಾಗ ಹೋಳಿಗೆ ಊಟವನ್ನು ಮಾಡುತ್ತಾರೆ. ಸಗರ ನಾಡಿನಲ್ಲಿರುವ ಸಗರಗ್ರಾಮದ ಸಗರ ಗುಡ್ಡದ ಯಲ್ಲಮ್ಮನಿಗೆ ವರ್ಷಕ್ಕೊಮ್ಮೆ ಬೇಡಿಕೊಂಡವರು ಕುರಿ–ಮೇಕೆಗಳನ್ನು ಬಲಿಕೊಡುವುದರ ಮೂಲಕ ಯಲ್ಲಮ್ಮನಿಗೆ ಎಡೆಯನ್ನು ಅರ್ಪಿಸಿ ಮಾಂಸದೂಟವನ್ನು ಮಾಡುತ್ತಾರೆ. ಈ ನಾಡಿನ ಆರಾಧ್ಯ ದೈವ ತಿರುಪತಿ ತಿಮ್ಮಪ್ಪನ ದರ್ಶನ ಮಾಡಲು ಹೋದವರು ಮರಳಿ ಮನೆಗೆ ಬರುವ ತನಕ ಅವರ ಮನೆಯಲ್ಲಿ ಮಾಂಸದ ಊಟವನ್ನು ಮಾಡುವುದಿಲ್ಲ.

**ಸಗರನಾಡಿನ ಬೇಡರ ಮನೆಯಲ್ಲಿ ಆಹಾರ ಸಂಗ್ರಹಿಸಿ ಇಡುವ ಪದ್ಧತಿ ಮತ್ತು ಸಾಧನಗಳು**

**ಅಡಕಲಗಡಿಗೆ:** ಸಗರನಾಡಿನ ಕೆಲವು ಬೇಡರ ಮನೆಗಳಲ್ಲಿ ಈಗಲೂ ಕೂಡ ಅಡಕಲಗಡಿಗೆಗಳಿವೆ. ಆ ಗಡಿಗೆಗಳನ್ನು ಆಹಾರ ಸಂಗ್ರಹಿಸಿಡಲು ಬಳಸುತ್ತಾರೆ.

**ನೆಲವು:** ನಾರು ಹಗ್ಗದಿಂದ ಮಾಡಿರುವ ಸಾಧನಕ್ಕೆ ನೆಲುವುಯೆಂದು ಕರೆಯುತ್ತಾರೆ. ಇದನ್ನು ಮನೆಯ ಜಂತಿಗೆ ಅಥವಾ ಛತ್ತಿನ ಕಬ್ಬಿಣಕ್ಕೆ ನೇತು ಹಾಕಿ ಹಾಲು ಮೊಸರು ಮಜ್ಜಿಗೆ ಇಡುತ್ತಾರೆ.

**ಹಗೆವು:** ಈಗಲೂ ಕೂಡಾ ಸಗರನಾಡಿನ ಕೆಲವು ಬೇಡರ ಮನೆಗಳಲ್ಲಿ ಜೋಳ, ಸಜ್ಜೆ, ಅಕ್ಕಿ ಆಹಾರ ಧಾನ್ಯಗಳನ್ನು ಸಂಗ್ರಹಿಸಿ ಇಡಲು ಭೂಮಿಯ ಒಳಗಡೆ ತೆಗ್ಗು ತೋಡಿ ಹಗೆವು ಮಾಡಿ ಅದರಲ್ಲಿ ಹಾಕುತ್ತಾರೆ.

**೪.೬ ಬೇಡ ಸಮುದಾಯದ ಸಾಮಾಜಿಕ ನ್ಯಾಯ ಪದ್ಧತಿ:**

ಸಗರನಾಡಿನ ಪ್ರತಿಯೊಂದು ಹಳ್ಳಿಗಳಲ್ಲಿ ಬೇಡ ನಾಯಕನಿಲ್ಲದ ಪಂಚಾಯತಿ ವ್ಯವಸ್ಥೆ ಇಲ್ಲ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಸಗರನಾಡಿನ ಬೇಡರ ನ್ಯಾಯ ಪದ್ಧತಿಯನ್ನು ಐತಿಹಾಸಿಕವಾಗಿ ನೋಡಿದಾಗ ಈ ಮೊದಲು ಕುಲಚಾರಿಕೆ ಪದ್ಧತಿ ಇತ್ತು. ಇದು ಈಗ ಇಲ್ಲದಾಗಿದೆ. ಸಗರನಾಡಿನ ನ್ಯಾಯ ಪದ್ಧತಿಯನ್ನು ನೋಡಿ ಮೇಡೋಸ್ ಟೇಲರ್‌ನು ಮನಸಾರೆ ಮೆಚ್ಚಿ ಹೊಗಳಿದ್ದರೆ ಅದರಲ್ಲೂ ಸುರಪುರ ಪಂಚಾಯತಿಗಳಲ್ಲಿ ನಿರ್ಣಯಿತವಾದ ನ್ಯಾಯಗಳ ವಿರುದ್ಧ ತನಗೆ ಅತ್ಯಲ್ಪ ಮೇಲ್ಮನವಿಗಳು ಬಂದವೆಂದು ಹೇಳುತ್ತಾರೆ. ಅಂದರೆ ಈ ನ್ಯಾಯಾಂಗ ವ್ಯವಸ್ಥೆಯೊಂದು ದೋಷರಹಿತ ಯಶಸ್ವೀ ಪದ್ಧತಿಯನ್ನುವುದರಲ್ಲಿ ಸಂದೇಹವೇ ಇಲ್ಲಾ. ಟೇಲರ್‌ನ ಮಾತುಗಳನ್ನು ನೋಡುವುದಾದರೆ,

``No law Ever Existal in Shorapur nor even a sem balance of a court, civil or criminal. Ordinary Suits were tried by panchayaths limited to five members and their were but few appeals to me from their decisions — their bharts or bards and their elders had a knowladge of their laws and customes and always attendaed panchathis "I was every thankful that during my stay no blood was eer been shall nor a single that fired in anger among them."[೫]

ಸುರಪುರದ ಸಾಮಾಜಿಕ ಹಾಗೂ ಜಾತಿ ವ್ಯವಸ್ಥೆಗಳು ಅಪರಾಧಿಗಳಿಗೆ ಪ್ರಚೋದನೆ ಕೊಡುವಂತದ್ದಾಗಿರಲಿಲ್ಲ. ಆದ್ದರಿಂದ ಕೊಲೆಯಂತಹ ಅಪರಾಧಗಳು ಆಗ ಘಟಿಸಲಿಲ್ಲ.

ಬೇಡರು ಮತ್ತು ಇತರ ಜನಾಂಗದವರಲ್ಲಿಯೂ ಶಸ್ತ್ರಾಸ್ತ್ರಗಳಿದ್ದರೂ ಹೀನ ಕೃತ್ಯಗಳನ್ನು ಮಾಡುತ್ತಿರಲಿಲ್ಲ. ಸರ್ದಾರ್ ವಲ್ಲಭಾಯಿ ಪಟೇಲ ಮೂರ್ತಿ ಇರುವ ಬೃಹತ್ ಕಟ್ಟೆಯನ್ನು ಆಗ ರಮಣಪ್ಪ ನಾಯಕನ ಕಟ್ಟೆ ಎಂದು ಕರೆಯಲಾಗುತ್ತಿತ್ತು. ಇದು ನಗರದ ಮಧ್ಯ ಇದ್ದು ದರ್ಬಾರಕ್ಕೆ ಸಮೀಪವಿದೆ. ಸಗರನಾಡಿನಲ್ಲಿ ಯಾವುದೇ ಕುಲದ ಜಗಳಗಳು ಸಣ್ಣ ಪುಟ್ಟ ಊರ ತಂಟೆಗಳು ಇನ್ನಿತರ ಸಮಸ್ಯೆಗಳನ್ನು ಇಲ್ಲಿಯೇ ಬಗೆಹರಿಸುತ್ತಿದ್ದರು. ಪಂಚಾಯತಿ ಕಟ್ಟೆಯ ಪ್ರಮುಖರಾದ ಬೇಡ ದೊರೆಗಳು ತಮ್ಮ ಜಾತಿಯ ಸಮಸ್ಯೆಗಳನ್ನು ಬಗೆಹರಿಸುವುದಲ್ಲದೇ ಇನ್ನಿತರ ಜಾತಿಯ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದರು. ಅಂತೆಯೇ ಈ ಸಮುದಾಯಕ್ಕೆ ನಾಯಕ ಎಂದು ಪರ್ಯಾಯ ಹೆಸರು ಬಂದಿರಬಹುದು.

**ಸಗರನಾಡಿನ ಜನಪದದಲ್ಲಿ ಪ್ರಚಲಿತದಲ್ಲಿರುವ ನುಡಿಗಟ್ಟುಗಳು:**

**ಕಟ್ಟೆಕಲ್ಲು ಕಟ್ಟೆಗೆ:–** 'ಮುರಿದು ಹೋದ ಕುಟುಂಬ ವ್ಯವಸ್ಥೆಯನ್ನು ನ್ಯಾಯ ಮಾಡಿ ಕೂಡಿಸಿದಾಗ ಹೇಳುವ ಮಾತು.

**ಶಹಾಪುರ ನ್ಯಾಯ:** ಸಗರನಾಡಿನ ಮಧ್ಯ ಭಾಗದಲ್ಲಿರುವ ಊರು ಶಹಾಪೂರ ಯಾರೂ ಸೋಲದೆ ಯಾರೂ ಗೆಲ್ಲದೆ ರಾಜಿಯಾಗುವ ನ್ಯಾಯ ಶಹಾಪುರ ನ್ಯಾಯ ಎಂದು ಪ್ರಸಿದ್ಧ.

**ಹಸಿ ಗ್ವಾಡ್ಯಗ ಹಳ್ಳು ಹೊಡೆದಾಂಗ:** ಖಡಾಮುಡಿ ಅಥವಾ ನಿಷ್ಠುರವಾಗಿ ಯಾರ ಪಕ್ಷವಹಿಸದೇ ಪರಿಣಾಮಕಾರಿಯಾಗಿ ನ್ಯಾಯ ಮಾಡುವುದು

**ಸೂಗೂರಿಗೂ ನೆಂಟ ಬಾಗೂರಿಗೂ ನೆಂಟ:** ಯಾರಿಗೂ ಕೆಟ್ಟಾಗದೆ ಎರಡು ದಡದ ಮೇಲೆ ಕಾಲು ಇಟ್ಟವ.

**ತೊಡೆ ಹೇಸಿಗೆಯಾಗಿಲ್ಲ:** ಒಂದು ಹೆಣ್ಣು ಇನ್ನೊಬ್ಬ ಗಂಡಿನ ಜೊತೆಗೆ ಹೋಗುವಾಗ ಅವರಿಬ್ಬರಲ್ಲಿ ಲೈಂಗಿಕ ಸಂಬಂಧ ಆಗಿಲ್ಲ ಎನ್ನುವ ಮಾತು ಸಾರ್ವಜನಿಕರಲ್ಲಿ ಸೂಚ್ಯವಾಗಿ ಹೇಳುವ ಮಾತು.

**ಆಳು ನೋಡಿ ಜೀತ ಬರಿ:** ದಂಡ ಮುಂತಾದ ಪ್ರಸಂಗಗಳಲ್ಲಿ ಅವನ ಆರ್ಥಿಕ ಸ್ಥಿತಿ ನೋಡಿ ಭಾರವಾಗದ ಹಾಗೆ ದಂಡ ಹಾಕುವುದು.'[೬]

**ಸಗರನಾಡಿನ ಬೇಡರ ಪಂಚಾಯತಿ ಕಟ್ಟೆ**

ರಾಜಾ

ಪ್ರತಿಯೊಂದು ಕೇರಿಯಿಂದ ಒಬ್ಬರಂತೆ ೧೪ ಜನ ಯಜಮಾನರು

ಇವರಲ್ಲಿ ೫ ರಿಂದ ೬ ಜನ ಹಿರಿಯ ನಾಯಕರು

ಮನೆಗೆ ಒಬ್ಬರಂತೆ ಊರಿನಲ್ಲಿ ಇರುವ ಎಲ್ಲ ದೈವದವರು

ವಿಷಯ ಮುಟ್ಟಿಸುವುದಕ್ಕೆ ಒಂದು ಊರಿಗೆ ಒಬ್ಬ ತಳವಾರ

ಈ ಪದ್ಧತಿಯಲ್ಲಿ ರಾಜನಾದವನು ಸಗರನಾಡಿನ ಪ್ರತಿಯೊಂದು ತಾಲೂಕು ಗ್ರಾಮಗಳಲ್ಲಿ ನಡೆಯುವ ನ್ಯಾಯ ಪಂಚಾಯತಿಗೆ ಈತನ ತೀರ್ಪು ಅಂತಿಮ ಎಂದು ಹೇಳಬಹುದು. ಪ್ರತಿಯೊಂದು ಗ್ರಾಮದಲ್ಲಿ ತಮ್ಮ ಪಂಚಾಯತಿ ಕಟ್ಟೆಯಲ್ಲಿ ನ್ಯಾಯ ಬಗೆಹರಿಯದಿದ್ದಾಗ ರಾಜನ ಸಮ್ಮುಖದಲ್ಲಿ ನ್ಯಾಯವನ್ನು ಬಗೆಹರಿಸಲಾಗುತ್ತಿತ್ತು. ಸುಮಾರು ೧೦-೧೫ ವರ್ಷದ ಹಿಂದೆ ಜನರು ನ್ಯಾಯ ಕೇಳಲು ಕೋರ್ಟು, ಕಛೇರಿ, ಪೋಲೀಸ್ ಸ್ಟೇಷನ್‌ಗಳಿಗೆ ಹೋಗುತ್ತಿರಲಿಲ್ಲ. ದರ್ಬಾರಕ್ಕೆ ಅಂದರೆ ಅರಮನೆಗೆ ಬಂದು ನ್ಯಾಯವನ್ನು ಕೇಳುತ್ತಿದ್ದರು. ಆಗ ರಾಜನಾದವನು (ದೊರೆ) ಯಾವುದೇ ಆಮಿಷಕ್ಕೆ ಬಲಿಯಾಗದೇ ತಪ್ಪು ಇದ್ದವರಿಗೆ ಶಿಕ್ಷೆ ಕೊಟ್ಟು ಸರಿ ಇದ್ದವರಿಗೆ ನ್ಯಾಯವನ್ನು ಕೊಡಿಸುತ್ತಿದ್ದರು. ಒಂದು ವೇಳೆ ಬೇಡರಲ್ಲಿ ಯಾರಾದರೂ ಒಬ್ಬ ಸ್ತ್ರೀ ಅಥವಾ ಪುರುಷ ಅಂತರ್ ಜಾತಿಯ ವಿವಾಹವಾದರೆ ಆಗ ಜಾತಿಯಿಂದ ದೂರ ಇಡುತ್ತಿದ್ದರು. ಆದರೆ ಪ್ರಸ್ತುತ ದಿನಮಾನಗಳಲ್ಲಿ ಪಾಶ್ಚಾತ್ಯೀಕರಣ ಪ್ರಭಾವ ಶಿಕ್ಷಣದ ಪ್ರಭಾವದಿಂದ ಅಂತರ್ ಜಾತಿಯ ವಿವಾಹ ಮಾಡಿಕೊಂಡವರಿಗೆ ಶಿಕ್ಷೆಯನ್ನು ವಿಧಿಸುತ್ತಿಲ್ಲ. ಸಗರನಾಡಿನ ಪ್ರಮುಖ ಬೇಡರ ಕುಟುಂಬಗಳಲ್ಲಿ ತಂದೆ ತಾಯಿ ಹಿರಿಯರನ್ನು ಒಪ್ಪಿಸಿ ಅಂತರ್ ಜಾತಿಯ ವಿವಾಹ ಮಾಡಿಕೊಂಡಿರುವ ಉದಾಹರಣೆಗಳಿವೆ. ಶಿಕ್ಷಣವನ್ನು ಪಡೆದಿರುವ ಬೇಡರು ಇಂದು ನ್ಯಾಯಕ್ಕಾಗಿ ನ್ಯಾಯಾಲಯಕ್ಕೆ ಹೋಗುತ್ತಿದ್ದಾರೆ. ಒಂದು ರೀತಿಯಲ್ಲಿ ಬೇಡರಲ್ಲಾದ ಪರಿವರ್ತನೆಯೆಂದು ಹೇಳಿದರೆ ತಪ್ಪಾಗಲಾರದು.

**೪.೭ ಬೇಡರು ಅನುಸರಿಸುವ ಚಿಕಿತ್ಸಾ ಪದ್ಧತಿ (ಜನಪದ ವೈದ್ಯ):**

ಬೇಡ ಸಮುದಾಯದವರು ಮೂಲತಃ ಅರಣ್ಯವಾಸಿ, ವನವಾಸಿಗಳು, ಇವರಿಗೆ ಎಲ್ಲಾ ತರಹದ ಖಾಯಿಲೆಗಳಿಗೆ ಯಾವ ಗಿಡ ಮೂಲಿಕೆಯ ಔಷಧಿಗಳನ್ನು ಕೊಡಬೇಕೆಂಬ ಮಾಹಿತಿ ಇರುತ್ತದೆ. ಅರಣ್ಯಗಳಲ್ಲಿ ಸಿಗುವ ಗಿಡ ಗೆಡ್ಡೆ ಗೆಣಸುಗಳಿಂದ ಆಯುರ್ವೇದದ ಔಷಧಗಳನ್ನು ಮಾಡಿ ತಮಗೆ ರೋಗ ರುಜಿನಗಳು ಬಂದಾಗ ಮನೆಯಲ್ಲಿಯೇ ಸಿದ್ಧಪಡಿಸಿದ ತಮ್ಮಲ್ಲಿನ ಔಷಧಗಳನ್ನು ಸೇವಿಸುತ್ತಿದ್ದರು. ಹೀಗಾಗಿ ಕಾಡಿನಲ್ಲಿ ವಾಸಿಸುವ ಬೇಡರಿಗೆ ಆಗ ರೋಗಗಳ ಬಗ್ಗೆ ಆತಂಕವಿರಲಿಲ್ಲ. ಬರಿ ಔಷಧಗಳಿಂದಲ್ಲದೇ ಮಂತ್ರ ಶಕ್ತಿಯಿಂದ ಹಲವು ರೋಗಗಳನ್ನು ನಿಯಂತ್ರಿಸುವ ಪರಿಹಾರ ಬೇಡ ಜನಾಂಗದಲ್ಲಿಯೂ ಇತ್ತು. ರೋಗಿಗಳಿಗೆ ಹುಟ್ಟು ಸಾವು ಸಹಜವಾದರೂ ಇದರ ಹಿಂದೆ ದೈವ ಮತ್ತು ದುಷ್ಟ ಶಕ್ತಿಯ ಪ್ರಭಾವ ಇರುತ್ತದೆ ಎಂಬ ನಂಬಿಕೆ ಇವರದು. ಯಾವುದೋ ಒಂದು ಭೌತಿಕ ವಸ್ತುವಿನಲ್ಲಿ ದುಷ್ಟಶಕ್ತಿಯೊಂದು ಅಡಗಿ ಆ ಮೂಲಕ ಕಾರ್ಯಾಚರಣೆ ಮಾಡುವುದೆಂಬ ನಂಬಿಕೆಗೆ

ಇವರು ಒಳಗಾಗಿದ್ದಾರೆ. ಜನ್ಮ, ಪುನರ್ ಜನ್ಮ, ಹುಟ್ಟು, ಸಾವು ದೇಹದೊಳಗೆ ಆತ್ಮಗಳ ಬದಲಾವಣೆ ಅತಿಮಾನುಷ ಶಕ್ತಿಯ ಪ್ರವೇಶ ದೇಹದಿಂದ ಆತ್ಮ ಬೇರೆಯಾಗುವುದು ಇಂತಹ ಹಲವಾರು ನಂಬಿಕೆಗಳು ಇವರಲ್ಲಿ ಘಾಢವಾಗಿವೆ. ರೋಗ ಲಕ್ಷಣಗಳನ್ನು ಅರಿಯಲು ದೈಹಿಕ ಲಕ್ಷಣಗಳನ್ನು ಅವಲೋಕಿಸುವುದುಂಟು. ಕೆಲವರು ನಾಡಿಮಿಡಿತವನ್ನು ಪರೀಕ್ಷಿಸುವುದುಂಟು. ಕಣ್ಣುಗಳು ಹಳದಿ ಬಣ್ಣಕ್ಕೆ ಬಂದರೆ ಅಂಥವರಿಗೆ ಕಾಮಣಿಯಾಗಿದೆ ಎಂದು ತಿಳಿಯುತ್ತಾರೆ. ಆಗ ಅವರು ಔಷಧಿ ತೆಗೆದುಕೊಳ್ಳುವುದರ ಜೊತೆಗೆ ಊಟದ ಪಥ್ಯೆಯನ್ನು ಮಾಡುತ್ತಾರೆ. ಮತ್ತು ಒಂದು ವೇಳೆ ಮಗು ಅತಿಯಾಗಿ ಅಳುತ್ತಿದ್ದರೆ ಆಗ ಆ ಮಗುವಿಗೆ ದೃಷ್ಟಿ ತಾಕಿದೆ ಎಂದು ಬೇವಿನ ತಪ್ಪಲಿನಿಂದ ಅಥವಾ ಉಪ್ಪು ಅಥವಾ ಕೋಳಿ ಮೊಟ್ಟೆಯನ್ನು ತೆಗೆದುಕೊಂಡು ಮಗುವಿನ ಹಿಂದೆ ಮುಂದೆ ಮೂರು ಮೂರು ಬಾರಿ ಮೇಲೆ ಕೆಳಗೆ ಇಳಿಸಿ ಹಾಕುತ್ತಾರೆ. ಮೊಟ್ಟೆಯಾಗಿದ್ದರೆ ಮೂರು ದಾರಿ ಸೇರುವ ರಸ್ತೆಯಲ್ಲಿ ಬೀಸಾಡುತ್ತಾರೆ.

**ರೋಗಗಳು ಮತ್ತು ಚಿಕಿತ್ಸೆಗಳು:**

**ಸಂತಾನ ಪ್ರಾಪ್ತಿಗಾಗಿ ಬಂಜೆತನ ನಿವಾರಣೆಗಾಗಿ:** ಸಂತಾನ ಭಾಗ್ಯಕ್ಕಾಗಿ ಗಂಡಸಿನ ಮೂತ್ರವನ್ನು ಕುಂಡದಲ್ಲಿ ಹಾಕಿದ ಗೋದಿ ಬೀಜಗಳ ಮೇಲೆ ಹಾಕಿ ಸಂತಾನ ಬೀಜ ಮೊಳಕೆಯಾಗುವ ಆಧಾರದ ಮೇಲೆ ಸಂತಾನ ಪ್ರಾಪ್ತಿ ಬಗ್ಗೆ ಔಷಧಿ ನೀಡುತ್ತಿದ್ದರು.

ಮೂರ್ಛೆ ರೋಗಕ್ಕೆ ಕಂಬಾರ ಕಾಗೆ ರಕ್ತವನ್ನು ಬಳಸುತ್ತಿದ್ದರು.

ಮಾನವನ ಕಾಲು ಸೀಳಿದರೆ ಅಥವಾ ಬಿರುಕು ಬಿಟ್ಟರೆ ಹವಡಲು (ಔಡಲ) ಗಿಡದ ಬೀಜ ಮತ್ತು ಅರಿಶಿಣ ಪುಡಿಯನ್ನು ಎರಡು ಬೆರಸಿ ಕಲ್ಲಿನಿಂದ ಸಣ್ಣಾಗಿ ಅರೆದುಕೊಂಡು ಅದಕ್ಕೆ ಲೇಪಿಸುತ್ತಿದ್ದರು. ಇದರಿಂದ ಕಾಲಿನ ಬಿರುಕು ಸರಿಯಾಗುತ್ತಿತ್ತು.

ಕೈ ಕಾಲು ಮುರಿದರೆ ಸುರಪುರ ತಾಲೂಕಿನಲ್ಲಿ ಬರುವ ಚಿಂಚೋಡಿ, ತಿಪ್ಪನಟಗಿ, ರಸ್ತಾಪೂರಗಳಲ್ಲಿ ತಪ್ಪಲಿನ ಔಷಧಿ ನೀಡಲಾಗುತ್ತದೆ. ಇವುಗಳನ್ನು ಇದುವರೆಗೂ ಕೊಡುವ ಪದ್ಧತಿ ರೂಢಿಯಲ್ಲಿದೆ.

ದೃಷ್ಟಿಯಾದಾಗ ಮನೆಯ ಕಸಬಾರಿಗೆ ಮತ್ತು ಉಪ್ಪನ್ನು ತೆಗೆದುಕೊಂಡು ದೃಷ್ಟಿಯನ್ನು ಹೋಗಲಾಡಿಸುತ್ತಾರೆ.

ಒಬ್ಬ ವ್ಯಕ್ತಿಗೆ ಸರಿಯಾಗಿ ಊಟ ಸೇರದಿದ್ದರೆ ಅಥವಾ ಹೊಟ್ಟೆ ಉಬ್ಬಸು ಬಂದರೆ ಅವನು ಉಳಿಸಿರುವಂತಹ ಊಟದ ತಟ್ಟೆಯಲ್ಲಿ ಅರಿಷಿಣ ಹಾಕಿ ಒಂದು ದೊಡ್ಡ ಗ್ಲಾಸ್ ಅಥವಾ ಸಣ್ಣ ಚಂಬಿನಲ್ಲಿ ಬೆಂಕಿ ಕೆಂಡ ಹಾಕಿ ಆ ವ್ಯಕ್ತಿಗೆ ದೃಷ್ಟಿ ತೆಗೆದು ಆ ತಾಟಿನಲ್ಲಿ ಬಾರಲ ಹಾಕುತ್ತಾರೆ. ಆಗ ಅವರ ರೋಗ ಎಷ್ಟರ ಮಟ್ಟಿಗೆ ಇದೆ ಎಂದು ನಿರ್ಧರಿಸುತ್ತಾರೆ.

**ಎಪ್ಪತ್ತಿನ ಕೆಮ್ಮು:** ಯಾರಿಗಾದರೂ ಈ ರೋಗ ಅಂಟಿದರೆ ಎಪ್ಪತ್ತೆರಡು ಊರುಗಳ ಹೆಸರು ಬರೆದು ಪಂಚಗಜ ಹಾಕಿ ಮಗುವಿನ ಅಥವಾ ವ್ಯಕ್ತಿಯ ಕೊರಳಿಗೆ ಕಟ್ಟುತ್ತಾರೆ. ಆಗ ಈ ರೋಗ ನಿವಾರಣೆಯಾಗುತ್ತದೆ ಎಂಬ ನಂಬಿಕೆ ಈಗಲೂ ಇದೆ.

ಬೇಡರು ಈ ಎಲ್ಲಾ ಆಚರಣೆಗಳಿಂದ ರೋಗಗಳನ್ನು ಗುಣಪಡಿಸುವುದರ ಜೊತೆಗೆ ಸಸ್ಯ ಔಷಧಿಗಳಿಂದ ರೋಗಗಳನ್ನು ಗುಣಪಡಿಸುತ್ತಾರೆ. ಮುಳ್ಳು ನೆಟ್ಟ ಜಾಗಕ್ಕೆ ಉತ್ತರಣಿ ಸೊಪ್ಪನ್ನು ಹಚ್ಚಿದರೆ ರೋಗಿಯ ಕಾಲುನೋವು ಕಡಿಮೆಯಾಗುತ್ತದೆ. ಮತ್ತು ಉತ್ತರಾನಿ ಬೇರನ್ನು ಬೆಣ್ಣೆಯಲ್ಲಿ ಬಾಡಿಸಿ ತಿಂದರೆ ಬಿಳಿ ಸೆರಗು ನಿವಾರಣೆಯಾಗುತ್ತದೆ. ಹಾಗೂ ನಾಲ್ಕು ತುಳಸಿ ಸೊಪ್ಪು ಒಂದು ವಿಳೇದೆಲೆ ಎರಡನ್ನೂ ಸೇರಿಸಿ ಗೋಮೂತ್ರದಲ್ಲಿ ಅರೆದು ಮೈ ಮೇಲಿನ ತದ್ದಿಗೆ ಹಚ್ಚಿದರೆ ವಾರದಲ್ಲಿ ತದ್ದು ಗುಣವಾಗುತ್ತದೆ. ಶುಂಠಿ ಚಹಾ ಕುಡಿದರೆ ನೆಗಡಿ, ಕೆಮ್ಮು, ಪರಿಹಾರವಾಗುತ್ತದೆ. ಆಡು ಮುಟ್ಟದ ಬಳ್ಳಿಯ ಎಲೆಯ ಪುಡಿಯನ್ನು ಆಡಿನ ಹಾಲಿನೊಂದಿಗೆ ಸೇರಿಸಿ ಕುಡಿಸಿದರೆ ಹೊಟ್ಟೆಯೊಳಗಿನ ಮದ್ದು (ಮಾಟ) ಹೊರಗೆ ಬರುತ್ತದೆ. ಇದನ್ನು ಈಗಲೂ ಸುರಪುರದ ಬೊಮ್ಮನಹಳ್ಳಿಯಲ್ಲಿ ನೀಡಲಾಗುತ್ತದೆ. ತಲೆನೋವಿಗಾಗಿ ಕಟ್ಟಿಗೆ ಇದ್ದಲಿ, ಬಳ್ಳೊಳ್ಳಿಯನ್ನು ಕೂಡಿಸಿ ಅರೆದು ಹಣೆಗೆ ಹಚ್ಚಿದರೆ ತಲೆನೋವು ನಿವಾರಣೆಯಾಗುತ್ತದೆ. ಕಣ್ಣುಬೇನೆಗೆ ಸ್ಥಳೀಯವಾಗಿ ದೊರೆಯುವ ಗೊಳಗೊಳಕೆ ಸಸ್ಯದ ರಸವನ್ನು ಕಣ್ಣಿನಲ್ಲಿ ಹಾಕುತ್ತಾರೆ. ಮೂರು ನಾಲ್ಕು ದಿನ ಸತತವಾಗಿ ಹಾಕಿದರೆ ಕಣ್ಣು ಬೇನೆ ಮಾಯವಾಗುತ್ತದೆ. ಹಾಗೂ ಮಕ್ಕಳ ಮುಟ್ಟು ದೋಷವನ್ನು ನಿವಾರಣೆ ಮಾಡಲು ಗುರುವಾರ ಅಥವಾ ಭಾನುವಾರ ದಿನಾ ಮುಂಜಾನೆ ಮತ್ತು ಸಂಜೆ ಎರಡು ಹೊತ್ತು ಗೋಮೂತ್ರದಿಂದ ಮೈ ತೊಳೆಯುತ್ತಾರೆ. ಹೀಗೆ ೫ ವಾರಗಳ ಕಾಲ ಮಾಡಿದರೆ ಮುಟ್ಟು ದೋಷ ನಿವಾರಣೆಯಾಗುತ್ತದೆ ಎಂಬ ನಂಬಿಕೆ ಇದೆ. ಮತ್ತು ಮಕ್ಕಳಿಗೆ ಮಂಗನ ಬಾವು ಬಂದಾಗ ಬೆಲ್ಲ ಸುಣ್ಣ ಮಿಶ್ರಣ ಮಾಡಿ ಗಂಟಲು ಮತ್ತು ಕಪಾಳಗಳಿಗೆ ಸವರುತ್ತಾರೆ. ಅದು ೨-೩ ದಿನದಲ್ಲಿ ಬಾವು ಇಳಿದು ಹೋಗುತ್ತದೆ. ರಕ್ತ ಶುದ್ಧಿಗಾಗಿ ಹತ್ತರಕಿ ಪಲ್ಯೆಯನ್ನು ಜಾಸ್ತಿ ತಿನ್ನುತ್ತಾರೆ. ಕಫ ಗಟ್ಟಿದಾಗ ಊಟದಲ್ಲಿ ಹೆಚ್ಚು ಈರುಳ್ಳಿ ತಿಂದರೆ ಕಫ ನಿವಾರಣೆಯಾಗುತ್ತದೆ. ಹೀಗೆ ನೂರಾರು ರೋಗಗಳನ್ನು ನಿವಾರಣೆ ಮಾಡಿಕೊಳ್ಳಲು ಸಗರನಾಡಿನ ಬೇಡರು ಇಂತಹ ಪ್ರಯತ್ನಗಳನ್ನು ಮಾಡುತ್ತಾರೆ.

**ಪಶು, ಪಕ್ಷಿ, ಪ್ರಾಣಿ ವೈದ್ಯ:** ಈ ಭೂಮಿಯ ಮೇಲೆ ಹುಟ್ಟಿರುವ ಪ್ರತಿಯೊಂದು ಪ್ರಾಣಿ-ಪಕ್ಷಿಗಳಿಗೆ ಮನುಷ್ಯರಿಗೆ ಇರುವಂತೆ ರೋಗಗಳು ಇವುಗಳಿಗೂ ಇವೆ. ಮಾನವನು ತಾನೊಬ್ಬನೇ ಬದುಕಲಾರ. ತನ್ನ ಜೊತೆಗೆ ಎತ್ತು, ಎಮ್ಮೆ, ಆಕಳು, ನಾಯಿಗಳು, ಕೋಳಿ, ಹುಂಜ, ಪಾರಿವಾಳ, ಕುರಿ, ಮೇಕೆ, ಆಡು, ಕುದುರೆ ಇನ್ನಿತರ ಪ್ರಾಣಿ ಪಕ್ಷಿಗಳನ್ನು ಸಾಕುತ್ತಿದ್ದಾನೆ. ಸಗರನಾಡಿನ ಬೇಡರು ಪ್ರಾಣಿ ಪಕ್ಷಿಗಳ ಪ್ರೀಯರು. ಅನಾದಿಕಾಲದಿಂದಲೂ ಇವುಗಳ ಜೊತೆಯಲ್ಲಿಯೇ ಬದುಕನ್ನು ಸಾಗಿಸುತ್ತಿದ್ದಾರೆ. ಪ್ರಾಣಿಗಳ ನಡೆ-ನುಡಿ ಅವುಗಳ

ಲಕ್ಷಣ ಅರಿತಿರುತ್ತಾರೆ. ಒಂದು ವೇಳೆ ಪ್ರಾಣಿ-ಪಕ್ಷಿಗಳಿಗೆ ರೋಗಗಳು ಬಂದಿದ್ದೇ ಆದರೆ ಆ ರೋಗ ಯಾವುದು ಎಂದು ತಿಳಿದು ಸೂಕ್ತ ಚಿಕಿತ್ಸೆಯನ್ನು ಕೊಡುತ್ತಾರೆ. ಸಗರನಾಡಿನ ಬೇಡರಲ್ಲಿ ಹುಂಜದ ಪಂಜ ಆಡುವುದು ಸಾಮಾನ್ಯವಾಗಿದೆ. ಪಂಜವಾಡುವ ಸಂದರ್ಭದಲ್ಲಿ ಹುಂಜಗಳಿಗೆ ಗಾಯವಾದಾಗ ರಕ್ತ ಸೋರುತ್ತಿದ್ದಾಗ ಒಂದು ಸಣ್ಣ ಸೂಜಿಯನ್ನು ತೆಗೆದುಕೊಂಡು ಹೊಲಿಗೆ ಹಾಕಿ ಅರಶಿಣವನ್ನು ಹಚ್ಚುತ್ತಾರೆ. ಇದರಂತೆ ೩೦ ದಿನಗಳ ಕಾಲ ಚಿಕಿತ್ಸೆ ನೀಡಿದಾಗ ಪಂಜದ ಹುಂಜ ಮತ್ತೇ ಚೇತರಿಸಿಕೊಂಡು ಸಹಜ ಸ್ಥಿತಿಗೆ ಮರಳುತ್ತದೆ. ಪಂಜವಾಡುವ ಬೇಡ ನಾಯಕರು ಮಾತ್ರ ಚಿಕಿತ್ಸೆಯ ಬಗ್ಗೆ ಪರಿಣಿತಿಯನ್ನು ಹೊಂದಿರುತ್ತಾರೆ. ಮಧ್ಯರಾತ್ರಿಯ ವೇಳೆಯಲ್ಲಿ ಕಾಡಿಗೆ ಹೋಗಿ ಹೆಸರಿಲ್ಲದ ಗಿಡದ ತಪ್ಪಲನ್ನು ತಂದು ಕಾಲು ಬಾವು, ಬಾಯಿ ಬಾವಿನಂತಹ ರೋಗ ತಗುಲಿರುವ ದನಕ್ಕೆ ಆ ತಪ್ಪಲಿನಿಂದ ನಿವಾಳಿಸಿ ಹರಿಯುವ ನೀರಿಗೆ ಆ ತಪ್ಪಲನ್ನು ಬಿಡುವ ರೂಢಿಯಿದೆ. ಆ ತಪ್ಪಲು ನೀರಿನಲ್ಲಿ ಹರಿದು ಹೋದಂತೆ ಆ ದನಕ್ಕೆ ತಗುಲಿದ ರೋಗವು ಹೋಗುತ್ತದೆ ಎಂದು ಇವರು ಭಾವಿಸುತ್ತಾರೆ. ದನಕ್ಕೆ ನಾಲಿಗೆಗೆ ಮುಳ್ಳು ರೋಗ ಬಂದು ಹುಲ್ಲನ್ನು ತಿನ್ನದೇ ಇದ್ದರೆ ಅದರ ನಾಲಿಗೆಗೆ ಮದ್ದುಗುಣಿಕೆ ಕಾಯಿಯ ಮುಳ್ಳುಗಳಿಂದ ಅದರ ನಾಲಿಗೆಯನ್ನು ತಿಕ್ಕುವ ಪದ್ಧತಿ ಇದೆ. ದನಗಳಿಗೆ ಹೊಟ್ಟೆ ಉಬ್ಬಿಸಿದರೆ ಗೊಟ್ಟದ ಮೂಲಕ ಶೇಂಗಾ ಎಣ್ಣೆಯನ್ನು ಕುಡಿಸುವ ಕ್ರಮ ಇವರಲ್ಲಿದೆ. ಆಕಳುಗಳು ತನ್ನ ಕರುವಿಗೆ ಜನ್ಮ ಕೊಟ್ಟಾಗ ಅವುಗಳಿಗೆ ದೃಷ್ಟಿ ತಾಗದಿರಲಿ ಎಂದು ಕುತ್ತಿಗೆಗೆ ಚಿಪ್ಪು, ಕೆಂಪು ಮೆಣಸಿನಕಾಯಿ, ನಿಂಬೆಹಣ್ಣು, ಕೇರು ಬೀಜಗಳನ್ನು, ಕವಡೆಗಳನ್ನು ಒಂದು ಕಂಬಳಿಯ ದಾರದಿಂದ ಪೋಣಿಸಿ ಕಟ್ಟೋ ಪದ್ಧತಿ ಇದೆ. ದನಗಳು ಮೊಳೆಯಂತಹ ಲೋಹದ ವಸ್ತುಗಳನ್ನು ನುಂಗಿದರೆ ಉತ್ತರಾಣಿಯ ಸೊಪ್ಪು ಮತ್ತು ಸೈಂದ್ರಲವಣವನ್ನು ಸೇರಿಸಿ ಅರೆದು ದಿವಸಕ್ಕೆ ೨-೩ ಬಾರಿಯಂತೆ ದನಗಳಿಗೆ ಕೊಡುವುದರಿಂದ ದೇಹದೊಳಗೆ ಸೇರಿದ ಸೂಜಿ, ಮೊಳೆಯಂತಹ ವಸ್ತುಗಳು ದೇಹದಿಂದ ಹೊರ ಬರುತ್ತವೆ. ದನ ಕರುಗಳು ಕುರಿ ಆಡುಗಳು ಸರಿಯಾಗಿ ಹುಲ್ಲು ತಿನ್ನದಿದ್ದರೆ ಕಬ್ಬಿಣ ಕಾಸಿದ ನೀರನ್ನು ಕುಡಿಸುತ್ತಾರೆ. ಮನುಷ್ಯರಿಗೆ ತೆಗೆಯುವಂತ ದೃಷ್ಟಿಯನ್ನು ತೆಗೆಯುತ್ತಾರೆ. ಸಗರನಾಡಿನ ಹೆಚ್ಚಿನ ಬೇಡರು ಗೋಸಲ, ಗುಜ್ಜಲ ವಂಶದವರು. ಇವರ ಮನೆಗಳಲ್ಲಿ ಆಕಳು, ಎತ್ತುಗಳನ್ನು ಸಾಕುವುದು ಸರ್ವೆಸಾಮಾನ್ಯ. ಗೋವನ್ನು ಇವರು ಪೂಜಿಸಿ ರಕ್ಷಿಸುತ್ತಾರೆ.

**೪.೮ ಬೇಡರ ಬೇಟೆ ಪದ್ಧತಿ:**

ಬೇಡರಲ್ಲಿ ಬೇಟೆ ರಕ್ತಗತವಾಗಿ ಬೇಟೆಯಾಡುವ ಕಲೆಯನ್ನು ಇವರಿಂದ ತಿಳಿದುಕೊಳ್ಳಬೇಕು. ಸಗರನಾಡು ದಟ್ಟವಾದ ಬೆಟ್ಟ ಗುಡ್ಡಗಳಿಂದ ಸುತ್ತುವರೆದಿರುವ ಒಂದು ಪ್ರದೇಶ. ಬೇಡರು ಅನಾದಿಕಾಲದಿಂದಲೂ ಪ್ರಸ್ತುತ ದಿನಮಾನಗಳವರೆಗೆ ಬೇಟೆಯಾಡುವುದನ್ನು

ಬಿಟ್ಟಿಲ್ಲ. ಬೇಟೆ ನಿಷೇಧ ಕಾಯ್ದೆ ಜಾರಿಗೆ ಬಂದಿರುವುದರಿಂದ ಬೇಟೆಯಾಡುವುದನ್ನು ಬಿಟ್ಟಿದ್ದಾರೆ. ಸಾಮಾನ್ಯವಾಗಿ ಬೇಡರ ಸಂಸ್ಕೃತಿಯಲ್ಲಿ ಬೇಟೆಯು ಒಂದು ಪ್ರಮುಖವಾದದ್ದು. ಬೇಟೆಯನ್ನು ಒಂದು ರೀತಿಯಲ್ಲಿ ಹಬ್ಬದಂತೆ ಆಚರಣೆ ಮಾಡುತ್ತಾರೆ. ಯುಗಾದಿ ಮುಗಿದ ನಂತರ ಕರಿ ಎಂಬ ಹೆಸರಿನಲ್ಲಿ ಇಲ್ಲಿಯ ಬೇಡ ಜನ ಬೆಟ್ಟದ ಪ್ರದೇಶಗಳಿಗೆ ಬೇಟೆಯಾಡಲು ಹೋಗುತ್ತಾರೆ. ಇಲ್ಲಿ ಬೇಟೆ ಅಂದರೆ ಕಾಡಿನಲ್ಲಿ ವಾಸಿಸುವ ಅಥವಾ ಬಯಲು ಸೀಮೆಯ ಹೊಲ ಗದ್ದೆ ತೋಟಗಳ ವ್ಯಾಪ್ತಿಯಲ್ಲಿ ಜೀವಿಸಿಕೊಂಡಿರುವ ಪ್ರಾಣಿ ಪಕ್ಷಿಗಳನ್ನು ಬೇಡರು ತಂತ್ರಗಾರಿಕೆಯಿಂದ ಆಯುಧದಿಂದ ಹೊಡೆದು ಕೊಲ್ಲುತ್ತಾರೆ. ಈ ಎದೆಗಾರಿಕೆ ಬೇಡರಿಗೆ ಬಿಟ್ಟರೆ ಬೇರೆ ಯಾರಿಗೂ ಇಲ್ಲ. ಬಾಣವನ್ನು ಹೊಡೆಯುವುದರಲ್ಲಿ ಸುರಪುರದ ಬೇಡ ಜನ ನಿಸ್ಸೀಮರು. ಮೊದಲು ಆದಿವಾಸಿಗಳಾದ ಈ ಜನ ನಾಡಿಗೆ ಬಂದು ನೂರಾರು ವರ್ಷಗಳಾದರೂ ತಮ್ಮ ಬೇಟೆಯ ಸಂಸ್ಕೃತಿಯನ್ನು ಬಿಟ್ಟಿಲ್ಲಾ. ಸಗರ ನಾಡಿನ ಬೇಡರು ಉಡುವು, ಕೌಜುಗ, ಕಾಡುಹಂದಿ, ಚಿಂಕೆಗಳನ್ನು ಬೇಟೆಯಾಡಿ ಕೊಂದು ತಿಂದು ದಷ್ಟಪುಷ್ಟರಾಗಿದ್ದಲ್ಲದೇ ಆತ್ಮ ರಕ್ಷಣೆಗಾಗಿ ಉಗ್ರ ಬಲಿಷ್ಟ ಪ್ರಾಣಿಗಳನ್ನು ಕೊಲ್ಲುವ ತಾಕತ್ತು ಇವರಲ್ಲಿದೆ. ಒಂದು ಕಡೆ ಪ್ರಾಣಿಗಳನ್ನು ಕೊಂದು ತಿನ್ನುತ್ತಿದ್ದರೆ ಇನ್ನೊಂದು ಕಡೆ ಪ್ರಾಣಿಗಳನ್ನು ಪ್ರೀತಿಯಿಂದ ಸಾಕಿ ಸಲಹುತ್ತಿದ್ದರು.

ಸಗರನಾಡಿನಲ್ಲಿ ಬೇಟೆಗಾರರು ಬೇಟೆಯಾಡುವ ಸಂದರ್ಭದಲ್ಲಿ ಬೇಟೆಗೆ ಪ್ರಾಣಿ ಪಕ್ಷಿ ಅಥವಾ ಉರಗ ಜಲಚರ ಸಂಕುಲಗಳನ್ನು ಕೊಂದು ಮಾಂಸವನ್ನು ಊರಿಗೆ ತರುವುದು ಕ್ರಮವಾದರೆ ಕೊಂದಂಥವುಗಳನ್ನು ಊರೆಲ್ಲಾ ಮೆರವಣಿಗೆ ಮಾಡುವುದು ಮತ್ತೊಂದು ಕ್ರಮ. ಬೇಟೆಗಾರನ ಮುಂದೆ ಬೇಟೆಗಾರನ ತಂತ್ರಗಳಿಗೆ ಅವಶ್ಯಕವಾಗಿ ಬೇಕಾಗಿರುವ ಕಾಡಿನ ಪಶು-ಪಕ್ಷಿಗಳನ್ನು ಕೊಲ್ಲದೇ ಜೀವಂತವಾಗಿ ಸೆರೆ ಹಿಡಿದು ಪಳಗಿಸಿ ಊರ ಒಳಗಡೆ ತರುವುದು ನಿಷೇಧವಿತ್ತು. ಏಕೆಂದರೆ ಅವು ಕಾಡು ಪ್ರಾಣಿಯಾಗಿದ್ದು ಊರಿನೊಳಕ್ಕೆ ಪ್ರವೇಶಿಸಿದರೆ ಕೆಟ್ಟ ಸಂಕೇತವಾಗುತ್ತದೆ ಎಂಬ ಮೂಢನಂಬಿಕೆ ಇದೆ. ಆದ್ದರಿಂದ ಬೇಟೆಯ ಸಂದರ್ಭದಲ್ಲಿ ಕಾಡಿನಿಂದ ತಪ್ಪಿಸಿಕೊಂಡು ಊರಿಗೆ ನುಗ್ಗಿದ ಪ್ರಾಣಿಯನ್ನು ಊರಲ್ಲಿಯೇ ಹೂಳುತ್ತಾರೆ. ಬೇಟೆಯಾಡುವಾಗ ಬೇಟೆಯ ನಾಯಿಗಳನ್ನು ಭೇದಿಸಿ ಮೊಲವು ಊರನ್ನು ಪ್ರವೇಶಿಸಿತೆಂದರೆ ಅಪಶಕುನ ಎಂಬ ನಂಬಿಕೆ ಇದೆ.

**ಈ ಹಿಂದಿನ ಸಗರನಾಡಿನ ಬೇಡರ ಬೇಟೆಯ ಸ್ಥಳಗಳು**

**ಸಿದ್ದಾಪುರ ಗುಡ್ಡ:** ಸುರಪುರದಿಂದ ಕೇವಲ ೪ ಕಿ.ಮೀ. ದೂರದಲ್ಲಿ ಸಿದ್ದಾಪುರ ಎಂಬ ಗ್ರಾಮದಲ್ಲಿ ದಟ್ಟವಾದ ಬೆಟ್ಟಗುಡ್ಡಗಳಿದ್ದವು. ಈಗಲೂ ಇವೆ. ಇಲ್ಲಿ ಕಾಡುಹಂದಿ, ಏದು, ಕೌಜುಗ, ಬುರಲಿ, ಉಡ ಇತ್ಯಾದಿ ಪ್ರಾಣಿಗಳು-ಪಕ್ಷಿಗಳು ಹೆಚ್ಚಾಗಿರುವುದರಿಂದ ಈ ಹಿಂದೆ ಬೇಡರು ಬೇಟೆಯಾಡಲು ಹೋಗುತ್ತಿದ್ದರು.

**ದೇವಿಕೇರಿ ಗುಡ್ಡ:** ಇದು ಸುರಪುರದಿಂದ ೬ ಕಿ.ಮೀ. ದೂರದಲ್ಲಿರುವ ಒಂದು ಐತಿಹಾಸಿಕ ಗ್ರಾಮ. ಇಲ್ಲಿ ನೆಲಮನೆ ತಿಮ್ಮಪ್ಪನೆಂಬ ದೇವರ ದೇವಸ್ಥಾನವಿದೆ. ಈ ಗ್ರಾಮದ ಬೆಟ್ಟ ವಿಸ್ತಾರವಾಗಿದ್ದು ಅನೇಕ ಜೀವಜಂತುಗಳನ್ನು ಒಳಗೊಂಡಿದೆ.

**ಶಹಪೂರದ ಗುಡ್ಡ:** ಸಗರನಾಡಿನ ಒಂದು ಪ್ರಮುಖ ಪಟ್ಟಣ ಅಥವಾ ತಾಲೂಕು ಶಹಾಪೂರು. ಇದು ಈ ನಾಡಿನ ಮಧ್ಯದಲ್ಲಿ ಇದೆ. ಇಲ್ಲಿರುವ ಒಂದು ಬೆಟ್ಟ ಗೌತಮ ಬುದ್ಧ ಮಲಗಿದಂತೆ ಇದೆ. ಇದು ಜನಪ್ರೀಯವಾದ ಗುಡ್ಡ ಎಂದು ಹೇಳಬಹುದು. ಇದು ವಿಶಾಲ ವಿಸ್ತಾರವಾಗಿ ಹರಡಿಕೊಂಡಿರುವ ಗುಡ್ಡ. ಇಲ್ಲಿ ಕಾಡು ಹಂದಿ, ಉಡ, ಮೊಲಗಳು, ಏದುಗಳನ್ನು ಬೇಟೆಯಾಡಲು ಹೋಗುತ್ತಿದ್ದರು.

**ಯಾದಗಿರಿ ಬೆಟ್ಟ:** ಇದು ಸಗರನಾಡನ್ನು ಹೊಂದಿಕೊಂಡಿರುವ ಬೆಟ್ಟ ಇಲ್ಲಿ ವಿಶೇಷವಾಗಿ ಜಿಂಕೆಗಳೂ ವಾಸವಾಗಿರುವದರಿಂದ ಇಲ್ಲಿನ ಬೇಡರು ಈ ಬೆಟ್ಟಕ್ಕೆ ಬಂದು ಚಿಗರೆ ಬೇಟೆಯನ್ನು ಆಡುತ್ತಿದ್ದರು.

ಸಗರನಾಡಿನ ಸುರಪುರದ ಡೊಣ್ಣಿಗೇರಿ, ಮ್ಯಾಗೇರಿ, ಬಿಚ್ಚುಗತ್ತಿಗೇರಿ ಬೇಡ ಜನಾಂಗದವರು ತಮ್ಮ ಮೂಲ ಬೇಟೆ ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಈ ಕೇರಿಗಳ ಪ್ರತಿಯೊಂದು ಮನೆಯ ಮುಂದೆ ಬೇಟೆನಾಯಿಗಳನ್ನು ಕಾಣಬಹುದು. ಇವರು ಬೇಟೆಯಾಡಲು ರಾತ್ರಿಯ ಸಮಯವನ್ನು ಹೆಚ್ಚಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ೨೦೧೧ರಲ್ಲಿ ಡೊಣ್ಣಿಗೇರಿಯ ಬೇಡರು ಶಹಾಪೂರ ಬೆಟ್ಟಕ್ಕೆ ರಾತ್ರಿ ಬೇಟೆಯಾಡಲು ಹೋಗುವಾಗ ವಾಹನ ಅಪಘಾತಕ್ಕೆ ಈಡಾಗಿ ೩ ಜನ ಮರಣವನ್ನು ಹೊಂದಿದ್ದಾರೆ.

### ೪.೯ ಬೇಡರ ಸಾಮಾಜಿಕ ಜೀವನದಲ್ಲಿ ಘೋಷಾ ಪದ್ಧತಿ

ಪರದಾ ಪದ್ಧತಿಯ ಇನ್ನೊಂದು ಪ್ರತಿರೂಪವೇ ಈ ಸಗರನಾಡಿನ ಬೇಡರ ಘೋಷಾ ಪದ್ಧತಿ. ಈ ಹಿಂದೆ ಅಂದರೆ ಪೌರಾಣಿಕ ಕಾಲದಲ್ಲಿ ಬೇಡರಲ್ಲಿ ಈ ಪದ್ಧತಿ ಇರಲಿಲ್ಲ. ಕಾಲ ನಂತರ ಬೇಡರು ವಿವಿಧ ಪ್ರದೇಶಗಳಲ್ಲಿ ಸಂಸ್ಥಾನವನ್ನು ಸ್ಥಾಪಿಸಿಕೊಂಡು ರಾಜ್ಯಭಾರವನ್ನು ಮಾಡಲು ಪ್ರಾರಂಭಿಸಿದರು. ಅಂದಿನಿಂದ ಬೇಡ ದೊರೆಗಳು ಮುಸ್ಲಿಂ ಮಹಿಳೆಯರ ಪರದಾ ಪದ್ಧತಿಯಂತೆ ಬೇಡ ಮಹಿಳೆಯರಿಗಾಗಿ, ಅದರಲ್ಲಿಯೂ ವಿಶೇಷವಾಗಿ ಸಂಸ್ಥಾನಕ್ಕೆ ಸಂಬಂಧಪಟ್ಟಿರುವ ಮಹಿಳೆಯರಿಗೆ ಈ ಘೋಷ ಪದ್ಧತಿಯನ್ನು ಮಾಡಿದರು. ಸಗರನಾಡ ದೇವರು ಉತ್ತುಂಗದ ಸ್ಥಿತಿಯಲ್ಲಿದ್ದಾಗ ಪದ್ಧತಿಯನ್ನು ಜಾರಿಗೆ ತಂದರು. ಈ ಬೇಡ ಸಮುದಾಯದವರು ಈ ಸಂಪ್ರದಾಯವನ್ನು ಇಟ್ಟಿರುವುದಕ್ಕೆ ಹಿಂದೆ ಯಾವುದೋ ಪ್ರಬಲವಾದ ಕಾರಣವಿದೆ ಎಂಬ ಅನಿಸಿಕೆ ನನ್ನದು. ಆ ಕಾರಣ ಏನೆಂದರೆ ಸಗರನಾಡಿನಲ್ಲಿ ಅರಸರು ಬೇಡರಾಗಿದ್ದರು. ತಮ್ಮ ಘನತೆ ಗೌರವಕ್ಕಾಗಿ ತಮ್ಮ ವಂಶಜರಲ್ಲಿ ಈ ಪದ್ಧತಿಯನ್ನು

ಜಾರಿಗೆ ತಂದರು. ಹಾಗೂ ಅಂದರೆ ಮಧ್ಯಕಾಲೀನ ಯುಗ ತುಂಬಾ ಭೀಕರತೆಯಿಂದ ಕೂಡಿತ್ತು. ಹೈದರಾಬಾದಿನ ನಿಜಾಮ ಮತ್ತು ಮೊಘಲರ ದಬ್ಬಾಳಿಕೆ ಭಾರತ ದೇಶದಲ್ಲಿ ಭೀಕರವಾಗಿತ್ತು. ಈ ಕಾರಣದಿಂದ ಬೇಡರು ತಮ್ಮ ಮಹಿಳೆಯರ ರಕ್ಷಣೆ ಘನತೆ ಗೌರವಕ್ಕಾಗಿ ಈ ಘೋಷ ಪದ್ಧತಿಯನ್ನು ಆಚರಣೆಗೆ ತಂದಿರಬಹುದು.

ಘೋಷ ಪದ್ಧತಿ ಎಂದರೇನು? ಎನ್ನುವ ತವಕವನ್ನು ತಿಳಿದುಕೊಳ್ಳಲು ಗ್ರಂಥಗಳ ಮೊರೆಹೋದಾಗ, ಕನ್ನಡ ಶಬ್ದ ಕೋಶದಲ್ಲಿ ಘೋಷಾ ಏಕಾಂತ ಬುರುಕ ಎನ್ನುವ ಅರ್ಥ ಲಭ್ಯವಾಯಿತು. ಇದರ ಆಚರಣೆ ಮೈಗೂಡಿಸಿಕೊಂಡು ಮಹಿಳೆಯರು ಸಾರ್ವಜನಿಕವಾಗಿ ಪಾಲ್ಗೊಳ್ಳದೆ ಏಕಾಂತತೆಯನ್ನು ನಿರ್ವಹಿಸಬೇಕಾಗಿತ್ತು. ಮುಖಕ್ಕೆ ಪರದೇ ಧರಿಸುವ ಕ್ರಮವು ಜಾರಿಯಲ್ಲಿತ್ತು ಎನ್ನುವ ವಿಚಾರ ನಮ್ಮ ಗಮನಕ್ಕೆ ಬರುತ್ತದೆ.

ಈ ಮೊದಲು ಮತ್ತು ಈಗಲೂ ರಾಜವಂಶಕ್ಕೆ ಸೇರಿದ ಬೇಡ ಮಹಿಳೆಯರು ಯಾವುದಾದರೂ ಊರಿಗೆ ಹೋಗಬೇಕಾದರೆ ಆಟೋ ರಿಕ್ಷಾಗಳಿಗೆ ಪರದೆಯನ್ನು ಕಟ್ಟಿಕೊಂಡು ಹೋಗುತ್ತಾರೆ. ಹಾಗೂ ಈ ಹಿಂದೆ ಮಹಿಳೆಯರು ಬಸ್ಸಿಗೆ ಪ್ರಯಾಣ ಮಾಡುವ ಸಂದರ್ಭ ಬಂದರೆ ಬಸ್ಸಿನ ಒಳಗಡೆ ಅವರು ಕುಳಿತುಕೊಳ್ಳುವ ಸೀಟಿಗೂ ಪರದೆಯನ್ನು ಕಟ್ಟಿಕೊಳ್ಳುತ್ತಿದ್ದರಂತೆ. ಈಗಲೂ ಕೂಡ ಮಹಿಳೆಯರು ಸುರಪುರ ಮತ್ತು ಜೇವರ್ಗಿಯ ಸಾರ್ವಜನಿಕ ಸ್ಥಳಗಳಲ್ಲಿ ತಿರುಗಾಡುವ ಹಾಗಿಲ್ಲ. ಪ್ರಸ್ತುತ ಆಧುನೀಕರಣ, ಜಾಗತೀಕರಣ, ಪಾಶ್ಚಾತ್ಯೀಕರಣದ ಪ್ರಭಾವ ಇಂದಿನ ಬೇಡರ ಮೇಲೆ ಆಗಿರುವುದರಿಂದ ಇವರು ಈಗ ತಮ್ಮ ಮನೆಯ ಮಹಿಳೆಯರನ್ನು ಶಾಲಾ, ಕಾಲೇಜುಗಳಿಗೆ ಕಳಿಸುತ್ತಿದ್ದಾರೆ. ಈಗ ರಾಜ ಮನೆತನದ ಕೆಲವು ಕುಟುಂಬಗಳಲ್ಲಿ ಮತ್ತು ಜೇವರ್ಗಿ ತಾಲೂಕಿನ ನರಿಬೋಳ ಮತ್ತು ಹಸನಾಪುರದ ಸುಬೇದಾರ ಕುಟುಂಬಗಳಲ್ಲಿ ಈ ಪದ್ಧತಿ ಇದೆ.

**ಘೋಷಾ ಪದ್ಧತಿಯ ಪ್ರೇರಕ ಅಂಶಗಳು:**

**ಮಧ್ಯಕಾಲದಲ್ಲಿ ಮಹಿಳೆಯರ ರಕ್ಷಣೆಗಾಗಿ:** ‘ಮಧ್ಯಕಾಲೀನ ಇತಿಹಾಸವು ಸ್ತ್ರೀಯರ ಪಾಲಿಗೆ ಅಂಧಕಾರದ ಸಂದರ್ಭವೆಂದು ಹೇಳಬಹುದು. ಏಕೆಂದರೆ ಅವರ ಸಂಧರ್ಭದಲ್ಲಿ ಮುಸ್ಲಿಂ ಆಳರಸರು ದಾಳಿಕೋರರು ಹಿಂದು ಮಹಿಳೆಯರ ಮೇಲೆ ದೌರ್ಜನ್ಯವನ್ನು ಮಾಡುತ್ತಿದ್ದರು. ಈ ಕಾರಣದಿಂದ ಅರಸು ಮನೆತನ ಜಮೀನುದಾರರ ಮನೆತನ, ಗೌಡರ ಮನೆತನ, ಸುಬೇದಾರರ ಮನೆತನಗಳಲ್ಲಿ ಈ ಪದ್ಧತಿ ಜಾರಿಗೆ ಬಂದಿತು.

**ಮಹಿಳೆಯರ ಗೌರವ ಘನತೆಗಾಗಿ:** ಸಗರನಾಡಿನ ಬೇಡ ಮಹಿಳೆಯರಿಗೆ ಇರುವ ಗೌರವ ಸಮಾಜದ ಇತರ ಜಾತಿಯ ಮಹಿಳೆಯರಿಗೆ ಈ ಹಿಂದೆ ಇರಲಿಲ್ಲಾ. ಕಾರಣ ಬೇಡ ಮಹಿಳೆಯರು ರಾಜ ಮನೆತನಕ್ಕೆ ಸೇರಿದವರು ಆಗಿದ್ದರಿಂದ ಅವರನ್ನು ಪುರುಷರು

ತಲೆ ಎತ್ತಿ ನೋಡುತ್ತಿರಲಿಲ್ಲ. ಸಗರನಾಡಿನಲ್ಲಿ ಯಾವ ಬೇಡ ಕುಟುಂಬವೂ ಈ ಪದ್ಧತಿಯನ್ನು ಅನುಸರಿಸುತ್ತದೆಯೋ ಆ ಕುಟುಂಬ ಗೌರವಕ್ಕೆ ಪಾತ್ರವಾಗಿತ್ತು. ಆದಕಾರಣ ಇದನ್ನು ಮುಂದುವರೆಸಿಕೊಂಡು ಬಂದರು.

**ಅರಸು ಪರಿಸರದ ಪ್ರಭಾವ:** ಸಗರನಾಡಿನ ಬೇಡರು ಕಾಲಗತಿಯಲ್ಲಿ ಪ್ರವರ್ಧಮಾನಕ್ಕೆ ಬಂದಂತೆ ತಮ್ಮ ಅರಸರ ವೈಭವಯುತ ಜೀವನವನ್ನು ನೋಡಿ ಅದೇ ವೈಭವದ ಸಿರಿಯನ್ನು ತಮ್ಮ ಕುಟುಂಬದಲ್ಲಿ ಅನುಸರಿಸಲು ಪ್ರಯತ್ನಿಸಿರುವುದು ಇಲ್ಲಿ ಕಂಡುಬರುತ್ತದೆ. ಏಕೆಂದರೆ ಇದೇ ಬೇಡ ಸಮುದಾಯದ ಸಾಮಾನ್ಯ ಬೇಡರು ತಮ್ಮ ಕುಟುಂಬದಲ್ಲಿ ಇವರಂತೆ ವೈಭವದ ಜೀವನ ರೂಢಿಸಿಕೊಂಡಿಲ್ಲ. ಕೇವಲ ಅರಸು ಮನೆತನದವರು ಮಾತ್ರ ಈ ಘೋಷಾ ಪದ್ಧತಿಯನ್ನು ಅನುಸರಿಸುವುದು ಕಂಡುಬರುತ್ತದೆ.'[೬]

**ಘೋಷಾ ಪದ್ಧತಿಯ ಅನುಕೂಲಗಳು:**

- ಸಮಾಜದಲ್ಲಿ ಗೌರವ ಭಾವನೆಯಿತ್ತು.
- ಈ ಸಮುದಾಯದಲ್ಲಿ ಅಂತಸ್ಥಿನ ನೆಲೆಯಲ್ಲಿ ಗುರುತಿಸುವಿಕೆ.
- ಜನ ಸಾಮಾನ್ಯರು ಅತಿ ಗೌರವ ಭಾವನೆಯಿಂದ ಕಾಣುತ್ತಿದ್ದರು.
- ಉತ್ಸವ, ಜಾತ್ರೆ, ಸಭೆ ಮತ್ತು ಸಮಾರಂಭಗಳಲ್ಲಿ ವಿಶೇಷ ಪ್ರಾತಿನಿಧ್ಯ ನೀಡುತ್ತಿದ್ದರು.
- ಅರಮನೆಯಲ್ಲಿ ಮಾತ್ರ ವಿದ್ಯೆ ಕಲಿಯಲು ಅವಕಾಶ.

**ಘೋಷಾ ಪದ್ಧತಿಯ ಅನಾನುಕೂಲಗಳು:**

- ಮಹಿಳಾ ಸ್ವಾತಂತ್ರಕ್ಕೆ ಧಕ್ಕೆ.
- ಅರಮನೆಯಲ್ಲಿ ಮಹಿಳೆಯರು ಸ್ವಚ್ಛಂದವಾಗಿ ಓಡಾಡುವಂತಿರಲಿಲ್ಲಾ.
- ನಾಲ್ಕು ಗೋಡೆಗಳ ಮಧ್ಯದಲ್ಲಿಯೇ ಇರಬೇಕಾಗಿತ್ತು.
- ಅಭಿವ್ಯಕ್ತಿ ಸ್ವಾತಂತ್ರ್ಯವಿರಲಿಲ್ಲಾ.
- ಸಾಮಾನ್ಯ ಬೇಡ ಮಹಿಳೆಯರಂತೆ ಸ್ವತಂತ್ರವಾಗಿ ಜೀವಿಸುವ ಹಕ್ಕು ಅರಸು ಮನೆತನದ ಮಹಿಳೆಯರಿಗೆ ಇರಲಿಲ್ಲಾ.

ಹೀಗೆ ಘೋಷಾ ಪದ್ಧತಿಯಿಂದ ಬೇಡ ಸಮುದಾಯಕ್ಕೆ ಅನುಕೂಲತೆಯು ಇದೆ. ಪ್ರಸ್ತುತ ದಿನಮಾನಗಳಲ್ಲಿ ಘೋಷಾ ಪದ್ಧತಿ ನಶಿಸಿ ಹೋಗುತ್ತಿದೆ. ಒಂದು ರೀತಿಯಲ್ಲಿ ಬೇಡ ಮಹಿಳೆಯರ ಅಭಿವೃದ್ಧಿಗೆ ಇದು ಅಡ್ಡಿಯುಂಟುಮಾಡುತ್ತಿದೆ. ಈ ಬಗ್ಗೆ ಬೇಡ ಸಮುದಾಯದ ಹಿರಿಯರನ್ನು ರಾಜವಂಶಸ್ಥರ ಅಭಿಪ್ರಾಯವನ್ನು ತಿಳಿದುಕೊಂಡಾಗ ಘೋಷಾ

ಪದ್ಧತಿಯ ಬಗ್ಗೆ ಒಲವನ್ನು ವ್ಯಕ್ತ ಪಡಿಸುತ್ತಾರೆ. ವಿಚಿತ್ರವೆಂದರೆ ಬೇಡ ಮಹಿಳೆಯರು ಕೂಡಾ ಈ ಪದ್ಧತಿಯನ್ನು ಒಪ್ಪುತ್ತಾರೆ.

**೪.೧೦ ಬೇಡ ಮಹಿಳೆಯರ ಸ್ಥಾನಮಾನ:**

ಸಗರನಾಡಿನ ಬೇಡ ಸಮುದಾಯದಲ್ಲಿ ಮಹಿಳೆಯಾದವಳು ನಿರಂತರವಾಗಿ ಸಮಾಜದಲ್ಲಿ ಏರಿಳಿತಗಳನ್ನು ಕಂಡಿದ್ದಾಳೆ. ಮಹಿಳೆಯರಿಗೆ ಎಷ್ಟು ಗೌರವ ಸ್ಥಾನಮಾನಗಳು ಇದ್ದವೋ ಅಷ್ಟೇ ಕೀಳರಿಮೆಯ ಭಾವನೆಯೂ ಇತ್ತು. ಬೇಡ ಮಹಿಳೆಯರ ಹಿಂದಿನ ಸಾಮಾಜಿಕ ಸ್ಥಾನಮಾನಗಳನ್ನು ನೋಡಿದಾಗ ಮಹಿಳೆ ನಾಲ್ಕು ಗೋಡೆಯ ಮಧ್ಯೆಯೇ ಇರಬೇಕಾಗಿತ್ತು. ಅವಳಿಗೆ ಶಿಕ್ಷಣ ಸ್ವಾತಂತ್ರ್ಯ ಎಂಬುವುದು ಕನಸಿನ ಮಾತಾಗಿತ್ತು. ಬಡ ಬೇಡ ಮಹಿಳೆಯರು ಅಂದು ಜಮೀನುದಾರರು, ಸಾಹುಕಾರರು, ರಾಜರ ಮನೆಗಳಲ್ಲಿ ಕೆಲಸಕ್ಕೆ ಇರುತ್ತಿದ್ದರು. ಪ್ರಸ್ತುತ ಈಗಲೂ ಕೂಡಾ ಮಹಿಳೆಯರ ಪರಿಸ್ಥಿತಿ ಹೀಗೆಯೇ ಇದ್ದರೂ ಸ್ವಲ್ಪ ಮಟ್ಟಿಗೆ ಚೇತರಿಸಿಕೊಂಡಿದ್ದಾರೆ. ಬೆರಳಣಿಕೆಯಷ್ಟು ಶ್ರೀಮಂತ ಬೇಡ ಮಹಿಳೆಯರು ಆರಾಮ ಜೀವನವನ್ನು ನಡೆಸಿದರೆ ಬಡ ಬೇಡ ಮಹಿಳೆಯರು ಈಗಲೂ ಕೂಡ ಕಷ್ಟಕರ ಜೀವನವನ್ನು ಸಾಗಿಸುತ್ತಿದ್ದಾರೆ. ಶ್ರೀಮಂತ ಮಹಿಳೆಯರ ವಿದ್ಯಾಭ್ಯಾಸದ ಬಗ್ಗೆ ತಿಳುವಳಿಕೆಯುಳ್ಳವರಾಗಿದ್ದರಿಂದ ತಮ್ಮ ಮಕ್ಕಳ ಬಗ್ಗೆ ಹೆಚ್ಚಿನ ಗಮನವನ್ನು ಹರಿಸುತ್ತಿದ್ದಾರೆ. ಆದರೆ ಬಡ ಬೇಡ ಮಹಿಳೆಯರು ತಮ್ಮ ಮಕ್ಕಳ ಬಗ್ಗೆ ಗಮನವನ್ನು ಹರಿಸುತ್ತಿಲ್ಲಾ. ಶಾಲೆಗೆ ಕಳುಹಿಸುವುದರ ಬದಲಿಗೆ ಕೂಲಿ ಮಾಡುವುದಕ್ಕೆ ಕಳುಹಿಸಿದರೆ ನಮಗೆ ಎರಡು ಹೊತ್ತಿನ ಊಟಕ್ಕೆ ಯಾವುದೇ ಕೊರತೆಯಾಗುವುದಿಲ್ಲ ಎಂಬ ಮನೋಭಾವನೆ ಇವರಲ್ಲಿ ಮೂಡಿದೆ. ಸಗರನಾಡಿನ ಸುರಪುರ, ಶಹಾಪುರ ಜೇವರ್ಗಿ ತಾಲೂಕುಗಳಲ್ಲಿ ಬೇಡ ಮಹಿಳೆಯರ ಸಾಕ್ಷರತಾ ಕ್ರಮ ತೀರ ಕಡಿಮೆ ಇದೆ. ಗ್ರಾಮಗಳಲ್ಲಿರುವ ಮಹಿಳೆಯರು ಬೆಳಿಗ್ಗೆ ಎದ್ದು ಮನೆಯ ಕೆಲಸ ಕಾರ್ಯಗಳನ್ನು ಮುಗಿಸಿ ಬೇರೆಯವರ ಹೊಲ ಗದ್ದೆಗಳಿಗೆ ಹೋಗಿ ದುಡಿಯುತ್ತಾರೆ. ಸುರಪುರ, ಶಹಾಪುರ ನೀರಾವರಿ ಸೌಲಭ್ಯವನ್ನು ಹೊಂದಿರುವುದರಿಂದ ಇಲ್ಲಿ ಭತ್ತವನ್ನು ಅತಿಯಾಗಿ ಬೆಳೆಯುತ್ತಾರೆ. ಬೇಡ ಮನೆತನದವರು ಭತ್ತ ನಾಟಿ ಮಾಡಲು ಹತ್ತಿ ಬಿಡಿಸಲು ಹೋಗಿ ದಿನಕ್ಕೆ ೭೦ ರಿಂದ ೮೦ ರೂಪಾಯಿ ಕೂಲಿಯನ್ನು ತಂದು ಜೀವನೋಪಾಯ ಮಾಡುತ್ತಾರೆ. ಇದು ಗ್ರಾಮಗಳಲ್ಲಿ ಇರುವ ಮಹಿಳೆಯರ ಸ್ಥಿತಿಗತಿ. ಆದರೆ ಸುರಪುರ ಶಹಾಪುರ ಜೇವರ್ಗಿ ಪಟ್ಟಣಗಳಲ್ಲಿ ಇರುವ ಬೇಡ ಮಹಿಳೆಯರು ತಮ್ಮ ಉಪಜೀವನಕ್ಕಾಗಿ ಗಂಡಂದಿರ ಜೊತೆ ಹುಣಸಿ ಮರಗಳನ್ನು ಗುತ್ತಿಗೆ ಹಿಡಿದು ಕಾಯಿಯಾದ ಮೇಲೆ ಪುರುಷರಂತೆ ಮರವನ್ನು ಏರಿ ಹಣ್ಣುಗಳನ್ನು ಉದುರಿಸಿ ದೂರದ ಹೈದರಾಬಾದಿಗೆ ಹೋಗಿ ಮಾರಾಟ ಮಾಡಿಕೊಂಡು ಬರುತ್ತಾರೆ. ಮಾರಾಟ ಮಾಡಿಕೊಂಡು ಬಂದಂತಹ ಹಣವನ್ನು ವರ್ಷಪೂರ್ತಿ ಜೀವನೋಪಾಯಕ್ಕಾಗಿ ಖರ್ಚು ಮಾಡುತ್ತಾರೆ.

ಅಲ್ಲದೇ ಸುರಪುರ ಶಾಹಾಪುರ ಬೆಟ್ಟಗಳಲ್ಲಿ ಬೆಳೆದಿರುವ ಸೀತಾಫಲ ಹಣ್ಣುಗಳನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡಲು ಕೊಡುತ್ತಾರೆ. ಅಷ್ಟೇ ಅಲ್ಲದೇ ಮಾವಿನಹಣ್ಣು, ಬಾಳೆಹಣ್ಣು, ಸೇಬುಹಣ್ಣು ಇನ್ನಿತರ ಹಣ್ಣುಗಳನ್ನು ಮಾರಾಟ ಮಾಡಿ ಬಂದಂತಹ ಅಲ್ಪ ಹಣದಿಂದ ಸಾಂಸಾರಿಕ ಖರ್ಚು ವೆಚ್ಚಗಳನ್ನು ನೋಡಿಕೊಳ್ಳುತ್ತಾರೆ. ಮಹಿಳೆಯರು ಪುರುಷರಷ್ಟೇ ದುಡಿದರೆ ಅವಳಿಗೆ ಸಿಗುವ ದಿನದ ಸಂಬಳ ತೀರ ಕಡಿಮೆ. ಅವರನ್ನು ಸಾಮಾಜಿಕ ಭದ್ರತೆಯಿಂದ ವಂಚಿಸಿ ಶೋಷಣೆ ಮಾಡಲಾಗುತ್ತಿದೆ. ಇದರ ಜೊತೆಗೆ ಗಂಡಂದಿರ ದೌರ್ಜನ್ಯವು ಕೂಡ ಅತಿಯಾಗಿರುತ್ತದೆ. ಮಕ್ಕಳ ಲಾಲನೆ, ಪಾಲನೆ ಪೋಷಣೆಯ ಜೊತೆಗೆ ಗಂಡನ ಪೋಷಣೆಯನ್ನು ಮಾಡುತ್ತಾಳೆ. ಇದಕ್ಕಾಗಿಯೇ ಹೆಣ್ಣನ್ನು ಭೂಮಿತಾಯಿಗೆ ಹೋಲಿಸಿದ್ದಾರೆ. ಸುರಪುರದ ಕೆಲವು ಕೇರಿಗಳಲ್ಲಿ ಮಹಿಳೆಯಾದವಳು ಹೊರಗಡೆ ದುಡಿಯಲು ಹೋದರೆ ಪುರುಷರಾದವರು ಪಕ್ಕದಲ್ಲೇ ಇರುವ ಬೀರು, ಬ್ರಾಂಡಿ, ಸಾರಾಯಿ ಅಂಗಡಿಗಳಿಗೆ ಹೋಗುತ್ತಾರೆ. ಪುರುಷರ ಈ ಅನೈತಿಕ ಚಟುವಟಿಕೆಗಳೇ ಇವರು ಇನ್ನೂ ಗುಡಿಸಲುಗಳಲ್ಲಿಯೇ, ಜಂತಿ ಮನೆಗಳಲ್ಲಿಯೇ ವಾಸವಾಗಿರುವುದಕ್ಕೆ ಪ್ರಮುಖ ಕಾರಣ. ಆದರೆ ಈ ಹಿಂದೆ ಬೇಡ ಮಹಿಳೆಯರು ರಾಣಿಯರಾಗಿ ಮೆರೆದಿದ್ದಾರೆ. ಉದಾ: ರಾಣಿ ಕಾಂತಮ್ಮ, ರಾಣಿ ಈಶ್ವರಮ್ಮ, ಅಮ್ಮ ನಾಗತ್ತಿ, ರಾಣಿ ರಂಗಮ್ಮ, ರಾಣಿ ಲಕ್ಷ್ಮಮ್ಮ. ಇಂದು ಇವರ ಹೆಸರಿನ ಮೇಲೆ ಗ್ರಾಮಗಳಿಗೆ ಕೇರಿಗಳಿಗೆ ಹೆಸರನ್ನು ಇಟ್ಟಿದ್ದಾರೆ. ಪ್ರಸ್ತುತ ಸಗರನಾಡಿನ ಬೇಡ ಸಮುದಾಯಗಳಲ್ಲಿ ಮಹಿಳೆಯರಿಗೆ ಸ್ವಲ್ಪ ಮಟ್ಟಿನ ಸ್ವಾತಂತ್ರ್ಯವಿರುತ್ತಿರುವುದು ಸಂತೋಷದ ಸಂಗತಿ. ಮೊದಲಿದ್ದಂತೆ ಘೋಷ ಪದ್ಧತಿ ಕ್ರಮೇಣ ಈಗ ಕಡಿಮೆಯಾಗುತ್ತಿದೆ. ಬೇಡರು ಹೆಣ್ಣು ಮಕ್ಕಳಿಗೆ ಶಿಕ್ಷಣವನ್ನು ಕೊಡಿಸಿ ಉದ್ಯೋಗಕ್ಕೆ ಅನುಕೂಲ ಮಾಡಿ ಕೊಡುತ್ತಿದ್ದಾರೆ. ಇತ್ತೀಚಿನ ದಿನ ಮಾನಗಳಲ್ಲಿ ರಾಜಕೀಯದಲ್ಲಿ ಇವರಿಗೆ ಮೀಸಲಾತಿ ಕಲ್ಪಿಸಿರುವುದರಿಂದ ರಾಜಕೀಯವಾಗಿಯೂ ಪ್ರಬಲ ರಾಗುತ್ತಿದ್ದಾರೆ. ಇದು ಮಹಿಳೆಯರಿಗೆ ರಾಜಕೀಯವಾಗಿಯೂ ಮುಂದುವರೆಯಲು ಒಂದು ಉತ್ತಮ ಅವಕಾಶವಾಗಿದೆ. ಮಹಿಳೆಯರು ರಾಜಕೀಯವಾಗಿಯೂ ಮುಂದುವರೆಯಲು ಸಗರನಾಡಿನ ಬೇಡ ಸಮುದಾಯಗಳಲ್ಲಿ ಯಾವ ಅಭ್ಯಂತರವೂ ಇಲ್ಲಾ. ಉದಾ: ಬೇಡರ ಗೌರವಾನ್ವಿತ ಜಮೀನುದಾರರ ಮನೆಯಲ್ಲಿ ಹುಟ್ಟಿದ ರಾಣಿ ಕಲಾವತಿ ಅಮ್ಮನವರು ಇಂದು ದೇವಿಕೇರಿ ಗ್ರಾಮ ಪಂಚಾಯತಿಯ ಉಪಾಧ್ಯಕ್ಷರಾಗಿ ಹಾಗೂ ಅಧ್ಯಕ್ಷರಾಗಿ ಅಧಿಕಾರವನ್ನು ಚಲಾಯಿಸಿದ್ದಾರೆ. ಸುರಪುರ ತಾಲೂಕಿನ ದೇವರಗೋನಾಲದ ಬೇಡ ಮಹಿಳೆ ಸಾಬಮ್ಮ ಜಿ. ದೇಸಾಯಿ ಇಂದು ತಾಲೂಕ ಪಂಚಾಯತಿಯ ಸದಸ್ಯೆಯಾಗಿದ್ದಾಳೆ. ಇಂದು ಇಂತಹ ನೂರಾರು ಮಹಿಳೆಯರು ರಾಜಕೀಯ ಪ್ರವೇಶ ಮಾಡಿರುವುದು ಹೊಸ ಬದಲಾವಣೆಗೆ ನಾಂದಿ ಹಾಡಿದಂತಾಗಿದೆ. ಇನ್ನೂ ಮನೆಗಳ ವಿಷಯಕ್ಕೆ ಬಂದಾಗ ಮನೆಗಳಲ್ಲಿ ನಿರ್ಣಯವಾಗುವ ಪ್ರತಿಯೊಂದು ವಿಷಯದಲ್ಲೂ ಮಹಿಳೆಯ ಅಭಿಪ್ರಾಯ

ಮುಖ್ಯವಾಗಿರುತ್ತದೆ. ಮನೆಯಲ್ಲಿ ಆಗುಹೋಗುಗಳಲ್ಲಿ ಮಹಿಳೆಯರ ಪಾತ್ರ ತುಂಬಾ ಮುಖ್ಯ. ಇಂದು ಆಸ್ತಿಗಳಲ್ಲಿ ಕೂಡಾ ಮಹಿಳೆಯರಿಗೆ ಪುರುಷರಷ್ಟು ಸಮಾನ ಹಕ್ಕುಗಳು ದೊರೆಯುತ್ತಿವೆ. ಈ ಮೊದಲು ತೀರಾ ಕಡು ಬಡತನದಲ್ಲಿದ್ದ ಬೇಡ ಜಾತಿಯಲ್ಲಿ ಕೀಳು ಉಪಜಾತಿಗೆ ಸೇರಿದ ಮಹಿಳೆಯರನ್ನು ಅಂದು ದೇವದಾಸಿಯರನ್ನಾಗಿ (ಪಾತ್ರದವರು) ಮಾಡಲಾಗುತ್ತಿತ್ತು. ಆದರೆ ಇಂದು ಈ ಪದ್ಧತಿ ಸಂಪೂರ್ಣ ನಶಿಸಿಹೋಗಿದೆ. ಈ ವಂಶಕ್ಕೆ ಸೇರಿದ ಇಂದಿನ ಜನರು ಇಂದು ಗೌರವಾನ್ವಿತ ಜೀವನವನ್ನು ನಡೆಸುತ್ತಿದ್ದಾರೆ.

**ಸಗರನಾಡಿನಲ್ಲಿ ಬೇಡ ಮಹಿಳೆಯರು ಅನುಭವಿಸುತ್ತಿರುವ ಸಮಸ್ಯೆಗಳು:**

೧) ಬಾಲ್ಯ ವಿವಾಹ

೨) ವಿಧವಾ ವಿವಾಹ ನಿಷೇಧ

೩) ಘೋಷಾ ಪದ್ಧತಿ

೪) ದೇವದಾಸಿ ಪದ್ಧತಿ

೫) ಕಡಿಮೆ ಕೂಲಿ ನೀಡುವುದು

೬) ವರದಕ್ಷಿಣೆ ಸಮಸ್ಯೆ

೭) ಸ್ತ್ರೀ ಸ್ವಾತಂತ್ರ್ಯ ಇಲ್ಲದೆ ಇರುವುದು

೮) ಸ್ತ್ರೀಯರನ್ನು ಕೀಳಾಗಿ ಕಾಣುವುದು

೯) ಹೆಣ್ಣು ಶಿಶು ಹತ್ಯೆ

೧೦) ಮಹಿಳೆಯರಿಗೆ ಶಿಕ್ಷಣ ಕೊಡಿಸದೇ ಇರುವುದು

೧೧) ಲಿಂಗ ತಾರತಮ್ಯ ಮತ್ತು ಸ್ತ್ರೀಯರ ಮೇಲಿನ ದೌರ್ಜನ್ಯ

೧೨) ಬೇಡ ಮಹಿಳೆಯರ ರಾಜಕೀಯ ಸಹಭಾಗಿತ್ವ ಇಲ್ಲದೆ ಇರುವುದು

**ಬೇಡ ಮಹಿಳೆಯರ ಸ್ಥಾನಮಾನವನ್ನು ಎತ್ತರಿಸಲು ಸಹಾಯಕವಾದ ಅಂಶಗಳು**

**ಸಂವಿಧಾನ ಹಾಗೂ ಶಾಸನಗಳು**

**ಲಿಂಗ ತಾರತಮ್ಯವಿಲ್ಲದೆ ನೀಡಲಾದ ಸಂವಿಧಾನಿಕ ಸಮಾನತೆ:**

ಸ್ವಾತಂತ್ರ್ಯ ಭಾರತ ಸಂವಿಧಾನವು ಲಿಂಗತಾರತಮ್ಯ ಮಾಡದೆ ಸ್ತ್ರೀಯರಿಗೂ ಕೂಡ ಸಮಾನವಾದ ವೈಯಕ್ತಿಕ ಮೂಲಭೂತ ಹಕ್ಕುಗಳು, ವಿಚಾರ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ, ವೈವಾಹಿಕ, ರಾಜಕೀಯ, ಸಾಂಸ್ಕೃತಿಕ ಶೈಕ್ಷಣಿಕ ಸ್ವಾತಂತ್ರ್ಯ ಹೀಗೆ ಎಲ್ಲಾ ಬಗೆಯ ಸ್ವಾತಂತ್ರ್ಯವನ್ನು ನೀಡಬಹುದಾಗಿದೆ.

(ಹಿಂದೂಗಳಿಗೆ ಸರ್ವಸಮ್ಮತವಾದ ಶಾಸನಗಳೇ ಈ ಸಮುದಾಯಕ್ಕೂ ಅನ್ವಯಿಸುತ್ತವೆ)

**ಸಾಮಾಜಿಕ ಶಾಸನಗಳು**

**೧) ಹಿಂದೂ ವಿವಾಹ ಕಾಯ್ದೆ:** 'ಈ ಶಾಸನವು ಬಹು ಪತ್ನಿತ್ವ, ದ್ವಿಪತ್ನಿತ್ವ ಮತ್ತು ಬಾಲ್ಯ ವಿವಾಹದ ಆಚರಣೆಗಳನ್ನು ನಿಷೇಧಿಸುವುದು. ಹಾಗೂ ಸ್ತ್ರೀಯರಿಗೂ ವಿಚ್ಛೇದನದ ಹಾಗೂ ಪುನರ್ ವಿವಾಹದ ಹಕ್ಕನ್ನು ನೀಡಿರುವುದು.

**೨) ಹಿಂದೂ ಉತ್ತರಾಧಿಕಾರದ ಕಾಯ್ದೆ:** (೧೯೫೬) ಇದು ಪಿತ್ರಾರ್ಜಿತ ಆಸ್ತಿಯಲ್ಲಿ ಸ್ತ್ರೀಯರಿಗೂ ಉತ್ತರಾಧಿಕಾರದ ಹಕ್ಕು ನೀಡುವುದು.

**೩) ಹಿಂದೂ ದತ್ತು ಮತ್ತು ಜೀವನಾಂಶ ಕಾಯ್ದೆ:** (೧೯೫೬) ಈ ಕಾಯ್ದೆಯು ದತ್ತು ಮಕ್ಕಳನ್ನು ಪಡೆಯುವ ಹಕ್ಕನ್ನು ಮತ್ತು ಗಂಡನಿಂದ ನಿರಾಕರಣೆಗೊಂಡ ಅಥವಾ ಪರಿತ್ಯಕ್ತಳಾದ ಪತ್ನಿಗೆ ಆತನಿಂದ ಜೀವನಾಂಶ ಪಡೆಯುವ ಹಕ್ಕನ್ನು ನೀಡುತ್ತದೆ.

**೪) ವೈಯಕ್ತಿಕ ಗರ್ಭ ನಿವಾರಣಾ ಕಾಯ್ದೆ:** (೧೯೭೧) ಭ್ರೂಣ ಹತ್ಯೆಯನ್ನು ತಡೆಗಟ್ಟಲು ಜಾರಿಗೆ ತರಲಾಗಿದೆ.

**೫) ವರದಕ್ಷಿಣೆ ನಿಷೇಧ ಕಾಯ್ದೆ:** (೧೯೬೧) ಈ ಕಾಯ್ದೆಯಂತೆ ಸ್ತ್ರೀಯರ ಶೋಷಣೆಗೆ ಕಾರಣವಾದ ವರದಕ್ಷಿಣೆ ಪಿಡುಗನ್ನು ನಿಷೇಧಿಸಲಾಗಿದೆ.'[೮]

### ೪.೧೧ ಬೇಡ ಸಮುದಾಯದ ಕಲೆ ಮತ್ತು ಕ್ರೀಡೆ:

ಸಗರನಾಡಿನ ಬೇಡರು ಹಿಂದಿನಿಂದಲೂ ಕಲೆ ಕ್ರೀಡೆಗಳಿಗೆ ಮಹತ್ವವನ್ನು ಕೊಡುತ್ತಾ ಬಂದಿದ್ದಾರೆ. ಹಲವಾರು ರೀತಿಯ ಕಲೆ-ಕ್ರೀಡೆಗಳು ಇವರಲ್ಲಿ ಕರಗತವಾಗಿದೆ. ಸಮಯ ಸಂಧರ್ಭಕ್ಕೆ ಅನುಗುಣವಾಗಿ ಅವುಗಳನ್ನು ಪ್ರದರ್ಶನ ಮಾಡುತ್ತಾರೆ. ಉದಾ: ಚಿತ್ರಕಲೆ, ಗಾಯನ ಕಲೆ, ಭಜನೆಕಲೆ, ಪಟ್ಟೆ ತಿರುಗಿಸುವ ಕಲೆ, ದೇಹ ಧಾರಢ್ಯ ಮತ್ತು ಭಾರ ಎತ್ತುವುದು, ಬೆಂಕಿ ಭರಾಟೆ, ಹುಲಿವೇಷ, ಅಲಾಯಿ ಕುಣಿತ, ನಾಟಕ, ಇನ್ನೂ ಕ್ರೀಡೆ ಪಂದ್ಯಾಟಗಳಿಗೆ ಸಂಬಂಧಿಸಿದ ವಿಷಯಗಳೆಂದರೆ ಕುಸ್ತಿ ಆಟ, ಕೋಳಿ ಪಂದ್ಯ, ಟಗರಿನ ಕಾಳಗ, ಪಂಚಮಿ ಆಟಗಳು, ಮಹಾನವಮಿಯ ಕ್ರೀಡೆಗಳು ಹೀಗೆ ಅನೇಕ ಕಲೆ-ಕ್ರೀಡೆಗಳನ್ನು ಬೇಡರು ಇಂದಿಗೂ ಆಡುತ್ತಾ ಬಂದಿದ್ದಾರೆ.

**ಚಿತ್ರಕಲೆ:** ಭಾರತೀಯ ಸಾಂಪ್ರದಾಯಿಕ ಚಿತ್ರಕಲೆಯಲ್ಲಿ ಮೊಘಲ್, ರಾಜಸ್ತಾನಿ, ಪಾಹಾದಿ, ಚಿತ್ರಕಲೆಯೊಂದಿಗೆ ವಿಜಯನಗರ, ಬಿಜಾಪುರ, ಹೈದ್ರಾಬಾದ, ತಂಜಾವೂರು, ಮೈಸೂರು ಮುಂತಾದ ಪ್ರಾದೇಶಿಕ ಕಲೆಗಳನ್ನು ಗುರುತಿಸಲಾಗಿದೆ. ಇಂಥದೇ ಪ್ರಾದೇಶಿಕ ಕಲೆಗಳಲ್ಲಿ ಸುರುಪುರ ಚಿತ್ರ ಕಲೆಯೂ ಒಂದು. ಈ ಕಲೆ ತನ್ನ ವಿಶಿಷ್ಟ ರಚನೆ ತಂತ್ರಗಾರಿಕೆ ಹಾಗೂ ಪ್ರಾದೇಶಿಕ ವೈಶಿಷ್ಟ್ಯಗಳಿಂದಾಗಿ ಸ್ವತಂತ್ರ ಶೈಲಿಯನ್ನು ಕಂಡುಕೊಂಡಿತು.

ಸುರಪುರ ಸಂಸ್ಥಾನಿಕರ ಆಶ್ರಯ ಪೋಷಣೆಯಲ್ಲಿ ಸಂಸ್ಥಾನದ ಹೆಸರಿನೊಂದಿಗೆ ಬೆಳೆದು ಬಂದ ಸಗರನಾಡಿನ ಸುರಪುರ ಚಿತ್ರಕಲೆ ಇಂದು ವಿಶ್ವದ ಗಮನ ಸೆಳೆಯುತ್ತಿದೆ. ಇಂದು ವಿಶ್ವದ ಗಮನ ಸೆಳೆಯಲು ಸಗರನಾಡಿನ ಬೇಡ ದೊರೆಗಳ ಆಶ್ರಯದಲ್ಲಿದ್ದ ಗರುಡಾದ್ರಿ ಮನೆತನದವರು ಎಂದು ಹೇಳಬಹುದು, ಬೇಡ ದೊರೆಗಳು ಚಿತ್ರಕಲೆಗಳನ್ನು ಹೆಚ್ಚಾಗಿ ಪ್ರೀತಿಸುತ್ತಿರುವುದರಿಂದ ಗರುಡಾದ್ರಿಯರಿಂದ ಅರಮನೆಯಲ್ಲಿ, ಮಠ, ಮಂದಿರಗಳಲ್ಲಿ, ದೇವಸ್ಥಾನಗಳಲ್ಲಿ ಅನೇಕ ಚಿತ್ರಗಳನ್ನು ಬರೆಸಲ್ಪಟ್ಟಿದ್ದಾರೆ. ಅಲ್ಲದೆ ಕಲಾಶಕ್ತಿ ಬೇಡ ರಾಜರುಗಳು ತಮ್ಮ ಅರಮನೆ ಹಾಗೂ ಅಂತಃಪುರಗಳಲ್ಲಿ ಭಿತ್ತಿ ಚಿತ್ರಗಳಿಂದ ಅಲಂಕರಿಸುತ್ತಾ ಬಂದಿರುವುದು ನಮಗೆ ಇತಿಹಾಸದುದ್ದಕ್ಕೂ ತಿಳಿದುಬರುತ್ತದೆ. ಇದು ಹೊಸ ಅರಮನೆಯ ಪ್ರವೇಶ ದ್ವಾರದ ಎದುರಿಗೆ ಶೇಷಶಯನ ವಿಷ್ಣುವಿನ ವರ್ಣಚಿತ್ರವೊಂದು ಉಳಿದಿದ್ದು ಬಹುಪಾಲು ಚಿತ್ರಗಳು ನಶಿಸಿಹೋಗಿವೆ. ಅಶೋಕ ವನದಲ್ಲಿ ಸೀತೆಯ ವರ್ಣಚಿತ್ರ, ರಾಮ ಸೀತೆಯರ ದರ್ಶನ, ಶಿವನ ಒಡ್ಡೋಲಗ, ಸಿದ್ಧರಾಮೇಶ್ವರನಿಗೆ ಶಿವತತ್ವ ಬೋಧನೆ, ಪಾರ್ವತಿಯ ಪ್ರಶ್ನೆ, ಅಕ್ಕನಾಗಮ್ಮನ ಸ್ವಪ್ನ ಚಿತ್ರ, ಚಂದ್ರೋದಯದ ವರ್ಣನೆ ವರ್ಣಚಿತ್ರ, ವಿಷ್ಣುವಿನ ಚಕ್ರಪ್ರಧಾನ ವರ್ಣ ಚಿತ್ರ, ಸುರಪುರದ ಪಂಚಾಂಗ ವಿನ್ಯಾಸ ಹೀಗೆ ಸಗರನಾಡಿನ ಎಲ್ಲಾ ಕಡೆಗಳಲ್ಲಿ ಹಸ್ತಪ್ರತಿ ವರ್ಣಚಿತ್ರಗಳನ್ನು ಕಾಣಬಹುದು. ಮತ್ತು ಗರುಡಾದ್ರಿ ಮನೆತನದವರು ಬೇಡ ರಾಜರುಗಳ ಅನೇಕ ಭಾವಚಿತ್ರಗಳನ್ನು ಚಿತ್ರಿಸಿದ್ದಾರೆ. ಹರಸಂಗಿ ಪಾಮನಾಯಕ ಭಾವಚಿತ್ರ, ಪಿತಾಂಬರ ಬಹರಿ ಪಿಡ್ಡನಾಯಕನ ಭಾವಚಿತ್ರ, ಮೊಂಡಗೈ ವೆಂಕಟಪ್ಪನಾಯಕನ ಭಾವಚಿತ್ರ, ನಾಲ್ವಡಿ ವೆಂಕಟಪ್ಪನಾಯಕರ ಭಾವಚಿತ್ರ ಹೀಗೆ ಹಲವಾರು ಭಾವಚಿತ್ರಗಳನ್ನು ಸುರಪುರದ ಅರಮನೆಯಲ್ಲಿ ಇಂದಿಗೂ ಕಾಣಬಹುದಾಗಿದೆ.

**ಗಾಯನ ಕಲೆ**: ಸುರಪುರದ ನಾಲ್ವಡಿ ವೆಂಕಟಪ್ಪ ನಾಯಕನ ವರ್ಣನೆ ಮಾಡುವ ದುಂದುಮ್ಮೆ ಪದವನ್ನು ದೊಡ್ಡ ಸಗರ ಗ್ರಾಮದ ಮೈಲಾರಪ್ಪನವರು ಬಲು ಸೊಗಸಾಗಿ ಕೇಳುವವರ ಮೈ ನವಿರೇಳಿಸುವಂತೆ ಹಾಡುತ್ತಾರೆ. ಅಲ್ಲದೆ ಮೊಹರಂ ಹಬ್ಬದ ಹಾಡುಗಳು, ದೇವರ ಮೇಲಿನ ಭಕ್ತಿಯ ಹಾಡುಗಳು, ಜನಪದ ಹಾಡುಗಳನ್ನು ಇಲ್ಲಿನ ಕೆಲವು ಬೇಡರು ಮಧುರವಾದ ಕಂಠದಿಂದ ಹಾಡುತ್ತಾರೆ.

**ಪಟೆ ತಿರುಗಿಸುವ ಕಲೆ**: ಸಗರನಾಡಿನ ಸುರಪುರದ ಶ್ರೀವೇಣುಗೋಪಾಲಸ್ವಾಮಿಯ ಜಾತ್ರೆಯಂದು ಮತ್ತು ದಸರಾ ಯುಗಾದಿ ಹಬ್ಬದಂದು ಡೊಣ್ಣಿಗೇರಿಯ ದುರಗಪ್ಪ, ವೆಂಕಟೇಶ ನಾಯಕ, ಮೌನೇಶ, ಶರಣುನಾಯಕ, ಮರೆಪ್ಪ ಪೈಲ್ವಾನ್, ಸಾಬಣ್ಣ, ಮಾನಿಮೆಟ್ಟಿ, ಯಂಕಪ್ಪ ಸಿದ್ದಾಪುರ, ರಾಮಕೃಷ್ಣ ಬಿಚ್ಚುಗತ್ತಿಕೇರಿ, ಕಾಮಣ್ಣನಾಯಕ ಬಿಚ್ಚುಗತ್ತಿ, ಕೃಷ್ಣನಾಯಕ, ಗುಡಾಳಕೇರಿಯ ಯಲ್ಲಪ್ಪ ನಾಯಕ ಗುಡ್ಡಕಾಯಿ, ಶಾಂತಕುಮಾರ ಹುಲಿಕಲ್ ಇನ್ನಿತರ ಬೇಡ ಯುವಕರು ಮತ್ತು ಹಿರಿಯರು ಹಾಡು ಹಾಡಿ ಕುಣಿಯುವುದರ ಜೊತೆಗೆ

ಬಿದುರು, ಬಂಬಿನ ಪಟೆಯನ್ನು ಸೊಗಸಾಗಿ ತಿರುಗಿಸುತ್ತಾರೆ. ಗುಂಡು ಉರುಳಿಸುವುದು ಮತ್ತು ನಿಂಬೇಹಣ್ಣಿನ ಸ್ಪರ್ಧೆಯ ಕ್ರೀಡೆಗಳು: ಸಗರನಾಡಿನ ಬೇಡರು ಶೂರರು ಎಂದು ಹೆಸರುವಾಸಿಯಾಗಿದ್ದಾರೆ. ನಾಗರಪಂಚಮಿ ಹಬ್ಬದ ನಿಮಿತ್ತ ಶ್ರಾವಣ ಮಾಸದ ಒಂದು ತಿಂಗಳವರೆಗೆ ಗುಂಡನ್ನು ಮತ್ತು ನಿಂಬೇಹಣ್ಣನ್ನು ಉರುಳಿಸುತ್ತಾರೆ. ಬಂಗಾರ, ಬೆಳ್ಳಿ, ಹಣವನ್ನು ಈ ಸ್ಪರ್ಧೆಗಾಗಿ ಬಾಜಿ ಕಟ್ಟಲಾಗುತ್ತದೆ. ದೇವರಗೋನಾಲ, ದೇವಿಕೇರಿ, ರತ್ತಾಳ, ಮಾಚಗುಂಡಾಳ, ತಿಪನಟಗಿ, ಸಗರ, ಮುಡಬೋಳ ಈ ನಾಡಿನ ಬಹುತೇಕ ಹಳ್ಳಿಗಳಲ್ಲಿ ಈ ಸ್ಪರ್ಧೆ ನಡೆಯುತ್ತದೆ. ಅಲ್ಲದೇ ೧ ಕ್ವಿಂಟಲ್ ಜೋಳದ ಚೀಲವನ್ನು ಹೊತ್ತುಕೊಂಡು ಬಹುದೂರ ಸಾಗುವ ಸ್ಪರ್ಧೆಯು ವಿಶೇಷವಾದದ್ದು. ಲಿಂಬೆಹಣ್ಣಿನ ಆಟವನ್ನು ಆಡುವ ಸಂದರ್ಭದಲ್ಲಿ ಯುವಕರ ಹುಮ್ಮಸ್ಸು, ತಮಾಷೆಗಳು ನೋಡುಗರ ಕಣ್ಣಿಗೆ ಇಷ್ಟವಾಗುತ್ತದೆ.

**ಕುಸ್ತಿ ಸ್ಪರ್ಧೆ:** ಸಗರನಾಡಿನ ವಿವಿಧ ದೇವರುಗಳ ಜಾತ್ರೆ ಉತ್ಸವಗಳಲ್ಲಿ ಕುಸ್ತಿ ಸ್ಪರ್ಧೆ ಸರ್ವೆ ಸಾಮಾನ್ಯ, ಸುರಪುರದ ಶ್ರೀ ವೇಣುಗೋಪಾಲ ಸ್ವಾಮಿಯ ಜಾತ್ರೆಯದಿನದಂದು ದೇವಸ್ಥಾನ ಆವರಣದಲ್ಲಿ ಕುಸ್ತಿ ಸ್ಪರ್ಧೆ ನಡೆಯುತ್ತದೆ. ಈ ಕುಸ್ತಿ ಎನ್ನುವುದು ನಿನ್ನೆ ಮೊನ್ನೆಯದಲ್ಲ. ಇದು ಬಹಳ ಪುರಾತನವಾದದ್ದು. ಸಗರನಾಡಿನ ಬೇಡರು ತಮ್ಮ ಶಕ್ತಿ ಸಾಮರ್ಥ್ಯವನ್ನು ಉಳಿಸಿಕೊಳ್ಳಲು ಈ ಕುಸ್ತಿ ಕ್ರೀಡೆಯನ್ನು ಆಡುತ್ತಿದ್ದರು. ಈಗಲೂ ಕೂಡಾ ಕುಸ್ತಿ ಆಡುವ ಗರಡಿ ಮನೆಗಳು ಸಗರನಾಡಿನ ವನದುರ್ಗಾ, ದೇವರಗೋನಾಲ, ಕಕ್ಕೇರಿ ಇನ್ನಿತರ ಗ್ರಾಮಗಳಲ್ಲಿ ಕಾಣಿಸುತ್ತದೆ. ಈ ಕುಸ್ತಿ ಪಟುಗಳಿಗೆ ಅರೋಗ್ಯ ಸಂಪತ್ತಿಗಿಂತ ಮಿಗಿಲಾದ ಸಂಪತ್ತು ಬೇರೊಂದಿಲ್ಲಾ ಎಂಬ ಸ್ಪಷ್ಟವಾದ ತಿಳುವಳಿಕೆ ಇದೆ. ಅಂತೆಯೇ ಅವರು ದೈಹಿಕ ಸಂಪತ್ತನ್ನು ವೃದ್ಧಿಸುವ ಕ್ರೀಡೆಯಾದ ಕುಸ್ತಿಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದಿದ್ದಾರೆ. ಕುಸ್ತಿ ಪಟುಗಳು ಚಹಾ, ಧೂಮಪಾನ, ಮಧ್ಯಪಾನ, ಗುಟುಕ, ತಂಬಾಕು ಅಗಿಯುವುದು ಮುಂತಾದ ದುಶ್ಚಟಗಳಿಂದ ದೂರವಿರುತ್ತಾರೆ. ಹಾಗೆಯೇ ಹಾಲು, ಹಣ್ಣು, ಚಪಾತಿ, ತುಪ್ಪ, ಬೆಣ್ಣೆ, ಮೊಸರು, ಬದಾಮಿ, ದ್ರಾಕ್ಷಿ, ಗೋಡಂಬಿ, ಉತ್ತುತ್ತಿ, ಕಲ್ಲುಸಕ್ಕರೆ, ಬಾಳೆಹಣ್ಣು ಮುಂತಾದ ಪದಾರ್ಥಗಳನ್ನು ತಿನ್ನುತ್ತಾರೆ. ಇವರು ಹೆಚ್ಚಾಗಿ ಸತ್ವಯುತ ಆಹಾರವನ್ನು ಸೇವನೆ ಮಾಡುವುದರಿಂದ ಅವರ ದೇಹ ಗಟ್ಟಿಮುಟ್ಟಾಗಿರುತ್ತದೆ. ಸುರಪುರದ ಕಾಮಣ್ಣ ಡೊಣ್ಣೆಗೇರಾ, ಗೌಡಪ್ಪಾ ಡೊಣ್ಣೆಗೇರಾ, ಶಹಪೂರದ ಮೈಲಾರಪ್ಪ ಹೀಗೆ ಇನ್ನಿತರ ಬೇಡ ಯುವಕರು ಕುಸ್ತಿ ಆಡುವುದರಲ್ಲಿ ಪರಿಣತಿಯನ್ನು ಹೊಂದಿದ್ದಾರೆ.

**ಭಜನೆ:** ಸಗರನಾಡಿನ ಬೇಡರ ಸಮುದಾಯದ ಜನರು ಧಾರ್ಮಿಕ ಶ್ರದ್ಧೆ ಭಕ್ತಿಯುಳ್ಳವರು ಶ್ರೀ ವೇಣುಗೋಪಾಲ ಸ್ವಾಮಿಯ ದೇವರ ಗುಡಿಯಲ್ಲಿ ಪ್ರತಿ ಶನಿವಾರ ಭಜನೆ ಮಾಡುತ್ತಾರೆ.

ಅಲ್ಲದೇ ಆಂಜನೇಯಸ್ವಾಮಿ ದೇವಸ್ಥಾನ, ರಾಘವೇಂದ್ರಸ್ವಾಮಿ ದೇವಸ್ಥಾನದಲ್ಲಿಯೂ ಭಕ್ತಿ ಗೀತೆಗಳನ್ನು ಹಾಡುವುದರ ಮೂಲಕ ಭಜನೆಯನ್ನು ಮಾಡುತ್ತಾರೆ. ಶ್ರೀ ತಿರುಪತಿ ತಿಮ್ಮಪ್ಪನ ಭಕ್ತಿಗೀತೆ, ಆಂಜನೇಯ ಸ್ವಾಮಿಯ ಭಕ್ತಿಗೀತೆ, ಶ್ರೀ ಕೃಷ್ಣನ ಭಕ್ತಿಗೀತೆಗಳನ್ನು ಮೈಮರೆಯುವಂತೆ ಹಾಡುತ್ತಾರೆ. ದೇವರ ಹೆಸರಿನ ಮೇಲಿರುವ ಸ್ಥಳೀಯ ಜಾನಪದ ಗೀತೆಗಳನ್ನು ಸೊಗಸಾಗಿ ಹಾಡುತ್ತಾರೆ. ಸುರಪುರದ ಬ್ರಾಹ್ಮಣ ಜನಾಂಗದವರಾದ ಶ್ರೀ ಶ್ರೀಹರಿರಾವ ಆದೋನಿಯವರು ಒಳ್ಳೆಯ ಗಾಯಕರಾಗಿದ್ದು ಇವರು ಪ್ರತಿ ಶನಿವಾರ ಶ್ರೀ ವೇಣುಗೋಪಾಲಸ್ವಾಮಿಯ ದೇವಸ್ಥಾನದಲ್ಲಿ ಬೇಡ ಜನಾಂಗದ ಯುವಕರನ್ನು ಕರೆದುಕೊಂಡು ಹಾಡು ಹಾಡುವುದರ ಮೂಲಕ ಭಜನೆ ಮಾಡುತ್ತಾರೆ. ಇವರು ಬೇಡ ಜನಾಂಗದ ಯುವಕರಿಗೆ ಒಂದು ಸ್ಫೂರ್ತಿ ಇದ್ದಂತೆ. ಇದರಿಂದ ಅಲ್ಲಿನ ಬೇಡ ನಾಯಕರು ಭಜನೆ ಮಾಡುವುದನ್ನು, ಹಾಡು ಹಾಡುವುದನ್ನು ಕಲಿಯುತ್ತಾರೆ. ಶಹಾಪುರ ತಾಲೂಕಿನ ಶ್ರೀ ಆಂಜನೇಯ ಸ್ವಾಮಿಯ ದೇವಸ್ಥಾನದಲ್ಲಿ, ಮುಡಬೂಳ ಗ್ರಾಮದ ಶ್ರೀ ವೇಣುಗೋಪಾಲಸ್ವಾಮಿಯ ದೇವಸ್ಥಾನದಲ್ಲಿ, ಜೇವರ್ಗಿಯ ಶ್ರೀ ಮಹಾಲಕ್ಷ್ಮೀ ದೇವಿಯ ದೇವಸ್ಥಾನದಲ್ಲಿ ಭಜನೆ ಕಾರ್ಯಕ್ರಮ ನಡೆಯುತ್ತಲೇ ಇರುತ್ತದೆ. ಜೇವರ್ಗಿಯ ಶ್ರೀ ಮಹಾಲಕ್ಷ್ಮೀ ದೇವಿಯು ಈ ಊರಿನ ಐಶ್ವರ್ಯ ದೇವತೆ ಎಂದರೆ ತಪ್ಪಾಗಲಾರದು. ಈ ದೇವಿಯ ಮಹಿಮೆ ಅಪಾರವಾದದ್ದು.

ಭಜನೆಯ ಅರ್ಥ ಅಕ್ಷರಷಃ ಹೀಗಿದೆ. ಭ ಎಂದರೆ ಭವದ ಜ ಎಂದರೆ ಜಂಜಾಟ ನ ಎಂದರೆ ಇಲ್ಲಾ ಎಂದರ್ಥ. ಅಂದರೆ ಯಾರು ಭಕ್ತಿಯಿಂದ ಭಜನೆ ಮಾಡುವರೋ ಅಂತಹವರಿಗೆ ಜೀವನದ ಜಂಜಾಟವಿಲ್ಲ ಎಂಬ ಅರ್ಥವನ್ನು ನೀಡುತ್ತದೆ.

**ಸಗರನಾಡಿನ ಬೇಡರ ಭಜನೆ ಗೀತೆಗಳು**

ಶ್ರೀ ವೇಣುಗೋಪಾಲ ಸ್ವಾಮಿಯ ಭಕ್ತಿಗೀತೆಗಳು

ಶ್ರೀ ಆಂಜನೇಯ ಸ್ವಾಮಿಯ ಭಕ್ತಿಗೀತೆಗಳು

ಶ್ರೀ ಗುರುರಾಘವೇಂದ್ರ ಸ್ವಾಮಿಗಳ ಭಕ್ತಿಗೀತೆಗಳು

ಶ್ರೀ ತಿರುಪತಿ ತಿಮ್ಮಪ್ಪನ ಭಕ್ತಿಗೀತೆಗಳು

ಶ್ರೀ ರಂಗನಾಥ ಸ್ವಾಮಿಯ ಭಕ್ತಿಗೀತೆಗಳು

ಶ್ರೀ ಶಿವನ ಭಕ್ತಿಗೀತೆಗಳು

**ಬೆಂಕಿ ಭರಾಟೆ:**

ಸಗರನಾಡಿನ ಬೇಡಯುವಕರಲ್ಲಿ ಬೆಂಕಿ ಭರಾಟೆ ಕರಗತವಾಗಿದೆ. ಸುರಪುರದ ಡೊಣ್ಣಿಗೇರಿ, ಬಿಚಗತ್ತಿಗೇರಿ, ಕಬಾಡಗೇರಿ, ಗುಡಾಳಕೇರಿ ನಾಯಕರು ಬೆಂಕಿ ಭರಾಟೆಯಲ್ಲಿ

ನಿಪುಣರಾಗಿದ್ದಾರೆ. ಇದು ನಶಿಸಿಹೋಗುತ್ತಿರುವ ಒಂದು ವಿಶೇಷ ಕಲೆಯಾದರೂ ಕೂಡ ವಾಲ್ಮೀಕಿ ಜಯಂತಿಯಂದು ಯುಗಾದಿ, ದಸರಾ, ದೇವರ ಮೂರ್ತಿಗಳ ಮೆರವಣಿಗೆಯಂದು ಬೆಂಕಿ ಭರಾಟೆಯ ವಿರಾಟ ಪ್ರದರ್ಶನವನ್ನು ಕಾಣಬಹುದು. ಅಲ್ಲದೆ ಮುಡಬೂಳ ಗ್ರಾಮದ ಶ್ರೀ ವೇಣುಗೋಪಾಲ ಸ್ವಾಮಿಯ ಜಾತ್ರೆಯಂದು ಹಾಗೂ ಶಹಾಪುರದ ಬಲಭೀಮರಾಯನ ಜಾತ್ರೆಯಂದು ಬೇಡರು ಬೆಂಕಿ ಉಗುಳುವುದನ್ನು ನೋಡಬಹುದು.

**ಅಲಾಯಿ ಕುಣಿತ:**

ಮೊಹರಂ ಹಬ್ಬದ ಕೊನೆಯ ದಿನ ಸುರಪುರದ ಬಿಚ್ಚುಗತ್ತಿಕೇರಿಯ ಸೈಕಾಸಿಮ್ ಪೀರನ ಮಸೂದೆ ಮುಂದುಗಡೆ ಬೇಡ ಯುವಕರು ಕೂಡ ಅಲಾಯಿ ಕುಣಿತವನ್ನು ಮಾಡುತ್ತಾರೆ. ಅಲ್ಲದೆ ಕಬಾಡಗೇರಿಯಲ್ಲಿಯೂ ಮೊಹರಂ ಹಬ್ಬದಂದು ಯುವಕರ ಕುಣಿತ ನೋಡಲು ಬಲುಚೆಂದ. ಸುರಪುರ ಶಹಾಪುರ ಜೇವರ್ಗಿ ತಾಲೂಕಿನ ಎಲ್ಲಾ ಗ್ರಾಮಗಳಲ್ಲಿ ಅಲಾಯಿ ಕುಣಿತ ಇಂದಿಗೂ ಉಳಿದುಕೊಂಡು ಬಂದಿದೆ.

**ನಾಟಕ:** ಸಗರನಾಡಿನ ಬೇಡರು ನಾಟಕ ಆಡುವುದರಲ್ಲಿಯೂ ಪ್ರವೀಣರು. ೧೮೫೭ರ ರಾಜ ನಾಲ್ವಡಿ ವೆಂಕಟಪ್ಪನಾಯಕನ ಸಾಹಸಮಯ ಜೀವನ ಕುರಿತು ನಾಟಕ ಈ ನಾಡಿನಲ್ಲಿ ಜನಪ್ರೀಯತೆಯನ್ನು ಪಡೆದಿದೆ. ಅಲ್ಲದೇ ಮೊಂಡುಗೈ ವೆಂಕಟಪ್ಪ ನಾಯಕನ ನಾಟಕ, ರಾಮಾಯಣ, ಮಹಾಭಾರತ ನಾಟಕಗಳು ಇಂದಿಗೂ ಗ್ರಾಮಗಳಲ್ಲಿ ಕಾಣಬಹುದು.

**೪.೧೨ ಬೇಡ ಸಮುದಾಯದ ಸಂಘ ಸಂಸ್ಥೆ ಸಂಘಟನೆಗಳು:**

ಇಂದು ಪ್ರತಿಯೊಂದು ಧರ್ಮ ಜಾತಿಗಳು ಜನಾಂಗಗಳು ಭಾಷೆಗಳಿಗೂ ಸಂಘ ಸಂಘಟನೆಗಳಿವೆ. ಅಂತೆಯೇ ಸಗರನಾಡಿನ ಬೇಡ ಸಮುದಾಯದವರ ಸಂಘ ಸಂಸ್ಥೆಗಳಿವೆ. ಪ್ರಸ್ತುತ ದಿನಗಳಲ್ಲಿ ಬೇಡ ಸಮುದಾಯದವರು ಪ್ರಜ್ಞಾವಂತರಾಗಿ ವಿದ್ಯಾವಂತರಾಗಿ ಶಿಕ್ಷಣವನ್ನು ಪಡೆದು ತಮ್ಮ ಹಕ್ಕುಗಳನ್ನು ರಕ್ಷಣೆ ಮಾಡಿಕೊಳ್ಳಲು ತಮಗೆ ಆಗುವ ಅನ್ಯಾಯವನ್ನು ಪ್ರತಿಭಟಿಸಲು ಬಯಕೆ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಬೇಡರು ಹಲವಾರು ಸಂಘ ಸಂಸ್ಥೆಗಳನ್ನು ಸ್ಥಾಪನೆಮಾಡಿಕೊಂಡಿದ್ದಾರೆ.

**ಸಗರನಾಡಿನ ಬೇಡರ ಸಂಘ ಸಂಸ್ಥೆಗಳು:**

೧) ತಾಲೂಕು ವಾಲ್ಮೀಕಿ ನಾಯಕರ ಸಮಾಜ ಸುರಪುರ : ಗಂಗಾಧರ ನಾಯಕ ತಿಂಥಣಿ (ಅಧ್ಯಕ್ಷರು)

೨) ನಾಲ್ವಡಿ ವೆಂಕಟಪ್ಪ ನಾಯಕ ಸೈನ್ಯ: ಶ್ರೀ ರಾಜಾ ಕೃಷ್ಣಪ್ಪ ನಾಯಕ ಅಧ್ಯಕ್ಷರು ಸುರಪುರ ಸಂಸ್ಥಾನ

೩) ಕರ್ನಾಟಕ ಮದಕರಿ ಸೇನೆ: ಮಾನಯ್ಯ ದೊರೆ ತಿಂಥಣಿ

೪)	ಅಖಿಲ ಕರ್ನಾಟಕ ವಾಲ್ಮೀಕಿ ನಾಯಕ ಮಹಾಸಭಾ ಸಿದ್ದನಗೌಡ ಕರಿಬಾವಿ ನಿರ್ದೇಶಕರು ಯಾದಗಿರಿ ಜಿಲ್ಲೆ

೫)	ತಾಲೂಕಾ ವಾಲ್ಮೀಕಿ ನಾಯಕ ಸಂಘ ಶಹಾಪುರ: ಐಯ್ಯಪ್ಪ ನಿವೃತ್ತ ಪಿ.ಎಸ್.ಐ. ಅಧ್ಯಕ್ಷರು

೬)	ತಾಲೂಕಾ ವಾಲ್ಮೀಕಿ ನಾಯಕ ಸಂಘ ಜೇವರ್ಗಿ : ಮರೆಪ್ಪ ಹಸನಾಪುರ ಅಧ್ಯಕ್ಷರು

೭)	ಏಕಲವ್ಯ ಗ್ರಾಮೀಣ ಅಭಿವೃದ್ಧಿ ಹಾಗೂ ಶಿಕ್ಷಣ ಸಂಸ್ಥೆ: ಗುರುರಾಜ ಹೆಚ್. ಸುಬೇದಾರ

**ಹೋರಾಟಗಳು ಮತ್ತು ಕಾರ್ಯಕ್ರಮಗಳು:**

೨೦೧೧, ಸೆ. ೪ರಂದು ತಾಲೂಕ ವಾಲ್ಮೀಕಿ ಸಂಘದ ಚಟುವಟಿಕೆಗಳನ್ನು ಚುರುಕುಗೊಳಿಸುವ ಕುರಿತು ಹಾಗೂ ಪದಾಧಿಕಾರಿಗಳ ಆಯ್ಕೆ ಪರಿಶಿಷ್ಟ ಪಂಗಡ ಸುಳ್ಳು ಜಾತಿ ಪ್ರಮಾಣ ಪತ್ರ ಪಡೆಯುತ್ತಿರುವ ಕುರಿತು ಹಾಗೂ ತಿಮ್ಮಾಪೂರದಲ್ಲಿ ವೆಂಕಟಪ್ಪ ನಾಯಕ ಮೂರ್ತಿ ಅನಾವರಣ ವಿಳಂಬವಾಗಿರುವ ಕುರಿತು ಹಾಗೂ ಇನ್ನಿತರ ವಿಷಯಗಳ ಕುರಿತು ಸಭೆಯಲ್ಲಿ ಚರ್ಚಿಸಲಾಯಿತು. ಅಧ್ಯಕ್ಷ ದಶರಥ ದೊರೆ ಕಚಗನೂರ ಕಾರ್ಯದರ್ಶಿ ಗಂಗಾಧರ ನಾಯಕ ಮುಖಂಡರಾದ ರಮೇಶ ಆಲ್ದಾಳ ಅನಿಲ ಇಟ್ಟಂಗಿ ಇನ್ನಿತರರು ಪ್ರತಿಭಟನೆಯಲ್ಲಿ ಪಾಲ್ಗೊಂಡಿದ್ದರು.

**ತಾಲೂಕು ನಾಯಕ ವಾಲ್ಮೀಕಿ ಸಂಘ:**

ತಾಲೂಕಿನ ಕಕ್ಕೇರಾ ವಲಯದಲ್ಲಿ ಸುವರ್ಣ ಭೂಮಿ ಯೋಜನೆಯಡಿ ಖೊಟ್ಟಿ ಆಯ್ಕೆ ಪಟ್ಟಿ ಮಾಡಲಾಗಿದೆ ಎಂದು ತಾಲೂಕಿನ ವಾಲ್ಮೀಕಿ ನಾಯಕ ಸಂಘ ದೂರಿದೆ. ಶಾಂತಪುರ ಗ್ರಾಮದ ತಿಮ್ಮಣ್ಣ, ಪರಮಣ್ಣ ಶಾಂತಪುರ ಹಾಗೂ ಹುಣಸೆಹೊಳೆ ಗ್ರಾಮದ ರೇಣುಕಾ ಭೀಮನಗೌಡ ಇವರುಗಳೆಲ್ಲಾ ಕುರುಬ ಜಾತಿ ಸೇರಿದ್ದಾರೆ. ಆದರೆ ಅರ್ಜಿಯಲ್ಲಿ ಇವರು ಪರಿಶಿಷ್ಟ ಪಂಗಡ ಎಂದು ಗುರುತು ಹಾಕಿದ್ದು ಇದರಿಂದ ಪರಿಶಿಷ್ಟ ಪಂಗಡದ ರೈತರಿಗೆ ಅನ್ಯಾಯವಾಗಿದೆ ಎಂದು ಸಂಘ ಆರೊಪಿಸಿತ್ತು. ಅದೇ ರೀತಿಯಾಗಿ ಸುಳ್ಳು ಜಾತಿ ಪ್ರಮಾಣ ಪತ್ರ ನೀಡಲಾಗುತ್ತಿದೆ ಎಂದು ಸಂಘದ ಪ್ರಧಾನ ಕಾರ್ಯದರ್ಶಿ ಗಂಗಾಧರನಾಯಕ ಅಧಿಕಾರಿಗಳನ್ನು ಒತ್ತಾಯಿಸಿದ್ದರು. ಮುಜರಾಯಿ ಇಲಾಖೆಗೆ ಒಳಪಡುವ ತಾಲೂಕಿನ ಸುಪ್ರಸಿದ್ಧ ತಿಂಥಣಿ ಮೌನೇಶ್ವರ ದೇವಸ್ಥಾನ ಕ್ಷೇತ್ರದ ಅಭಿವೃದ್ಧಿ ಮತ್ತು ದೇವಸ್ಥಾನ ಸಮಿತಿ ಲಕ್ಷವಹಿಸುತ್ತಿಲ್ಲಾ ಎಂದು ಪ್ರಧಾನ ಕಾರ್ಯದರ್ಶಿ ಆರೋಪಿಸಿದ್ದರು. ಹಾಗೆ ದೇವಸ್ಥಾನದ ಅಧ್ಯಕ್ಷರು ಯಾದಗಿರಿ ಸಹಾಯಕ ಆಯುಕ್ತರಿಗೆ ಮನವಿಯನ್ನು ಸಲ್ಲಿಸಿದ್ದಾರೆ.

ತಿಂಥಣಿ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ೨೦೧೧-೧೨ನೇ ಸಾಲಿನ ಬಸವ ವಸತಿ ಯೋಜನೆ ಅಡಿಯಲ್ಲಿ ಗ್ರಾಮ ಸಭೆ ಕೈಗೊಳ್ಳದೆ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ೧೮೫ ನಕಲಿ ಫಲಾನುಭವಿಗಳನ್ನು ಆಯ್ಕೆಗೊಳಿಸಲಾಗಿದೆ. ಕೂಡಲೇ ಈ ಪಟ್ಟಿಯನ್ನು ರದ್ದುಗೊಳಿಸಬೇಕು ಎಂದು ಆಗ್ರಹಿಸಿದ್ದರು.ತಾಲೂಕಿನ ನಗನೂರ ಗ್ರಾಮದಲ್ಲಿ ಈಚೆಗೆ ನಡೆದ ಗಲಭೆಯ ಹಿನ್ನೆಲೆಯಲ್ಲಿ ಕೂಲಿ ಮತ್ತು ನಾಯಕ ಸಮಾಜದ ಮುಖಂಡರ ಮೇಲೆ ಸುಳ್ಳು ಕೊಲೆ ಮೊಕದ್ದಮೆ ದಾಖಲಿಸಿರುವುದನ್ನು ಕೈ ಬಿಡಬೇಕೆಂದು ೨ ಸಮಾಜದ ಸಂಘಟನೆಗಳು ಬಂದ್‌ಗೆ ಕರೆ ನೀಡಿದ್ದವು.

**ತಾಲೂಕು ವಾಲ್ಮೀಕಿ ನಾಯಕ ಸಂಘ:**

'ಆಗಸ್ಟ್ ೨೨, ೨೦೧೧ರಂದು ಆದಿಕವಿ ಮಹರ್ಷಿ ವಾಲ್ಮೀಕಿ ಜಯಂತಿಯನ್ನು ಆಚರಿಸಲು ಸರಕಾರದ ಸ್ಪಷ್ಟ ಆದೇಶ ಹೊರಡಿಸಿದರು. ತಾಲೂಕಿನ ಕೆಲವು ಇಲಾಖೆಗಳಲ್ಲಿ ಮಹರ್ಷಿ ವಾಲ್ಮೀಕಿ ಜಯಂತಿಯನ್ನು ಆಚರಿಸಿಲ್ಲ. ಅಲ್ಲದೆ ಕಛೇರಿಗಳಲ್ಲಿ ಮಹರ್ಷಿ ವಾಲ್ಮೀಕಿ ಭಾವಚಿತ್ರ ಕೂಡ ಇರುವುದಿಲ್ಲಾ ಎಂದು ಸಂಘದ ಅಧ್ಯಕ್ಷರಾದ ದಶರಥ ದೊರೆ, ಗಂಗಾಧರ ನಾಯಕ, ಅನಿಲ ಇಟ್ಟಂಗಿ, ಉಪೇಂದ್ರ ನಾಯಕ, ಬಸವಣ್ಣಪ್ಪ ಕಾಮನಟಗಿ ಜಿಲ್ಲಾದಿಕಾರಿಗಳಿಗೆ ಮನವಿಯನ್ನು ಸಲ್ಲಿಸಿದ್ದರು.ಇದೇ ಸಂಘಟನೆಯಿಂದ ಮಾರ್ಚ ೨೮ರಂದು ನೀರು ಹರಿಸಿ ಇಲ್ಲವೆ ವಿಷ ಕುಡಿಸಿ ಎಂದು ನೀರಾವರಿ ಅಧಿಕಾರಿಗಳ ಮುಂದೆ ಪ್ರತಿಭಟನೆ ಮಾಡಿದರು. ನಾರಾಯನಪೂರ ಎಡದಂಡೆ ಮುಖ್ಯ ಕಾಲುವೆಗೆ ಏಪ್ರಿಲ್ ೩೦ರ ವರೆಗೆ ನೀರು ಹರಿಸುವಂತೆ ಆಗ್ರಹಿಸಿದರು.'[೯]

**ವಿವಿಧ ನಾಯಕ ಸಂಘಟನೆಗಳಿಂದ ಪ್ರತಿಭಟನೆ:**

ಮಾಜಿ ಸಚಿವ ಸುಧೀಂದ್ರರಾವ್ ಅವರು ಕರ್ನಾಟಕದಲ್ಲಿ ನಾಯಕ ಜನಾಂಗವೇ ಇಲ್ಲಾ ಎಂದು ಹೇಳುವ ಮೂಲಕ ನಾಯಕ ಜನಾಂಗದ ಸಾಮರಸ್ಯವನ್ನು ಹಾಳು ಮಾಡಿ ಸಂವಿಧಾನಕ್ಕೆ ಅಪಚಾರವೆಸಗಿದ್ದಾರೆ ಎಂದು ಆರೋಪಿಸಿ ವಿವಿಧ ನಾಯಕ ಸಂಘಟನೆಗಳ ಕಾರ್ಯಕರ್ತರು ಮಾನವ ಸರಪಳಿ ನಿರ್ಮಿಸಿ ಪ್ರತಿಭಟನೆ ನಡೆಸಿದರು. ಜಿಲ್ಲಾ ವಾಲ್ಮೀಕಿ ನಾಯಕ ಸಂಘದ ಅಧ್ಯಕ್ಷ ನಂದಕುಮಾರ ಮಾಲಿಪಾಟೀಲ್, ಅಯ್ಯಣ್ಣ ಚಂಬಲದಿನ್ನಿ, ಬಸವರಾಜ ದೊರಿ, ಗಂಗಾಧರ ನಾಯಕ, ರಾಮಕೃಷ್ಣ ನಾಯಕ, ದಶರಥ ದೊರಿ, ರಾಮಪ್ಪ ನಾಯಕ ಜೆಜಿ, ರಾಮು ನಾಯಕ ಅರಳಳ್ಳಿ, ಗೌಡಪ್ಪ ಡೊಣ್ಣೆಗೇರಿ ಇತರರು ಪ್ರತಿಭಟನೆಯಲ್ಲಿ ಇದ್ದರು.

**ಮಹರ್ಷಿ ವಾಲ್ಮೀಕಿ ನಾಯಕ ತರುಣ ಸಂಘ:**

'೨೦೧೧ ಜುಲೈ ೬ ರಂದು ಸುಕ್ಷೇತ್ರ ತಿಂಥಣಿ ಮಾರ್ಗವಾಗಿ ವೇಗದೂತ ಬಸ್ಸುಗಳನ್ನು ಓಡಿಸಬೇಕೆಂದು ಗ್ರಾಮದ ನಾಯಕ ತರುಣ ಸಂಘ ಆಗ್ರಹಿಸಿತು.

ಗುಲ್ಬರ್ಗಾದಿಂದ ಹೊಸಪೇಟ ಬೆಂಗಳೂರ ಶಿವಮೊಗ್ಗ ದಾವಣಗೆರೆ ಬಸ್ಸುಗಳನ್ನು ತಿಂಥಣಿ ಮಾರ್ಗವಾಗಿ ಓಡಿಸಬೇಕೆಂದು ವಿಭಾಗಾಧಿಕಾರಿಗಳಿಗೆ ಮನವಿಯನ್ನು ಮಾಡಿದ್ದಾರೆ. ಸಂಘದ ಅಧ್ಯಕ್ಷ ವಿರುಪಾಕ್ಷ ಹಾಗೂ ಕಾರ್ಯಕರ್ತರು ಪಾಲ್ಗೊಂಡಿದ್ದರು.'[೧೦]

**ವಿವಿಧ ನಾಯಕ ಸಂಘಟನೆಗಳಿಂದ ಸಂತಾಪ:**

ರಾಜನ ಹಳ್ಳಿಯ ವಾಲ್ಮೀಕಿ ಗುರುಪೀಠದ ಶ್ರೀ ಪುಣ್ಯಾನಂದಪುರಿ ಮಹಾಸ್ವಾಮಿಗಳು ರಸ್ತೆ ಅಪಘಾತದಲ್ಲಿ ವಿಧಿವಶವಾದ ಕಾರಣ ಈಶಾನ್ಯ ಕರ್ನಾಟಕ ವಾಲ್ಮೀಕಿ ನಾಯಕ ಸಹಕಾರ ಸಂಘ, ವಾಲ್ಮೀಕಿ ನಾಯಕ ಸಂಘ ಸುರಪುರ, ವಾಲ್ಮೀಕಿ ನಾಯಕ ಸಂಘ ಹುಣಸಗಿ ಈ ಸಂಘಟನೆಯ ಪ್ರಮುಖ ಕಾರ್ಯಕರ್ತರು ಸಮಾಜ ಬಾಂಧವರು ಶೋಕವನ್ನು ವ್ಯಕ್ತಪಡಿಸಿ ಸಂತಾಪವನ್ನು ಸೂಚಿಸಿದ್ದರು.

**ಶ್ರೀ ಮಹರ್ಷಿ ವಾಲ್ಮೀಕಿ ನಾಯಕ ಯುವಕ ಸಂಘ:**

'ದಿನಾಂಕ ೧೫-೦೩-೨೦೦೮ರಂದು ಕೃಷ್ಣ ಮೇಲ್ದಂಡೆ ಯೋಜನೆಯ ವಂಚಿತ ಅಥವಾ ಕೊನೆಯ ಭಾಗದ ಗ್ರಾಮಗಳಾದ ತಿಂಥಣಿ, ಶಾಂತಪೂರ, ದಾದಲಾಪೂರ, ಅರಳಹಳ್ಳಿ ಭಾಗದ ರೈತರ ಸ್ಥಿತಿಯನ್ನು ಕೇಳುವರು ಯಾರೂ ಇಲ್ಲ ಎಂದು ಮುಖ್ಯ ಅಭಿಯಂತರರಿಗೆ ಪ್ರತಿಭಟನೆಯನ್ನು ಮಾಡುವುದರ ಮೂಲಕ ಮನವಿಯನ್ನು ಸಲ್ಲಿಸಿದ್ದಾರೆ. ಅಧ್ಯಕ್ಷರಾದ ಗಂಗಾಧರ ನಾಯಕ ಗೌರವ ಅಧ್ಯಕ್ಷರಾದ ಶ್ರೀ ಮೌನೇಶ ಟಿ-ಕುರ್ಲಿ ಹಣಮಂತ್ರಾಯ ಹೊಸಪೇಟ ಇನ್ನಿತರ ಕಾರ್ಯಕರ್ತರು ಪಾಲ್ಗೊಂಡಿದ್ದರು.'[೧೧]

**ವಾಲ್ಮೀಕಿ ನಾಯಕ ಸಂಘ ತಿಂಥಣಿ:**

ದಿನಾಂಕ ೦೪-೦೮-೨೦೧೦ ರಂದು ತಿಂಥಣಿ ಮತ್ತು ದಾದಲಾಪುರ ಗ್ರಾಮಗಳಿಗೆ ಶುದ್ಧೀಕರಣವಿಲ್ಲದ ನದಿಯ ನೀರು ಕುಡಿಯುತ್ತಿರುವುದರಿಂದ ಹಲವಾರು ಅಂಟು ರೋಗಗಳು ಹಾಗೂ ಸಾಂಕ್ರಾಮಿಕ ರೋಗಗಳು ಹರಡಿ ಸದಾ ರೋಗ ರುಜಿನಗಳಿಗೆ ತುತ್ತಾಗುತ್ತಿರುವುದು ಸಾಮಾನ್ಯವಾಗಿದೆ ಎಂದು ಪ್ರತಿಭಟನೆ ಮಾಡುವುದರ ಮೂಲಕ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಅಂದಿನ ಸಚಿವರಾಗಿದ್ದ ಮಾನ್ಯ ಶ್ರೀ ನರಸಿಂಹ ನಾಯಕರಿಗೆ ಮನವಿಯನ್ನು ಸಲ್ಲಿಸಿದ್ದರು.

**ನಾಲ್ವಡಿ ರಾಜಾ ವೆಂಕಟಪ್ಪ ನಾಯಕ ಯುವ ಸೇನೆ ಹಾಗೂ ಸುರಪುರ ಇತಿಹಾಸ ಸಂಶೋಧನ ಕೇಂದ್ರ:**

**ವಿಜಯೋತ್ಸವ ಕಾರ್ಯಕ್ರಮ:**

ಸುರಪುರ ಇತಿಹಾಸ ಅಮೋಘವಾದದ್ದು. ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಇಲ್ಲಿನ ಅರಸರ ಕೊಡುಗೆ ಅಪಾರ. ಆದರೂ ಇಲ್ಲಿನ ಇತಿಹಾಸದಲ್ಲಿ ಕಡೆಗಣಿಸಲ್ಪಟ್ಟಿದೆ.

ಈ ನಿಟ್ಟಿನಲ್ಲಿ ಪ್ರತಿ ವರ್ಷ ವಿಜಯೋತ್ಸವ ಆಚರಿಸುತ್ತಿರುವುದು ಸ್ವಾಗತಾರ್ಹ ಎಂದು ಆಸ್ಟ್ರೇಲಿಯಾದ ಪರ್ತ ವಿಶ್ವವಿದ್ಯಾಲಯದ ಆಡಳಿತಗಾರ ಸುಪ್ರತೀಕ ಮುಖರ್ಜಿ ಅಭಿಪ್ರಾಯ ಪಟ್ಟರು. ಲಂಡನ್ ವಿಶ್ವವಿದ್ಯಾಲಯದಲ್ಲಿ ಶಹಾಪುರ ತಾಲೂಕಿನ ಗೋವಿಂದರಾವ ಚೌವ್ಹಾಣ ಎಂಬುವವರು ಗ್ರಂಥ ಪಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇಲ್ಲಿ ಆಂಗ್ಲ ಪ್ರತಿನಿಧಿಯಾಗಿ ನೇಮಕ ಹೊಂದಿದ ಮೇಡೋಸ್ ಟೇಲರ್ ಸುರಪುರ ರಾಜರ ಶೌರ್ಯತನ, ಧೀರತನ, ಇಲ್ಲಿನ ಬೇಡ ಪಡೆಯ ಸಾಹಸ ಕುರಿತು ಬರೆದಿರುವ ೨೦೦ ಪತ್ರಗಳನ್ನು ಸಂಗ್ರಹಿಸಿ ನನಗೆ ನೀಡಿದ್ದಾರೆ ಎಂದು ತಿಳಿಸಿದರು. ಈ ವಿಜಯೋತ್ಸವ ಕಾರ್ಯಕ್ರಮದಲ್ಲಿ ಚಿತ್ರಕಲಾವಿದ ವಿಜಯ ಹಾಗರಗುಂಡಿಗೆ, ರಾಜ ವೆಂಕಟಪ್ಪ ನಾಯಕ ತಾತ, ಯುವರಾಜ ಕೃಷ್ಣಪ್ಪ ನಾಯಕ, ರಾಜ ಗೋಪಾಲ ನಾಯಕ, ಭಾಸ್ಕರರಾವ ಮುಡಬೂಳ ಇನ್ನಿತರ ನಾಯಕ ಮುಖಂಡರ ಸಾವಿರಾರು ಜನರು ಸೇರಿದ್ದರು.

**ವಿವಿಧ ಬೇಡ ನಾಯಕ ಸಂಘಟನೆಗಳಿಂದ ಶ್ರೀ ಮಹರ್ಷಿ ವಾಲ್ಮೀಕಿ ಜಯಂತಿ:**

ಪ್ರತಿ ವರ್ಷ ಶ್ರೀ ಮಹರ್ಷಿ ವಾಲ್ಮೀಕಿ ಜಯಂತಿಯನ್ನು ಸಗರ ನಾಡಿನ ಸುರಪುರದ ತಿಂಥಣಿ, ಸತ್ಯಂಪೇಟ, ರಂಗಂಪೇಟ, ಕಕ್ಕೇರ, ಹುಣಸಗಿ, ಕೆಂಭಾವಿ, ಇನ್ನಿತರ ಗ್ರಾಮಗಳಲ್ಲಿ ಅತಿ ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಅಂದು ಸುರಪುರದಲ್ಲಿ ವಾಲ್ಮೀಕಿ ಭಾವಚಿತ್ರವನ್ನು ಮೆರವಣಿಗೆ ಮಾಡುತ್ತಾರೆ. ಡೊಲ್ ಕುಣಿತ, ಪಟೆ ತಿರುಗಿಸುವುದು, ಡಿ.ಜೆ. ಸಂಗೀತದ ಮೂಲಕ ಡ್ಯಾನ್ಸ್ ಮಾಡಿಕೊಂಡು ಎಲ್ಲರ ಮೇಲೆ ಬಣ್ಣ ಚಲ್ಲುತ್ತಾ ಸಂತೋಷದಿಂದ ಆಚರಣೆ ಮಾಡುತ್ತಾರೆ. ಇದೆ ರೀತಿಯಾಗಿ ಹುಣಸಗಿ, ಕಕ್ಕೇರಿಯಲ್ಲಿಯೂ ಆಚರಣೆ ಮಾಡಿ ಸಂಭ್ರಮಿಸುತ್ತಾರೆ. ಒಂದು ವಿಶೇಷ ಸಂಗತಿ ಎಂದರೆ ಸುರಪುರದಲ್ಲಿ ವಾಲ್ಮೀಕಿ ಜಯಂತಿಯಂದು ಯಾವುದೇ ಜಾತಿ-ಭೇದವಿಲ್ಲದೇ ಎಲ್ಲಾ ಜಾತಿ, ಜನಾಂಗ, ಧರ್ಮದವರು ಜೊತೆ ಸೇರಿ ಆಡಿ ಕುಣಿದು ಸಂಭ್ರಮಿಸುತ್ತಾರೆ. ಇದು ಜನರ ಆಶ್ಚರ್ಯಕ್ಕೂ ಕಾರಣವಾಗಿದೆ.

**ಸಂಸ್ಥಾನ ಜಾಗಗಳನ್ನು ಉಳಿಸಲು ಪತ್ರಿಕೆ ಪ್ರಕಟಣೆ ನೀಡಿದ ಸಂಸ್ಥಾನದ ರಾಜರುಗಳು ಮತ್ತು ಸಂಘಟನೆ:**

ಐತಿಹಾಸಿಕ ಹಿನ್ನೆಲೆ ಹೊಂದಿರುವ ಶ್ರೀ ವೇಣುಗೋಪಾಲ ಸ್ವಾಮಿ ದೇವಸ್ಥಾನ ಹಾಗೂ ದೇವಸ್ಥಾನದ ಮುಂದಗಡೆ ಇರುವ ಸರ್ವೆ ನಂ. ೧೫ರಲ್ಲಿ ಬರುವ ೩.೧೫ಎಕರೆ ಆಸ್ತಿ ದೇವಸ್ಥಾನಕ್ಕೆ ಸಂಬಂಧಪಟ್ಟಿದ್ದು ಇದರಲ್ಲಿರುವ ದೇವರ ಕೆರೆಯನ್ನು ಮುಂಬರುವ ಗೋಪಾಲಸ್ವಾಮಿ ಜಾತ್ರೆ ನಡೆಸಲು ಸಜ್ಜುಗೊಳಿಸಲಾಗುತ್ತಿದೆ ಹೊರತು ಬೇರಾವುದೇ ದುರುದ್ದೇಶದಿಂದಲ್ಲ ಎಂದು ಸಂಸ್ಥಾನ ಅರಸರ ಮನೆತನದವರಾದ ರಾಜಾ ವೆಂಕಟಪ್ಪ ನಾಯಕ ತಾತ ಹಾಗೂ ಯುವರಾಜ ರಾಜಾ ಕೃಷ್ಣಪ್ಪನಾಯಕ ಅವರು ತಿಳಿಸಿದ್ದಾರೆ. ಶ್ರೀ ಅವರು ತಮ್ಮ ನಿವಾಸದಲ್ಲಿ ಕರೆಯಲಾಗಿದ್ದ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ್ದಾರೆ.

ವೇಣುಗೋಪಾಲ ಸ್ವಾಮಿ ದೇವಸ್ಥಾನ ರಾಜ ಮನೆತನದ ಆಸ್ತಿಯಾಗಿದೆ. ತಮ್ಮ ವಂಶಪರಂಪರೆಯಿಂದ ಮೊದಲಿನಿಂದಲೂ ಈ ದೇವಸ್ಥಾನದ ವ್ಯವಸ್ಥಾಪಕರಾಗಿ ದೇವಸ್ಥಾನಕ್ಕೆ ಸಂಬಂಧಿಸಿ ಎಲ್ಲಾ ಆಚರಣೆಗಳನ್ನು ಹಾಗೂ ಜಾತ್ರೆಗಳನ್ನು ಹಿಂದಿನಿಂದಲೂ ನೆರವೇರಿಸುತ್ತ ಮೇಲುಸ್ತುವಾರಿ ವಹಿಸುತ್ತಾ ಬಂದಿರುತ್ತೇವೆ ಎಂದು ಹೇಳಿದರು. ದೇವಸ್ಥಾನದ ಎಡ ಭಾಗದಲ್ಲಿರುವ ಮರಗಮ್ಮ ಗುಡಿಗೆ ಹೊಂದಿಕೊಂಡು ಇರುವ ದೇವರ ಕೆರೆ ಹಾಗೂ ಸುತ್ತಮುತ್ತಲಿನ ೩.೧೫ಎಕರೆಯಷ್ಟು ಭೂಮಿ ದೇವಸ್ಥಾನದ ಆಸ್ತಿಯಾಗಿದ್ದು ಈ ಜಾಗದಲ್ಲಿ ಜಾತ್ರೆಯನ್ನು ನಡೆಸಲು ವಿಶಾಲವಾದ ಜಾಗವನ್ನು ಸಿದ್ಧಪಡಿಸಲು ದೇವರ ಕೆರೆ ನೀರನ್ನು ಖಾಲಿಮಾಡಿಸಲಾಗಿದ್ದು ಸುತ್ತಮುತ್ತಲಿನ ಓಣಿಗಳಿಂದ ಬರುವ ಚರಂಡಿ ನೀರು ಈ ಸ್ಥಳಗಳಲ್ಲಿ ಜಮವಾಗಿಕೊಂಡಿರುವುದರಿಂದ ಇಲ್ಲಿ ಹೊಲಸು ವಾಸನೆ ತುಂಬಿದ್ದು ಇದನ್ನು ಹೋಗಲಾಡಿಸಲು ಹಾಗೂ ಈ ಸ್ಥಳದಲ್ಲಿನ ಜಾತ್ರೆ ನೆರವೇರಿಸಲು ಹಾಗೂ ಜನರಿಗೆ ಅನುಕೂಲ ಮಾಡಿಕೊಡಲು ಹೊರತು ಮತ್ಯಾವುದೇ ಉದ್ದೇಶದಿಂದಲ್ಲಾ ಎಂದು ಅವರು ಸ್ಪಷ್ಟಪಡಿಸಿದರು. ಈಗ ಒಡೆಯಲಾಗಿರುವ ಸ್ಥಳದಲ್ಲಿ ಕೆರೆಯ ಅಗಸಿ ಇದ್ದು, ಈಗ ಅದು ಮುಚ್ಚಿದ್ದರಿಂದ ಇದನ್ನು ಮೊದಲಿನಂತೆ ಕೌಲಿ ಇದ್ದು ಈ ಮೂಲಕ ನೀರು ಹರಿಸಲು ಈ ಕೆಲಸವನ್ನು ಕೈಗೊಳ್ಳಲಾಗಿದೆ ಎಂದು ತಿಳಿಸಿದರು. ಪುರಸಭೆಯವರು ಅತಿಕ್ರಮಣ ಮಾಡಿ ಅನಧಿಕೃತವಾಗಿ ಮಳಿಗೆಗಳನ್ನು ನಿರ್ಮಿಸಿದ್ದರಿಂದ ಜಾತ್ರೆ ನಡೆಸಲು ತೊಂದರೆಯಾಗಿದೆ ಎಂದು ಹೇಳಿದರು.

ಮೇಲಾಧಿಕಾರಿಗಳ ಸೂಚನೆ ಮೇರೆಗೆ ಈಗಾಗಲೇ ಸಂಸ್ಥಾನದ ಅರಸು ಮನೆತನದವರಾಗಿರುವ ತಮ್ಮ ನೇತೃತ್ವದಲ್ಲಿ ಜೀರ್ಣೋದ್ಧಾರ ಸಮಿತಿಯೊಂದನ್ನು ರಚಿಸಲಾಗಿದ್ದು ಈ ಸಮಿತಿಯ ಅಡಿಯಲ್ಲಿ ದೇವಸ್ಥಾನದ ಅಭಿವೃದ್ಧಿ ಹಾಗೂ ಆಸ್ತಿ ರಕ್ಷಣೆ ಮಾಡುವುದು ತಮ್ಮ ಪ್ರಮುಖ ಉದ್ದೇಶವಾಗಿದೆ ಎಂದು ತಿಳಿಸಿದರು. ಪುರಸಭೆಯಿಂದ ದೇವಸ್ಥಾನದ ಭಾಗ ಕಬಳಿಕೆ ಅನಧಿಕೃತ ಮಳಿಗೆ ನಿರ್ಮಾಣ ದೇವಸ್ಥಾನದ ಜಾಗವನ್ನು ಕಬಳಿಸಿ ಪುರಸಭೆಯವರು ಮಳಿಗೆಗಳನ್ನು ನಿರ್ಮಿಸಿದ್ದಾರೆ. ಹೀಗಾಗಿ ಸರ್ಕಾರವೇ ದೇವಸ್ಥಾನದ ಜಾತ್ರೆ ನಡೆಯುವ ಜಾಗವನ್ನು ಉತ್ತರ-ದಕ್ಷಿಣ ೧೩ ಅಡಿ ಜಾಗವನ್ನು ಅತಿಕ್ರಮಣ ಮಾಡಿಕೊಂಡಿದ್ದು ಕೂಡಲೇ ಹಿರಿಯ ಅಧಿಕಾರಿಗಳು ಈ ಜಾಗದಲ್ಲಿ ಅನಧಿಕೃತವಾಗಿ ನಿರ್ಮಿಸಲಾಗಿರುವ ೨೮ ಪುರಸಭೆ ಮಳಿಗೆಗಳನ್ನು ತೆರವುಗೊಳಿಸಬೇಕು ಎಂದು ಅವರು ಆಗ್ರಹಿಸಿದರು. ಈಗಾಗಲೇ ತೆರವುಗೊಳಿಸಲು ಪ್ರಾದೇಶಿಕ ಆಯುಕ್ತರು ಆದೇಶ ನೀಡಿದ್ದು ಆದರೂ ಇಲ್ಲಿನ ಅಧಿಕಾರಿಗಳು ಕೆರೆಯ ಪಶ್ಚಿಮಕ್ಕೆ ಇರುವ ಬಡ ವ್ಯಾಪಾರಿಗಳು ಹಾಕಿಕೊಂಡಿರುವ ತಾತ್ಕಾಲಿಕ ಶೆಡ್, ಅಂಗಡಿಗಳನ್ನು ಮಾತ್ರ ತೆರವುಗೊಳಿಸಲು ಮುಂದಾಗಿದ್ದು, ಮೊದಲು ಪುರಸಭೆಯವರು ದೇವಸ್ಥಾನದ ಜಾಗವನ್ನು ಅತಿಕ್ರಮಣಗೊಳಿಸಿ ನಿರ್ಮಿಸಿರುವ

ಅಂಗಡಿಗಳನ್ನು ತೆರವುಗೊಳಿಸದೇ ಪ್ರಾದೇಶಿಕ ಆಯುಕ್ತರು ನೀಡಿದ್ದ ಆದೇಶಗಳನ್ನು ಇಲ್ಲಿನ ಅಧಿಕಾರಿಗಳು ಮುಚ್ಚಿಟ್ಟಿದ್ದಾರೆ ಎಂದು ಅವರು ಹೇಳಿದರು. ಕೂಡಲೇ ಮೇಲಾಧಿಕಾರಿಗಳ ಆದೇಶದಂತೆ ಈ ಮಳಿಗೆಗಳನ್ನು ಮೊದಲು ತೆರವುಗೊಳಿಸಲಿ ಎಂದು ಒತ್ತಾಯಿಸಿದರು. ಅಲ್ಲದೆ ಈ ಜಾಗದಲ್ಲಿ ಕೆಲವು ಖಾಸಗಿ ವ್ಯಕ್ತಿಗಳು ಕೂಡ ಅತಿಕ್ರಮಿಸಿಕೊಂಡು ಮನೆಗಳನ್ನು ನಿರ್ಮಿಸಿದ್ದು ಇವುಗಳನ್ನು ಕೂಡಲೇ ತೆರವುಗೊಳಿಸಬೇಕು ಎಂದು ಅವರು ಒತ್ತಾಯಿಸಿದರು.ಈ ಸಂದರ್ಭದಲ್ಲಿ ಸಂಸ್ಥಾನದ ಪರಿವಾರದವರಾದ ಮುದ್ದಣ್ಣ ಪಟ್ಟಣಶೆಟ್ಟಿ, ಗಣೇಶ ಜಾಗಿರದಾರ, ವಾಸುದೇವ ಸರ್ ಹವಾಲ್ದಾರ ಸೇರಿದಂತೆ ೧೪ ಕೇರಿಗಳ ಪ್ರತಿನಿಧಿಗಳು ಮತ್ತು ಜನರು ಉಪಸ್ಥಿತರಿದ್ದರು. ಈ ಮೇಲಿನ ಅಂಶಗಳನ್ನು ಸರಕಾರ ಗಮನಿಸದೇ ಹೋದರೆ ತಾಲೂಕ ವಾಲ್ಮೀಕಿ ಸಮಾಜದ ಸಂಘಟನೆಯಿಂದ ಪ್ರತಿಭಟನೆ ಮಾಡಲಾಗುವುದು ಎಂದು ದಶರಥ ನಾಯಕ್ ದೊರೆ ಅಧ್ಯಕ್ಷರು ಆಗ್ರಹಿಸಿದರು.

**ಜೇವರ್ಗಿ ತಾಲೂಕ ಶ್ರೀ ಮಹರ್ಷಿ ವಾಲ್ಮೀಕಿ ನಾಯಕ ಸಂಘಟನೆಯ ಹೋರಾಟಗಳು:**

ದಿನಾಂಕ ೧೬-೦೬-೨೦೧೨ರಂದು ವಾಲ್ಮೀಕಿ ನಾಯಕ ಸಂಘಟನೆಯ ತಾಲೂಕ ಅಧ್ಯಕ್ಷರಾದ ಶೀ ಮರೆಪ್ಪ ಎಂ. ಹಸನಾಪುರ ಇವರು ಅಂದಿನ ಶಾಸಕರಾದ ಮಾನ್ಯ ಶ್ರೀ ದೊಡ್ಡಪ್ಪಗೌಡ ಪಾಟೀಲ ನರಿಬೋಳ ಇವರಿಗೆ ಪರಿಶಿಷ್ಟ ಪಂಗಡ ಜನಾಂಗಕ್ಕೆ ಮತ್ತು ಗುಡಿಸಲು ರಹಿತ ಬಡವರಿಗೆ ಮನೆಗಳನ್ನು ಕಟ್ಟಿಸಿಕೊಡಬೇಕು ಎಂದು ಮನವಿ ಮಾಡಿಕೊಂಡರು. ಒಂದು ವೇಳೆ ಈ ಮನವಿಗೆ ಸ್ಪಂದಿಸದಿದ್ದಲ್ಲಿ ಬೇಡನಾಯಕ ಸಮುದಾಯದಿಂದ ಬೃಹತ್ ಹೋರಾಟವನ್ನು ಕೈಗೊಳ್ಳುತ್ತೇವೆ ಎಂದು ಆಗ್ರಹಿಸಿದ್ದರು. ದಿನಾಂಕ ೧೦-೧೧-೨೦೧೧ರಂದು ಇದೇ ಸಂಘಟನೆಯಿಂದ ಅಧ್ಯಕ್ಷರು ಮತ್ತು ಕಾರ್ಯಕರ್ತರು ಹಾಗೂ ಬೇಡ ಸಮುದಾಯದ ಜನರು ಒಗ್ಗಟ್ಟಿನಿಂದ ನಮಗೆ ಈ ತಾಲೂಕಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಇಲ್ಲಿಯವರೆಗೆ ನಮ್ಮ ಜನಾಂಗಕ್ಕೆ ಸರ್ಕಾರದಿಂದ ಬರುವ ಸೌಲಭ್ಯಗಳು ಸರಿಯಾದ ರೀತಿಯಲ್ಲಿ ಸಿಗುತ್ತಿಲ್ಲ. ಆದ್ದರಿಂದ ಈ ತಾಲೂಕಿನ ದಂಡಾಧಿಕಾರಿಗಳಾದ ತಾವು ಕೂಡಲೇ ನಮ್ಮ ಸಮುದಾಯದ ಕಡೆ ಗಮನ ಹರಿಸಿ ನ್ಯಾಯ ದೊರಕಿಸಿಕೊಡಬೇಕೆಂದು ವಿನಂತಿಸಿಕೊಳ್ಳುತ್ತೇವೆ ಎಂದು ತಹಸೀಲ್ದಾರರಿಗೆ ಬೃಹತ್ ಮೆರವಣಿಗೆಯ ಮೂಲಕ ಮನವಿ ಪತ್ರವನ್ನು ಸಲ್ಲಿಸಿದ್ದಾರೆ.

ದಿನಾಂಕ ೧೩-೦೭-೨೦೧೨ರಂದು ವಾಲ್ಮೀಕಿ ಸಮುದಾಯದ ಅಧ್ಯಕ್ಷರಾದ ಮರೆಪ್ಪ ಎಂ. ಹಸನಾಪುರ ಹಾಗೂ ಗುರುರಾಜ ಸುಬೇದಾರ ಇವರು ಪಟ್ಟಣ ಪಂಚಾಯತಿಯಲ್ಲಿ ಪ್ರತಿಭಟನೆ ಮಾಡುವುದರ ಮೂಲಕ ೧೮ನೇ ಹಣಕಾಸು ಯೋಜನೆಯಡಿಯಲ್ಲಿ ಎಸ್.ಟಿ. ಜನಾಂಗಕ್ಕೆ ಸಮುದಾಯ ಭವನಕ್ಕಾಗಿ ಜಾಗ ನೀಡಬೇಕೆಂದು ಲಿಖಿತ ರೂಪದಲ್ಲಿ ಮನವಿ ಮಾಡಿಕೊಳ್ಳುವುದರ ಮೂಲಕ ಪ್ರತಿಭಟಿಸಿದರು. ಈ ರೀತಿಯಾಗಿ ಜೇವರ್ಗಿ ತಾಲೂಕಿನಲ್ಲಿ

ಬೇಡ ಸಮುದಾಯದ ಜನಸಂಖ್ಯೆ ಕಡಿಮೆ ಇದ್ದರೂ ಕೆಲವು ಗ್ರಾಮಗಳಲ್ಲಿ ಪ್ರಬಲರಾಗಿದ್ದಾರೆ. ಇತ್ತೀಚಿನ ದಿನಮಾನಗಳಲ್ಲಿ ಈ ಸಮುದಾಯದವರೂ ಕೂಡಾ ಒಗ್ಗಟ್ಟನ್ನು ತೋರ್ಪಡಿಸಿ ಸಂಘಟಿತರಾಗಿ ತಮಗೆ ಸಿಗುವ ಸರ್ಕಾರದ ಸೌಲಭ್ಯಗಳನ್ನು ಪಡೆಯಲು ಮುಂದಾಗುತ್ತಿದ್ದಾರೆ. ಆದರೂ ಕೂಡಾ ಜನಸಂಖ್ಯೆ ಕಡಿಮೆ ಇದ್ದ ಕಾರಣ ಬಹುತೇಕ ಗ್ರಾಮಗಳಲ್ಲಿ ಕಡೆಗಣನೆಗೆ ಒಳಗಾಗಿದ್ದಾರೆ.

**ಬೇಡರ ಸಾಮಾಜಿಕ ನಿಯಂತ್ರಣದ ಸಾಧನಗಳು:**

ಈ ಮೊದಲು ಸಗರನಾಡಿನ ಬೇಡರು ಅನೌಪಚಾರಿಕ ಸಾಮಾಜಿಕ ನಿಯಂತ್ರಣದ ಸಾಧನೆಗಳಾದ ಲೋಕಚಾರಗಳು, ನೈತಿಕ, ನಿಯಮಗಳು, ಸಂಪ್ರದಾಯಗಳು, ಆಚಾರ, ವಿಚಾರ ಪದ್ಧತಿ, ದೇವರು-ದೈವ, ಧರ್ಮಗಳನ್ನು ಮೀರಿ ನಡೆಯುತ್ತಿರಲಿಲ್ಲಾ. ಬೇಡರಿಗೆ ಧರ್ಮವೆಂದರೆ ಜೀವಾತ್ಮವಿದ್ದಂತೆ. ಧರ್ಮದ ರಕ್ಷಣೆಗಾಗಿ ಬೇಡರು ಪ್ರಾಣವನ್ನು ತ್ಯಾಗ ಮಾಡಿದ್ದಾರೆ. ಬೇಡರಲ್ಲಿ ಅನ್ಯಾಯ, ಅಕ್ರಮ, ಪಾಪಕಾರ್ಯ, ಕೊಲೆ, ಸುಲಿಗೆ, ಅತ್ಯಾಚಾರ ಇವುಗಳಿಗೆ ಜಾಸ್ತಿ ಆಸ್ಪದವಿರುವುದಿಲ್ಲ. ಕಾರಣ ಪಾಪ ಕಾರ್ಯಗಳನ್ನು ಮಾಡಿದರೆ ಅದು ಬೇಡ ಕುಲಕ್ಕೆ ಅವಮಾನ. ದೇವರು ನಮ್ಮನ್ನು ಕ್ಷಮಿಸುವುದಿಲ್ಲ. ಪಾಪಕಾರ್ಯಗಳನ್ನು ಮಾಡಿದವರು ನರಕಕ್ಕೇ ಹೋಗುತ್ತಾರೆ ಎಂಬ ಮನೋಭಾವನೆ ಇವರಲ್ಲಿದೆ. ಇವರು ಜನ್ಮ ಪುನರ್ ಜನ್ಮಗಳನ್ನು ನಂಬುವುದರಿಂದ ಹೀನ ಕೃತ್ಯಗಳನ್ನು ಮಾಡಲು ಹೆದರುತ್ತಾರೆ. ಆದ್ದರಿಂದ ಬೇಡರು ನಿಯತ್ತಿಗೆ ಹೆಸರಾದವರು ಎಂಬ ಹೆಸರಿದೆ. ಆದರೆ ಕಾಲ ಬದಲಾದಂತೆ ಸಮಾಜದಲ್ಲಿ ಪರಿವರ್ತನೆಯಾದಂತೆ ಅನೌಪಚಾರಿಕ ನಿಯಂತ್ರಣ ಸಾಧನೆಗಳ ಬದಲು ಔಪಚಾರಿಕ ನಿಯಂತ್ರಣದ ಸಾಧನಗಳಾದ ಪೋಲೀಸ್ ಕಾನೂನು ನ್ಯಾಯಾಲಯ ವ್ಯವಸ್ಥೆಗೆ ಒಗ್ಗಿಕೊಂಡಿದ್ದಾರೆ. ಇಂದು ಲಿಖಿತ ರೂಪದಲ್ಲಿರುವ ಸಂವಿಧಾನ ಕಾನೂನಿನ ಬಗ್ಗೆ ಬೇಡರಿಗೆ ಪ್ರಜ್ಞೆ ಅರಿವು ಉಂಟಾಗುತ್ತಿದೆ. ಇದರಿಂದ ಬೇಡರಲ್ಲಿ ಸಂಘರ್ಷಗಳು, ಹೊಡೆದಾಟಗಳು ಬೇಟೆಯಾಡುವುದು ಕಡಿಮೆಯಾಗುತ್ತಿದೆ. ಆದರೂ ಕೂಡಾ ಬೇಡರು ಅನೌಪಚಾರಿಕ, ಔಪಚಾರಿಕ ನಿಯಂತ್ರಣಗಳ ಹತೋಟಿಯಲ್ಲಿದ್ದಾರೆ.

ಬೇಡರಲ್ಲಿ ಲೋಕಾಚಾರಕ್ಕೆ ಉದಾ:

೧) ಕೈ ಜೋಡಿಸಿ ನಮಸ್ಕರಿಸುವುದು

೨) ಹಿರಿಯರ ಕಾಲಿಗೆ ಬೀಳುವುದು

೩) ಗುರುಹಿರಿಯರನ್ನು ಗೌರವಿಸುವುದು

೪) ಮನೆಗೆ ಬಂದ ಹೆಣ್ಣು ಮಕ್ಕಳಿಗೆ ಅರಿಶಿಣ ಕುಂಕುಮ ಕೊಡುವುದು

೫) ವಿಶೇಷ ದಿನಗಳಲ್ಲಿ ಮನೆಗೆ ಬಂದ ಸಂಬಂಧಿಕರಿಗೆ ಸೀರೆ ಕುಪ್ಪಸ ಕೊಡುವುದು

ನೈತಿಕ ನಿಯಮಗಳಿಗೆ ಉದಾಹರಣೆ:

೧) ಗುರುಹಿರಿಯರನ್ನು ಗೌರವಿಸುವುದು

೨) ಸನ್ಮಾರ್ಗದಲ್ಲಿ ನಡೆಯುವುದು

೩) ಸ್ತ್ರೀಯರಿಗೆ ಅಪಚಾರವೆಸಗಬಾರದು

೪) ಧರ್ಮ ಭಕ್ತಿ ರಾಷ್ಟ್ರ ಭಕ್ತಿ

೫) ಮುಪ್ಪಿನ ಕಾಲದಲ್ಲಿ ಮಕ್ಕಳು ತಂದೆ ತಾಯಿಗಳನ್ನು ಪಾಲನೆ ಮಾಡುವುದು

ಈ ರೀತಿಯಾಗಿ ಬೇಡರು ಲೋಕಚಾರ ನೈತಿಕ ನಿಯಮಗಳನ್ನು ಪಾಲಿಸುತ್ತಾರೆ. ಇಂದಿಗೂ ಕೂಡಾ ಬೇಡರ ಕುಟುಂಬಗಳಲ್ಲಿ ಇವುಗಳಿಗೆ ಸ್ಥಾನವಿದೆ. ಗೌರವಂಶಸ್ಥ ಬೇಡರ ಕುಟುಂಬಗಳು ಮಕ್ಕಳನ್ನು ಇವುಗಳ ಮೂಲಕ ಹತೋಟಿಯಲ್ಲಿಡುತ್ತಾರೆ. ಇವುಗಳನ್ನು ಕಲಿಸಿಕೊಡುತ್ತಾರೆ.

**೪.೧೩. ಜಾಜ್‌ಮಾನ ಪದ್ಧತಿ:**

ವ್ಯವಸಾಯ ಅಥವಾ ಕೃಷಿಯು ಭಾರತೀಯ ಗ್ರಾಮಗಳ ಪ್ರಧಾನ ವೃತ್ತಿಯಾಗಿದ್ದು ಶೇ. ೭೫% ರಷ್ಟು ಜನ ಕೃಷಿಯನ್ನು ಅವಲಂಬಿಸಿದ್ದಾರೆ. ಗ್ರಾಮ ಜೀವನವು ಹಲವಾರು ವಿಶಿಷ್ಠ ಸೇವೆಗಳ ಸಂಗಮವಾಗಿದೆ. ಅಲ್ಲಿ ರೈತರು ಒಕ್ಕಲುತನ ಮಾಡುತ್ತಾರೆ. ಬಡಗಿಗಳು ಬಡಗಿತನ, ಕಮ್ಮಾರರು ಕಮ್ಮಾರಿಕೆ, ಕುಂಬಾರರು ಕುಂಬಾರಿಕೆ, ನೇಕಾರರು ನೇಯ್ಗೆ, ಮಡಿವಾಳರು ಬಟ್ಟೆಗಳನ್ನು ಶುಚಿಮಾಡಿಕೊಡುವರು. ನಯನಜ ಕ್ಷತ್ರಿಯರು ಅಥವಾ ಭಜಂತ್ರಿಗಳು ಕ್ಷೌರ ಕಾರ್ಯ, ಚಮ್ಮಾರರು ಚಮ್ಮಾರಿಕೆ ಇದೇ ಮೊದಲಾದ ವಿವಿಧ ಉದ್ಯೋಗಗಳಲ್ಲಿ ಜನರು ಮೊದಲಿಂದಲೂ ನಿರತರಾಗಿದ್ದಾರೆ. ಪ್ರಧಾನ ಉದ್ಯೋಗವಾದ ಬೇಸಾಯವನ್ನು ಹೊರತುಪಡಿಸಿ ಉಳಿದ ಉದ್ಯೋಗಗಳನ್ನು ಆಧರಿಸಿ ಬದುಕುತ್ತಾ ವಿಶಿಷ್ಟ ಸೇವೆಗಳನ್ನು ಸಲ್ಲಿಸುವ ಜನರಿಗೆ ಅಲ್ಪ ಭೂಮಿಯನ್ನು ಇಲ್ಲವೇ ವರ್ಷಕ್ಕೊಮ್ಮೆ ಇಲ್ಲವೇ ಎರಡು ಸಲ ಮತ್ತು ಹಬ್ಬ ಹರಿದಿನಗಳಲ್ಲಿ ಧವಸ ಧಾನ್ಯಗಳನ್ನು ನೀಡುವ ಪದ್ಧತಿ ಇತ್ತು. 'ಈ ಹಿಂದೆ ಅಂದರೆ ಪ್ರಾಚೀನ ವೇದಗಳ ಮಧ್ಯಯುಗದ ಕಾಲದಲ್ಲಿ ಹಣದ ಚಲಾವಣೆ ಅಧಿಕೃತವಾಗಿ ಇರಲಿಲ್ಲವಾದ್ದರಿಂದ ತಾವು ಬೆಳೆಯುವ ಬೆಳೆ ಧವಸ ಧಾನ್ಯಗಳು ಬಟ್ಟೆಗಳು ಪಾತ್ರೆ ಪದಾರ್ಥಗಳನ್ನು ಇತರರು ತಮಗಾಗಿ ಸಲ್ಲಿಸುವ ಸೇವೆಗೆ ಪ್ರತಿಫಲವಾಗಿ ನೀಡುವ ಪರಿಪಾಠ ಬೆಳೆದಿತ್ತು. ಈ ಪದ್ಧತಿ ಸಗರನಾಡಿನಲ್ಲಿಯೂ ಇತ್ತು ಎಂದರೆ ಆಶ್ಚರ್ಯಪಡಬೇಕಿಲ್ಲ. ಇಂತಹ ವಿಶಿಷ್ಟ ಸೇವೆಗಳನ್ನು ಸಲ್ಲಿಸುವ ಕುಶಲ ಕೆಲಸಗಾರರಿಗೂ ಮತ್ತು ಸಗರನಾಡಿನ ಬೇಡ ಕೃಷಿಕ ಕುಟುಂಬಗಳಿಗೂ ನಿಕಟವಾದ ಬಾಂಧವ್ಯವು ಮೂಡಿ ಬಂದಿದ್ದು ಇದು ಈಗಲೂ ಕಾಣಬಹುದು. ಅವರು ಸಲ್ಲಿಸುವ ಸೇವೆಗಳ ಪ್ರತಿಯಾಗಿ ಅಂತಹ ಕುಟುಂಬಗಳಿಗೆ

ಇಡೀ ವರ್ಷದಲ್ಲಿ ಒಮ್ಮೆ ಇಲ್ಲವೇ ಎರಡು ಬಾರಿ ಬಹಳ ಮಟ್ಟಿಗೆ ಸುಗ್ಗಿಯ ಕಾಲದಲ್ಲಿ ಧವಸ ಧಾನ್ಯಗಳನ್ನು ನೀಡಲಾಗುತ್ತಿತ್ತು. ಈ ಬಗೆಯ ಸಾಮಾಜಿಕ ಆರ್ಥಿಕ ವ್ಯವಹಾರಕ್ಕೆ ಜಾಜಮಾನಿ ಪದ್ಧತಿ ಅಥವಾ ಜಾಜಮಾನ್ ಪದ್ಧತಿ ಎಂದು ಕರೆಯಬಹುದು.'[೧೨] ಈ ಬಗೆಯ ವ್ಯವಸ್ಥೆಯು ಹೈದರಾಬಾದ ಕರ್ನಾಟಕದ ಸಗರನಾಡಿನಲ್ಲಿ ಹಿಂದಿನಿಂದಲೂ ಸಾಂಪ್ರದಾಯಿಕವಾಗಿ ಜಾಜಮಾನ್ ವ್ಯವಸ್ಥೆ ಇತ್ತು. ಈಗಲೂ ಈ ಪದ್ಧತಿಯನ್ನು ಕೆಲವು ಹಿಂದುಳಿದ ಗ್ರಾಮಗಳಲ್ಲಿ ಜಮೀನುದಾರರ, ಗೌಡರ, ರಾಜ ವಂಶಕ್ಕೆ ಸೇರಿದ ಮನೆತನಗಳಲ್ಲಿ ಕಾಣಬಹುದು. ಸಗರನಾಡಿನಲ್ಲಿ ಸಾಮಾಜಿಕ ಸುವ್ಯವಸ್ಥೆಗಾಗಿ ಈ ಪದ್ಧತಿಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದರು ಎಂದು ಸಂಶೋಧನೆಯಿಂದ ತಿಳಿದು ಬಂದಿದೆ.

'ಗ್ರಾಮೀಣ ಸಮಾಜಶಾಸ್ತ್ರಜ್ಞರಾದ ಆಸ್ಕರ್ ಲೆವಿಸ್ರವರು ಈ ವ್ಯವಸ್ಥೆ ಅಥವಾ ಪದ್ಧತಿಯ ಬಗ್ಗೆ ಹೀಗೆ ತಮ್ಮ ಅಭಿಪ್ರಾಯವನ್ನು ಹೇಳಿದ್ದಾರೆ. ಈ ಪದ್ಧತಿಯ ಅಡಿಯಲ್ಲಿ ಗ್ರಾಮದ ಒಳಗಡೆ ಪ್ರತಿಯೊಂದು ಜಾತಿ ಸಮೂಹವು ಸಹ ಇತರೆ ಜಾತಿಗಳ ಕುಟುಂಬಗಳಿಗೆ ಕೆಲವು ಪ್ರಾಮಾಣಿಕೃತ ಸೇವೆಗಳನ್ನು ಸಲ್ಲಿಸಬೇಕಾಗಿದೆ ಎಂದಿದ್ದಾರೆ.'[೧೩] ಈ ಪ್ರಕಾರವಾಗಿ ಈ ಹಿಂದೆ ಸಗರನಾಡಿನಲ್ಲಿ ಕ್ಷೌರಿಕನು ಜನರ ಕ್ಷೌರವನ್ನು ಮಾಡುತ್ತಿದ್ದನು. ಬಡಿಗಿಯು ಮರದ ಅವಶ್ಯಕ ಪದಾರ್ಥಗಳನ್ನು ಪೂರೈಸುತ್ತಾನೆ. ಕಮ್ಮಾರನು ಕೃಷಿಯ ಸಲಕರಣೆಗಳನ್ನು ನೀಡುತ್ತಾನೆ. ಬ್ರಾಹ್ಮಣರು ವಿವಿಧ ಧಾರ್ಮಿಕ ಕರ್ಮಾದಿಗಳನ್ನು ಸಮಾರಂಭಗಳನ್ನು ನೆರವೇರಿಸಲು ನೆರವಾಗುತ್ತಿದ್ದರು. ಪ್ರತಿಯೊಬ್ಬ ಬೇಡರೂ ಶ್ರೀಮಂತ ರಾಜವಂಶಸ್ಥರು, ಜಮೀನುದಾರರ, ದೊಡ್ಡ ರೈತರ, ಜಾಗೀರದಾರರ ಕುಟುಂಬಗಳಿಗೆ ಅನುವಂಶೀಯವಾದ ರೀತಿಯಲ್ಲಿ ಪರಂಪರಾಗತವಾಗಿ ಸೇವೆ ಸಲ್ಲಿಸುತ್ತಿದ್ದರು. ಈಗಲೂ ಕೆಲವು ಕುಟುಂಬಗಳಿಗೆ ಸೇವೆ ಸಲ್ಲಿಸುತ್ತಿದ್ದಾರೆ. ಉದಾ: ಸುರಪುರದ ರಾಜವಂಶಸ್ಥರಾದ ರಾಜಾ ವೆಂಕಟಪ್ಪನಾಯಕ ತಾತ ಅವರ ಕುಟುಂಬಕ್ಕೆ ಹಾಗೂ ಸಂಬಂಧಿಕರಾದ ರಾಣಿ ಪಾಪಮ್ಮ ಜೆಜೆ ವಂಶಸ್ಥರಿಗೆ ಮರೆಮ್ಮ ಎಂಬ ಮಡಿವಾಳರಕಿ ಸೇವೆಯನ್ನು ಸಲ್ಲಿಸುತ್ತಿದ್ದಳು. ಗುಂಡಮ್ಮ ಎಂಬ ಕುಂಬಾರಿಕೆ ಗಡಿಗೆಗಳನ್ನು ನೀಡುತ್ತಿದ್ದಳು. ಜೇವರ್ಗಿಯ ನರಬೋಳ ಗ್ರಾಮದ ಸುಬೇದಾರರ ಕುಟುಂಬಕ್ಕೆ ಇದೇ ರೀತಿಯಾಗಿ ಸೇವೆಯನ್ನು ಸಲ್ಲಿಸುವ ಎಲ್ಲಾ ಜಾಜಮಾನಿಗಳಿದ್ದರು. ಹಾಗೂ ಇವರ ಸೇವೆಗೆ ಪ್ರತಿಫಲವಾಗಿ ಧವಸ ಧಾನ್ಯಗಳನ್ನು ಪಡೆಯುತ್ತಿದ್ದರು. ಹೀಗೆ ಇಂತಹ ನೂರಾರು ಬೇಡ ಕುಟುಂಬಗಳು ಇನ್ನೂ ಈ ಪದ್ಧತಿಯನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. 'ಜಾಜಮಾನ ಪದ್ಧತಿಯಲ್ಲಿ ಒಂದು ಕುಟುಂಬ ಇಲ್ಲವೆ ಕೆಲವು ಕುಟುಂಬಗಳು ಕೆಲವು ವ್ಯಕ್ತಿಗಳಿಂದ ಕೆಲವಾರು ಸೇವೆಗಳನ್ನು ಪಡೆಯುವ ಹಕ್ಕನ್ನು ಹೊಂದಿರುತ್ತಾನೆ. ಆ ಬಗೆಯ ಸೇವೆಗಳನ್ನು ಪಡೆದುಕೊಳ್ಳುವ ವ್ಯಕ್ತಿಗಳನ್ನು ಜಾಜಮನ್ ಎಂದು ಕರೆಯುತ್ತಾರೆ. ಆ ಬಗೆಯ ಸೇವೆಗಳನ್ನು ಸಲ್ಲಿಸುವವನ್ನು ಜಾಜಮಾನು ಕಮಿಶರು ಎಂಬುವದಾಗಿ

ಕರೆಯಲಾಗುತ್ತದೆ. ಕಮಿನಾ ಎಂದರೆ ಕೆಲವರಿಗೆ ಸೇವೆಮಾಡುವವನು ಎಂದರ್ಥ. ಜಾಜಮಾನ್ ಎಂದರೆ ಆಶ್ರಯದಾತನೆಂದು ಅರ್ಥ ಕೊಡುತ್ತದೆ.'[೧೪] ಈ ಪದಗಳು ಭಾರತ ದೇಶದ ಉತ್ತರ ಭಾರತ ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿ ಪ್ರಚಲಿತದಲ್ಲಿತ್ತು. ಜಾಜಮಾನ್ ಕಮಿನ ಪದಗಳು ಭಾರತದ ವಿವಿಧ ಕಡೆಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುತ್ತವೆ. ಶಬ್ದ ಉತ್ಪತ್ತಿಯ ಪ್ರಕಾರ ಜಾಜಮಾನ್ ಪದವು ಸಂಸ್ಕೃತ ಭಾಷೆಯ ಯಜ್ಞವನ್ನು ಮಾಡುವ ವ್ಯಕ್ತಿ ಎಂಬ ಅರ್ಥ ಕೊಡುವ ಯಜಮಾನ ಎಂಬ ಪದದಿಂದ ಹುಟ್ಟಿಕೊಂಡಿದೆ. ಯಜ್ಞವನ್ನು ಮಾಡಲು ಬ್ರಾಹ್ಮಣನ ಸೇವೆಯನ್ನು ಎರವಲು ಪಡೆಯ ಬೇಕಾದದ್ದು ಅವಶ್ಯಕವಾದದ್ದು ಕ್ರಮೇಣ ಈ ಪದವು ಯಾವುದೇ ಸೇವೆಯನ್ನು ಎರವಲು ಪಡೆಯುವುದನ್ನು ಇಲ್ಲವೇ ನೀಡುವುದನ್ನು ಪ್ರತಿನಿಧಿಸಲೂ ಉಪಯೋಗಿಸಲ್ಪಟ್ಟಿದೆ. ಎನ್.ಎಸ್. ರೆಡ್ಡಿಯವರು ತಿಳಿಸಿರುವಂತೆ ರೈತನು ಒಬ್ಬ ಬಡಗಿಯನ್ನು ಮತ್ತು ಒಬ್ಬ ಕಮ್ಮಾರನನ್ನು ವಿವಿಧ ಸೇವೆಗಳಿಗಾಗಿ ಉಪಯೋಗಿಸಿಕೊಳ್ಳುವುದಾದರೆ ರೈತನು ಜಾಜಮನ್ ಅಥವಾ ಜಾಜಮಾನ ಎಂಬುವುದಾಗಿ ಪರಿಗಣಿಸಲ್ಪಡುತ್ತಾನೆ. ಬಡಗಿಯು ಕಮಿನ ಅಥವಾ ಕಮಿನ್ ಎಂಬವುದಾಗಿಯೂ ಕಮ್ಮಾರನು ಪರ್‌ಜನ್ ಎಂಬುದಾಗಿಯೂ ಕರೆಯಲ್ಪಡುತ್ತಾನೆ.

**ಜಾಜಮನ್ ಪದ್ಧತಿಯ ಬಗ್ಗೆ ಈ ವರೆಗೆ ನಡೆದಿರುವ ಅಧ್ಯಯನಗಳು:**

ಭಾರತದಲ್ಲಿ ಜಾಜಮಾನ್ ಪಧತಿಯ ಹಲವಾರು ಅಧ್ಯಯನಗಳನ್ನು ನಡೆಸಲಾಗಿದೆ. ಆಸ್ಕರ್ ಲೆವಿಸ್ರವರು ಉತ್ತರ ಭಾರತೀಯ ಗ್ರಾಮಗಳಲ್ಲಿನ ಜಾಜಮಾನಿ ಪದ್ಧತಿಯನ್ನು ಅಧ್ಯಯನ ಮಾಡಿದ್ದಾರೆ. ಪೂರ್ವ ಉತ್ತರ ಪ್ರದೇಶದಲ್ಲಿನ ಜಾಜಮಾನಿ ಪದ್ಧತಿಯ ಬಗ್ಗೆ ೧೯೦೮ರಲ್ಲಿ ಓಪೂರ ಮತ್ತು ೧೯೫೫ರಲ್ಲಿ ಸಿಂಗ್ ಅಧ್ಯಯನ ನಡೆಸಿದ್ದಾರೆ. ಎನ್.ಎಸ್. ರಡ್ಡಿಯವರು ಸಹ ಉತ್ತರ ಭಾರತದಲ್ಲಿನ ಜಾಜಮಾನ ಪದ್ಧತಿಯ ಬಗ್ಗೆ ಎಮ್.ಎಸ್. ಶ್ರೀನಿವಾಸ ಮತ್ತು ಬೀರಸಿಂಗ್ ಇವರು ಮೈಸೂರ ಜಿಲ್ಲೆಯಲ್ಲಿನ ಜಾಜಮಾನಿ ಪದ್ಧತಿಯ ಬಗೆಗಿನ ಬಗ್ಗೆ ಗಾಘಾರವರು ಅಧ್ಯಯನ ನಡೆಸಿದ್ದಾರೆ. ಗುಜರಾತಿನಲ್ಲಿ ೧೯೫೩ರಲ್ಲಿ ಜಾಜಮಾನ ಪದ್ಧತಿಯ ಬಗ್ಗೆ ಸ್ಪೀಲೆರವರು ಅಧ್ಯಯನ ನಡೆಸಿರುವರು ಆದರೆ ಕರ್ನಾಟಕದ ಸಗರನಾಡು ಪ್ರದೇಶದ ಜಾಜಮಾನ ಪದ್ಧತಿಯ ಕುರಿತು ಇದುವರೆಗೆ ಸಂಪೂರ್ಣವಾಗಿ ಅಧ್ಯಯನವನ್ನು ನಡೆಸಿಲ್ಲಾ ಆದ್ದರಿಂದ ಸಂಶೋಧನೆಯಲ್ಲಿ ಈ ಪದ್ಧತಿ ಕುರಿತು ಸ್ವಲ್ಪ ಮಟ್ಟಿಗೆ ಬೆಳಕು ಚೆಲ್ಲಲು ಪ್ರಯತ್ನಿಸಿದ್ದೇನೆ.

**ಜಾಜಮಾನ್ ಪದ್ಧತಿಯ ಲಕ್ಷಣಗಳು:**

೧. 'ಜಾಜಮಾನ್ ಪದ್ಧತಿಯ ಅಡಿಯ ಸಂಬಂಧಗಳು ಕಾಯಂ ಆದವುಗಳು

೨. ಜಾಜಮಾನಿ ಪದ್ಧತಿ ಅನುವಂಶೀಯವಾದುದು

೩. ಕೆಲಸದ ಪ್ರತಿಫಲವಾಗಿ ಧವಸ ಧಾನ್ಯಗಳು

೪. ಶಾಂತಿ ಮತ್ತು ತೃಪ್ತಿ

೫. ಕೆಲಸದ ವ್ಯಾಪ್ತಿಯಲ್ಲಿನ ವ್ಯತ್ಯಾಸಗಳು

**ಜಾಜಮಾನ ಪದ್ಧತಿ ಅನುಕೂಲಗಳು:**

೧. ಸೇವಾ ಭದ್ರತೆ ಸಿಗುತ್ತದೆ

೨. ಆರ್ಥಿಕ ಭದ್ರತೆ ಸಿಗುತ್ತದೆ

೩. ನಿಕಟ ವೈಯಕ್ತಿಕ ಸಂಬಂಧಗಳು

**ಜಾಜಮಾನ ಪದ್ಧತಿಯ ಅನಾನುಕೂಲಗಳು:**

೧. ಶೋಷಣೆಗೆ ಅವಕಾಶವಿರುತ್ತದೆ

೨. ಕೀಳು ಎಂಬ ಪರಿಪಾಠ ಉಂಟಾಗುತ್ತದೆ

೩. ಮೇಲು ಜಾತಿಯವರು ಇವರಿಗೆ ಹೆಚ್ಚಿನ ಹಿಂಸೆ ಕಿರುಕುಳವನ್ನು ಮಾಡುತ್ತಾರೆ

೪. ಸ್ವತಂತ್ರವಾಗಿ ಬದುಕಲು ಅವಕಾಶವಿರುವುದಿಲ್ಲ

೫. ಉದ್ಯೋಗದಲ್ಲಿ ನಿರ್ಬಂಧತೆ ಇತ್ತು'[೧೫]

ಇತ್ತೀಚಿನ ದಿನಮಾನಗಳಲ್ಲಿ ಸಗರನಾಡಿನಲ್ಲಿ ಅದರಲ್ಲಿಯೂ ಬೇಡ ಸಮುದಾಯಗಳಲ್ಲಿ ಈ ಜಾಜಮಾನಿ ವ್ಯವಸ್ಥೆ ಕ್ರಮೇಣ ಬದಲಾವಣೆಯಾಗುತ್ತಿದೆ. ಈ ಪದ್ಧತಿಯು ಕ್ಷೀಣಿಸುತ್ತಿರುವುದಕ್ಕೆ ಸ್ವಲ್ಪ ಮಟ್ಟಿಗೆ ಧಾರ್ಮಿಕ ಭಾವನೆ ಕ್ಷೀಣಿಸುತ್ತಿರುವುದು. ಇದರಿಂದಾಗಿ ಬ್ರಾಹ್ಮಣರು, ಬಡಿಗೆಯರು, ಮಡಿವಾಳರು ಪರಂಪರಾಗತ ಹಾಗೂ ಪ್ರತಿಷ್ಠೆಗೆ ಕುಂದುಂಟಾಗುತ್ತಿದೆ. ಇವರು ಅಷ್ಟನ್ನು ಹೇಳಿಕೊಳ್ಳುವ ಪ್ರಮಾಣದಲ್ಲಿ ಬೇಡಿಕೆಯಲ್ಲಿ ಇಲ್ಲ. ಸಾರಿಗೆ ಸಂಪರ್ಕ ಸಾಧನೆಗಳು ನೂತನ ಶಿಕ್ಷಣ ವ್ಯವಸ್ಥೆ ತರಬೇತಿ ಮೊದಲಾದವುಗಳು ಜಾಜಮಾನ ಪದ್ಧತಿ ಸೇವೆ ಸಲ್ಲಿಸುತ್ತಿದ್ದ ವಿವಿಧ ವೃತ್ತಿಗಳು ಕುಶಲ ಕೆಲಸಗಾರರು ಪಟ್ಟಣ ಹಾಗೂ ನಗರಗಳಿಗೆ ಒಲಸೆ ಹೋಗಿ ಸುಧಾರಿಸಿದ ರೀತಿಯ ಸೇವಾ ಕಾರ್ಯಗಳಲ್ಲಿ ನಿರತರಾಗಲು ಹೊಸಬಗೆಯ ಉದ್ಯೋಗಗಳನ್ನು ಅವಲಂಬಿಸಿ ಬದುಕಲು ನೆರವಾಗುತ್ತಿವೆ. ಸಗರ ನಾಡಿನ ಬೇಡರಿಗೆ ಬೇಡ ರಾಜ ವಂಶಸ್ಥರಿಗೆ ಜಮೀನುದಾರ ಜಾಗೀರುದಾರರಿಗೆ ಸೇವೆಯನ್ನು ಸಲ್ಲಿಸುತ್ತಿದ್ದರು. ಬ್ರಾಹ್ಮಣರು, ಬಡಿಗೇರರು, ಮಡಿವಾಳರು, ಭಜಂತ್ರಿಯವರು ವಿವಿಧ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಇವರಲ್ಲಿಯೇ ತೀರಾ ಕಡುಬಡವರು ಮಾತ್ರ ಅಲ್ಪ ಮಟ್ಟಿಗೆ ಕೆಲವು ಕುಟುಂಬಗಳಿಗೆ ಮಾತ್ರ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

## ಜಾಜಮಾನಿ ವ್ಯವಸ್ಥೆ

| ಸಂಖ್ಯೆ | ಜಾತಿ | ಸೇವೆಯ ಸ್ವರೂಪ | ಪ್ರತಿಫಲದ ಹಕ್ಕುಗಳು |
| --- | --- | --- | --- |
| ೧ | ಬ್ರಾಹ್ಮಣರು | ಮನೆಯ ಪೂಜೆ ಪುನಸ್ಕಾರ, ಪಂಚಾಂಗ ಹೇಳುವುದು, ಧಾರ್ಮಿಕ ಕ್ರಿಯಾ ವಿಧಿಗಳನ್ನು ನೆರವೇರಿಸುವುದು. | ಬೆಳ್ಳಿ ಬಂಗಾರದ ಕಾಣಿಕೆ ವಿಶೇಷ ದಿನಗಳಲ್ಲಿ ಧವಸ ಧಾನ್ಯಗಳನ್ನು ಪಡೆಯುತ್ತಿದ್ದರು. |
| ೨ | ಮಡಿವಾಳರು | ಯಜಮಾನರ ಮನೆಯ ಎಲ್ಲಾ ಸದಸ್ಯರ ಬಟ್ಟೆಗಳನ್ನು ಒಗೆದು ಕೊಡುವುದು. | ಇವರು ೬ ತಿಂಗಳಿಗೊಮ್ಮೆ ಅಥವಾ ವರ್ಷಕ್ಕೊಮೆ ಜೋಳ, ಸಜ್ಜೆ, ಶೇಂಗಾ ಇನ್ನಿತರ ಧವಸ ಧಾನ್ಯ ಪಡೆಯುತ್ತಿದ್ದರು. |
| ೩ | ಕುಂಬಾರ | ಮಣ್ಣಿನ ಮಡಿಕೆ, ಕುಡಿಕೆ ಹಾಗೂ ಗಡಿಗೆಗಳನ್ನು ಒದಗಿಸುವುದು. ಮತ್ತು ಮಣ್ಣು ಎತ್ತಿನ ಅಮಾವಾಸ್ಯೆಯಂದು ೨ ಜೊತೆ ಎತ್ತುಗಳನ್ನು ಮಾಡಿ ಕೊಡುವುದು. | ಇವರು ಮಡಿಕೆ, ಕುಡಿಕೆ, ಗಡಿಗೆಗಳ ಬೆಲೆಗೆ ಅಥವಾ ಮೌಲ್ಯಕ್ಕೆ ತಕ್ಕಂತೆ ಆಹಾರ ಧಾನ್ಯಗಳನ್ನು ಪಡೆಯುತ್ತಿದ್ದರು. |
| ೪ | ಚಮ್ಮಾರ | ಮಾದಿಗ ಚಮ್ಮಾರನು ಮನೆಯ ಸದಸ್ಯರಿಗೆ ಬೇಕಾದ ತೊಗಲಿನ ಚಪ್ಪಲಿ ಅಥವಾ ರಬ್ಬರಿನ ಚಪ್ಪಲಿ ತಯಾರಿಸಿಕೊಡುತ್ತಿದ್ದನು. ಸತ್ತ ಪ್ರಾಣಿಗಳನ್ನು ಊರ ಹೊರಗೆ ಸಾಗಿಸುತ್ತಿದ್ದನು. | ಇವರು ತಮ್ಮ ಚಪ್ಪಲಿಗಳಿಗೆ ಅನುಗುಣವಾಗಿ ಆಹಾರ ಧಾನ್ಯಗಳನ್ನು ಪಡೆಯುತ್ತಿದ್ದರು.'[೧೬] |

**ಅಡಿಟಿಪ್ಪಣಿ**

೧. ಚ.ನ.ಶಂಕರರಾವ್, ೨೦೧೧-೧೨, ಸಮಾಜಶಾಸ್ತ್ರದ ದರ್ಶನ, ಪು.ಸಂ. ೧೬೦

೨. ಬಿ. ಕಿಷ್ಟಪ್ಪ, ೨೦೧೩, ಗ್ರಾಮೀಣ ಅಭಿವೃದ್ಧಿ ಪರಿಚಯ, ಪು.ಸಂ. ೧೧೬

೩. ಅದೇ, ಪು.ಸಂ. ೧೧೮

೪. ಅದೇ, ಪು.ಸಂ. ೧೨೧

೫. ತಾರಿಹಳ್ಳಿ ಹನುಮಂತಪ್ಪ, (ಸಂ), ೨೦೧೨, ನಾಯಕರ ಮಹಾ ಸಂಸ್ಥಾನ ಸುರಪುರ, ಪು.ಸಂ. ೧೪೮.

೬. ಅದೇ, ಪು.ಸಂ. ೯೪.

೭. ಅದೇ, ಪು.ಸಂ. ೧೪೯.

೮. ಎಂ. ನಂಜಮ್ಮಣ್ಣಿ, ೨೦೦೩, ಭಾರತೀಯ ಸಾಮಾಜಿಕ ಸಂಸ್ಥೆಗಳು, ಪು.ಸಂ. ೧೭೨.

೯. ವಿಜಯ ಕರ್ನಾಟಕ ದಿನಪತ್ರಿಕೆ ದಿ.೨೪.೮.೨೦೧೧, ವರದಿ.

೧೦. ಅದೇ, ೮.೭.೨೦೧೧, ವರದಿ.

೧೧. ಅದೇ, ೧೫.೩.೨೦೦೮, ವರದಿ.

೧೨. ಪ್ರೊ. ಕೆ. ಭೈರಪ್ಪ, ೨೦೦೮, ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿಯ ಸಮಾಜ ಶಾಸ್ತ್ರ, ಪು.ಸಂ. ೪೬

೧೩. ಅದೇ, ಪು.ಸಂ. ೪೭

೧೪. ಅದೇ, ಪು.ಸಂ. ೪೮

೧೫. ಅದೇ, ಪು.ಸಂ. ೫೦

೧೬. ಅದೇ, ಪು.ಸಂ. ೫೩

# ಅಧ್ಯಾಯ ೫

## ಸಗರನಾಡಿನ ಬೇಡ ಸಮುದಾಯದ ಸಾಂಸ್ಕೃತಿಕ ಜೀವನ

೧. ಧರ್ಮ ಮತ್ತು ಧಾರ್ಮಿಕ ಆಚರಣೆಗಳು

೨. ಬೇಡ ಸಮುದಾಯದ ಹಬ್ಬ ಹರಿದಿನಗಳ ಆಚರಣೆಗಳು

೩. ಸಗರ ನಾಡಿನ ಬೇಡರ ಸ್ತ್ರೀ ದೇವತೆಗಳು

೪. ಸಗರನಾಡಿನ ಬೇಡರ ವಿಧಿ–ನಿಷೇಧಗಳು

೫. ಸಗರನಾಡಿನ ಬೇಡ ಸಮುದಾಯದವರ ಹುಟ್ಟು ಮತ್ತು ಸಾವಿನ ಸಂಸ್ಕಾರಗಳು

# ಅಧ್ಯಾಯ ೫

## ಸಗರ ನಾಡಿನ ಬೇಡ ಸಮುದಾಯದ ಸಾಂಸ್ಕೃತಿಕ ಜೀವನ

ಪಾಶ್ಚಾತ್ಯ ಸಂಸ್ಕೃತಿ, ದ್ರಾವಿಡ ಸಂಸ್ಕೃತಿ, ಕೊಡವರ ಸಂಸ್ಕೃತಿ, ಬ್ರಾಹ್ಮಣ ಸಂಸ್ಕೃತಿ, ಲಿಂಗಾಯತ ಸಂಸ್ಕೃತಿ, ಹಾಲುಮತ ಸಂಸ್ಕೃತಿ, ಬೇಡರ ಸಂಸ್ಕೃತಿ ಇಂತಹ ಮಾತುಗಳಲ್ಲಿ ಸಂಸ್ಕೃತಿ ಎಂಬ ಪದ ಒಂದು ಜಾತಿ ಸಮುದಾಯದ ಪ್ರಾಂತದ ಅಥವಾ ಜಿಲ್ಲೆಯ ಜನಜೀವನದ ಹೊರ ಲಕ್ಷಣಗಳನ್ನು ಸೂಚಿಸುತ್ತದೆ. ಜನರ ವೇಷಭೂಷಣಗಳು ಹಬ್ಬ ಮದುವೆ ಮುಂತಾದವುಗಳನ್ನು ಆಚರಿಸುವ ರೀತಿ ಇಂಥವೆಲ್ಲ ಈ ಸಂಸ್ಕೃತಿಯ ರೂಪಗಳು ಸಮಾಜ ವಿಜ್ಞಾನ ಮಾನವ ವಿಜ್ಞಾನ ರೂಪಗಳು ಸಂಸ್ಕೃತಿಯನ್ನು ಈ ಅರ್ಥದಲ್ಲಿ ಬಳಸುತ್ತವೆ. ಇಂಥ ಸಂಸ್ಕೃತಿ ಇಡೀ ಸಮಾಜದ ದೃಷ್ಟಿ ವ್ಯಕ್ತಿಯದಲ್ಲ. ಅದಿರುವುದು ಆ ಸಮಾಜದಲ್ಲಿ ಮಾತ್ರ ಹೊರಗಿನವನು ಎದುರಿಸಬೇಕಾದಾಗ ಇಂಥ ಸಂಸ್ಕೃತಿ ಸಮಾಜದೊಳಗಿರುವವರನ್ನು ಒಟ್ಟು ಗೂಡಿಸುತ್ತದೆ. ಹೊರಗಿನವರಿಲ್ಲದಾಗ ಅದು ಒಗ್ಗಟ್ಟನ್ನು ಮುರಿಯದಂತೆ ಎಚ್ಚರಿಕೆ ವಹಿಸಬೇಕು. ಇಲ್ಲಿ ವಿಮೋಚಿಸುತ್ತಿರುವ ಸಂಸ್ಕೃತಿ ಬೇರೆ ಸಂಸ್ಕೃತಿ ಎಂದರೆ ಉತ್ತಮಗೊಳಿಸಿದ್ದು, ಚೊಕ್ಕ ಗೊಳಿಸಿದ್ದು, ಅಂದಗೊಳಿಸಿದ್ದು. ಚೊಕ್ಕಗೊಳಿಸುವ ಆತ್ಮವಿದ್ದರೆ ಸಂಸ್ಕೃತಿಯಿದ್ದಂತೆ ಇದು ಜೀವನಕ್ಕೂ ಹೊರಲಕ್ಷಣವಲ್ಲ. ಮನಸ್ಸಿನ ಹೃದಯದ ಪರಿಪಾಕ ಅದರ ಲಕ್ಷಣಗಳೆಂದರೆ ನಯ, ವಿನಯ ಸಹ ಮಾನವರ ಸಹಜೀವಿಗಳ ವಿಷಯದಲ್ಲಿ ಸಹಾನುಭೂತಿ ಸಹನೆ ಮರುಕ ಸರ್ವ ಭ್ರಾತೃತ್ವಕ್ಕೆ ಅಡ್ಡಿಯಾಗದ ದೇಶಾಭಿಮಾನ, ಭಾಷಾಭಿಮಾನ ಇತರರನ್ನು ಕೀಳು ಎಂದು ಭಾವಿಸದೇ ಇತರರಿಗೆ ನಾವು ಕೀಳು ಎಂಬ ಭಾವನೆಗೆ ಎಡೆಗೊಡದೆ ಇರುವಂಥ ಆತ್ಮಾಭಿಮಾನ ಹಸಿಯುಡುಗೆಯುಟ್ಟ ವನರಾಣಿ ಹೊಳೆಯ ಮಂಜುಳ ನೀನಾದ. ಸೂರ್ಯೋದಯ ಸೂರ್ಯಾಸ್ತ ಸಂಗೀತದ ಲಯ, ಮಾನವ ಹೃದಯದ ಸ್ನೇಹಾ ಪ್ರೇಮಗಳು ಚಿಕ್ಕ ಮಕ್ಕಳು ಮುಗ್ಧ ಮನೋರತೆ ಇಂಥವರಲ್ಲವನ್ನೂ ಒಳಗೊಂಡ ಮಾನವ ಜೀವನ ಅದೆಷ್ಟು ಸುಂದರವಾದದ್ದು! ಈ ಭಾಗ್ಯವನ್ನು ಅನುಭವಿಸುವ ಶಕ್ತಿಯು ಸಂಸ್ಕೃತಿಯಲ್ಲಿ ಒಂದು ಭಾಗ. ನಾವು ಅಹಂನಲ್ಲಿ

ಮುಳುಗಿದರೆ ಯಾವೊಂದೂ ನಮಗೆ ಲಭಿಸಲಾರವು. ಸುಸಂಸ್ಕೃತನಾಗಬೇಕೆನ್ನುವವನು ಇತರರನ್ನು ನೋಯಿಸುವ ಮನೋವೃತ್ತಿಯನ್ನು ಹೊರಹಾಕಬೇಕು. ಇತರರನ್ನು ಅರ್ಥ ಮಾಡಿಕೊಂಡು ಅವರಿಗೆ ಉಲ್ಲಾಸ ಕೊಡುವ ಮನೋವೃತ್ತಿಯನ್ನು ಬೆಳೆಸಿಕೊಳ್ಳಬೇಕು. ಕೋಪ ತಾಪಾಧಿಗಳನ್ನು ಹತೋಟಿಯಲ್ಲಿಟ್ಟು ಕೊಳ್ಳಬೇಕು. ಈ ಸಂಸ್ಕೃತಿ ಸಮಾಜ ಸೃಷ್ಟಿಸಲಾಗದ್ದು. ವ್ಯಕ್ತಿಯೇ ಜೀವನಾನುಭವದಿಂದ ಸಾಧಿಸ ಬೇಕಾದದ್ದು. ದೇವದಾನವರು ಅಮೃತಕ್ಕಾಗಿ ಸಮುದ್ರವನ್ನು ಕಡೆದಾಗ ಅಮೃತ ವಿಷಗಳೆರಡೂ ಹುಟ್ಟಿದ್ದವಂತೆ. ವಿಷವನ್ನು ಶಿವ ನುಂಗಿದಾಗ ಅದು ಕಂಠದಿಂದ ಒಳಗೆ ಇಳಿಯದಂತೆ ಪಾರ್ವತಿ ತಡೆದಳಂತೆ. ಹಾಗೆ ನಾವು ಜೀವನ ಸಾಗರವನ್ನು ಕಡೆಯುವಾಗ ಅದರ ವಿಷಯ ಚಿಂತನೆ ಮಾಡುವಾಗ ಅಮೃತ ವಿಷಗಳೆರಡೂ ಹುಟ್ಟುತ್ತವೆ. ಜೀವನದಲ್ಲಿ ವಿಷವಿಲ್ಲದಿಲ್ಲ. ವಿಷವಿದೆಯೆಂಬ ತಿಳುವಳಿಕೆ ಬೇಕು. ಆದರೆ ವಿಷ ಹೃದಯಕ್ಕೆ ಇಳಿಯದಂತೆ ತಡೆಯುವ ಶಕ್ತಿಯೂ ಬೇಕು. ಜೀವನಾನುಭವವನ್ನು ಕಡೆದರೆ ಕೊನೆಯಲ್ಲಿ ಲಭಿಸುವ ಅಮೃತ ಸಂಸ್ಕೃತಿ. ಈ ಸಂಸ್ಕೃತಿ ಕಾಲದೇಶಗಳಿಗನುಸಾರವಾಗಿ ಬದಲಾಯಿಸುವಂಥದಲ್ಲ. ಎಲ್ಲಾ ಕಾಲಗಳಿಗೂ ಎಲ್ಲ ದೇಶಗಳಿಗೂ ಒಂದೇ. ತಬ್ಬಲಿ ಮಗು ಎದುರಿಗಿರುವಾಗ ನಿನ್ನ ಮಗುವನ್ನು ಮುದ್ದಿಡಬೇಡ ಜೋಕೆ! ಎಂದು ಪರ್ಷಿಯಾದ ಹದಿಮೂರನೇಯ ಶತಮಾನದ ಕವಿ ಷೇಕ್ ಸಾಧಿ ಎಚ್ಚರಿಸಿದ. ಸುಸಂಕೃತನ ಹೃದಯದಿಂದ ಮಾತ್ರ ಬರಬಹುದಾದ ಈ ಮಾತು, ಈ ಭಾವ ಸಾಧ್ಯ. ಕಾಲ ದೇಶಗಳಲ್ಲಿ ಮಾತ್ರವಲ್ಲದೆ ಎಲ್ಲ ಕಾಲ ದೇಶಗಳಲ್ಲಿಯೂ ಸತ್ಯ ಸಾವಿರಾರು ವರ್ಷಗಳ ಕೆಳಗೆ ವಾಲ್ಮೀಕಿ ಕಲ್ಪಿಸಿ ಕೊಟ್ಟ ಶ್ರೀರಾಮ ಇಂದಿಗೂ ಅತ್ಯುತ್ತಮ ಸಂಸ್ಕೃತಿಯ ಸಂಕೇತ ಎಂದು ಹೇಳಬಹುದು.

"ಧರ್ಮೋ ರಕ್ಷತಿ ರಕ್ಷಿತಃ" "ಓಂ ಅಸತೋಮಾ ಜ್ಯೋತಿರ್ಗಮಯ" ಮುಂತಾದ ಸರ್ವೋತ್ಕೃಷ್ಟ ವಾಕ್ಯಗಳು ಆಕಸ್ಮಿಕವಾಗಿ ಬರೆಯಲ್ಪಟ್ಟಿಲ್ಲ. ಬದಲಾಗಿ ಮಹಾನ್ ಋಷಿ ಮುನಿಗಳು ಮಹರ್ಷಿಗಳು ಭಾರತೀಯ ಮಣ್ಣಿನ ಸಂಸ್ಕೃತಿಯಲ್ಲಿ ಜ್ಞಾನ ತಳೆದು ಅಪೂರ್ವವೆನಿಸುವ ಧಾರ್ಮಿಕ ಮನೋಬಲದಲ್ಲಿ ಮಿಂದೆದ್ದಾಗ ಅವರ ದಿವ್ಯ ಚಕ್ಷುಗಳಿಂದ ಆವಿರ್ಭಜಿಸಿದ ಅನಂತ ಅನುಭವಗಳು. ನಮ್ಮ ಭಾರತೀಯ ಸಂಸ್ಕೃತಿ, ಧರ್ಮ, ಆಚರಣೆಗಳು ಆಡಂಬರಕ್ಕಾಗಿ, ವೈಭೋಗಕ್ಕಾಗಿ, ಲೌಕಿಕ ತೃಪ್ತಿಗೋಸ್ಕರ ಯಾರೋ ಸಾಮಾನ್ಯ ವ್ಯಕ್ತಿಗಳು ನಿರ್ಮಿಸಿದ ಕಟ್ಟುಪಾಡುಗಳಲ್ಲ. ನಾವು ನಮ್ಮ ಮಹರ್ಷಿಗಳು ಹಾಗೂ ಪೂರ್ವಜರಂತೆ ಸಂಸ್ಕೃತಿಯನ್ನು ಶ್ರದ್ಧೆ, ಜಿಜ್ಞಾಸೆಯಿಂದ ಪರಿಶೀಲಿಸುತ್ತಾ ಹೋದಾಗ ಅವುಗಳಲ್ಲಿರುವ ಪವಿತ್ರ ತಮವಾದ ಅತ್ಮೋನ್ನತಿಗೆ ನೆರವಾಗುವ ಜಗತ್ತಿಗೆ ಹೊಸ ಬೆಳಕನ್ನು ನೀಡುವ ಮಾನವ ಬದುಕನ್ನು ಕ್ರಿಯಾಶೀಲವಾಗಿಸುವ ಅವೆಷ್ಟೋ ಪ್ರೇರಣೆಗಳು ಗೋಚರಿಸುತ್ತವೆ. ಆಗ ನಾವು ಕುರುಡರಾಗಿರಬಾರದು. ಜಗತ್ತಿನ ಎಲ್ಲಾ ದೇಶಗಳು ತಮ್ಮದೇ ಧರ್ಮ, ಆಚರಣೆ, ಸಂಸ್ಕೃತಿಗಳನ್ನು ಪರೋಕ್ಷವಾಗಿಯೋ ಅಪರೋಕ್ಷವಾಗಿಯೋ ಪ್ರತಿನಿಧಿಸುತ್ತವೆ.

ಜಗತ್ತು ಹುಟ್ಟಿ ವಿಕಾಸವಾದದ್ದೇ ಇಂತಹ ಸಂಸ್ಕೃತಿ ಮತ್ತು ನಂಬಿಕೆಗಳಿಂದ. ಹೀಗಾಗಿ ಇವುಗಳು ನಾಶವಾದರೆ ಈ ಜಗತ್ತು ನಾಶವಾದಂತೆ. ಎಲ್ಲಾ ಧರ್ಮದವರು ಮತ್ತು ಜಾತಿ ಸಮುದಾಯದವರು ತಮ್ಮ ಸಂಸ್ಕೃತಿ ನಂಬಿಕೆಗಳ ನಿಜವಾದ ತಿರುಳನ್ನು ತಿಳಿಸಿಕೊಡಬೇಕಾದ ತುರ್ತು ಬಂದೊದಗಿದೆ. ಅದರಂತೆ ಭಾರತೀಯ ಸನಾತನ ಹಿಂದು ಧರ್ಮದ ನಾವುಗಳು ಕೂಡ ನಮ್ಮ ಆಚರಣೆ ಸಂಸ್ಕೃತಿಗಳನ್ನು ಅವಹೇಳನ ಮಾಡದೇ ನಿರ್ಲಕ್ಷಿಸದೇ ಪ್ರಜ್ಞಾಪೂರ್ವಕವಾಗಿ ಅರ್ಥೈಸಿಕೊಂಡು ಮಾನವ ಕಲ್ಯಾಣವನ್ನು ಸಾಧಿಸಬೇಕಾಗಿದೆ. ಮುಖ್ಯವಾಗಿ ಸನಾತನ ಸಮುದಾಯವಾದ ಬೇಡರ ಸಾಂಸ್ಕೃತಿಕ ಜೀವನವನ್ನು ಅರಿಯುವುದು ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದು ಎಂದು ಹೇಳಬಹುದು. ಸಂಸ್ಕೃತಿಯ ಅರ್ಥ: ಸಂಸ್ಕೃತಿ ಎಂಬ ಪದವನ್ನು ಸಮಾಜ ಶಾಸ್ತ್ರ ಹಾಗೂ ಮಾನವ ಶಾಸ್ತ್ರಗಳಲ್ಲಿ ಒಂದು ವಿಶಿಷ್ಠ ಅರ್ಥದಲ್ಲಿ ಬಳಸಲಾಗಿದ್ದರೂ ಸಾಮಾನ್ಯ ಜನರು ಅದನ್ನು ತಮ್ಮದೇ ಆದ ಅರ್ಥವನ್ನು ದಿನನಿತ್ಯ ಜೀವನದಲ್ಲಿ ಬಳಸುವರು.

'ಸಾಮಾನ್ಯವಾಗಿ ಸಂಸ್ಕೃತಿ ಎಂದರೆ ಸಂಸ್ಕಾರದಿಂದ ಬಂದಿದೆ. ಸಂಸ್ಕಾರವೆಂದರೆ (ಸಮ+ಕೃತಿ) ಸರಿಯಾದ ಕೃತಿ, ಸರಿಯಾದ ಆರ್ಯ, ಸರಿಯಾದ ಕೆಲಸ, ಯಾವುದು ಸರಿಯಾಗಿದೆಯೋ ಅದು ಸಂಸ್ಕೃತಿ ಅಂದವಾಗಿಸುವುದು, ಚಂದವಾಗಿಸುವುದು, ಸುಧಾರಿಸುವುದು, ಚೆನ್ನಾಗುವಂತೆ ಮಾಡುವುದು ಉತ್ತಮ ಪಡಿಸುವುದು, ಸಂಸ್ಕೃತಗೊಳಿಸುವುದು ಇತ್ಯಾದಿ.

**ಸಂಸ್ಕೃತಿಯ ವ್ಯಾಖ್ಯೆ:-**

ಎಡ್ವರ್ಡ್-ಬಿ-ಟೈಲರ್: ಸಂಸ್ಕೃತಿಯ ಜ್ಞಾನ ನಂಬುಗೆ ಕಲೆ ನೈತಿಕ ನಿಯಮ ಕಾನೂನು ರೂಢಿ ಮತ್ತು ಮಾನವರು ತನ್ನ ಸಮಾಜದ ಸದಸ್ಯನಾಗಿದ್ದುಕೊಂಡು ಸಾಧಿಸಿದ ಇನ್ನುಳಿದ ಸಾಮರ್ಥ್ಯಗಳನ್ನು ನೈಪುಣ್ಯಗಳನ್ನು ಒಳಗೊಂಡಿರುವ ಅಖಂಡವಾದ ಒಂದು ಸಂಯೋಜನ ವ್ಯವಸ್ಥೆ ಎಂದಿದ್ದಾರೆ. ಮ್ಯಾಲಿನೋವಸ್ಕಿ ಎಂಬ ಮಾನವ ಶಾಸ್ತ್ರಜ್ಞನ ಅಭಿಪ್ರಾಯದಲ್ಲಿ ಮಾನವ ತನ್ನ ಜೀವಿತದ ಗೊತ್ತು ಗುರಿಯನ್ನು ರೂಡಿಸಿಕೊಳ್ಳಲು ನಿರ್ಮಿಸಿಕೊಂಡ ಸಾಧನವೇ ಸಂಸ್ಕೃತಿ ಎಂದಿದ್ದಾರೆ.'[೧]

**೫.೧ ಧರ್ಮ ಮತ್ತು ಧಾರ್ಮಿಕ ಆಚರಣೆಗಳು:**

ಧರ್ಮವು ಸಗರನಾಡಿನ ಬೇಡ ಸಮುದಾಯಗಳಲ್ಲಿ ಜೀವ ಅಥವಾ ಆತ್ಮವಿದ್ದಂತೆ. ದೇಹದಲ್ಲಿರುವ ಆತ್ಮ ದೇಹವನ್ನು ಬಿಟ್ಟರೆ ಹೇಗೆ ನಿರ್ಜೀವ ವಸ್ತುವಾಗುತ್ತದೋ ಹಾಗೆ ಬೇಡ ಸಮುದಾಯದಲ್ಲಿ ಧರ್ಮ ಆತ್ಮವಿದ್ದಂತೆ. ಈ ಧರ್ಮ ಧಾರ್ಮಿಕ ಆಚರಣೆಗಳು ಬಿಟ್ಟರೆ ಬೇಡ ಸಮುದಾಯ ಅನಾಥವಾಗುತ್ತದೆ. ಇದು ಪ್ರಾಚೀನ ಕಾಲದಿಂದ ಇಂದಿನವರೆಗೆ ಬೇಡರಲ್ಲಿ ಒಂದಿಲ್ಲಾ ಒಂದು ರೂಪದಲ್ಲಿ ಅಸ್ತಿತ್ವದಲ್ಲಿರುವುದನ್ನು ಕಾಣಬಹುದಾಗಿದೆ.

ಧರ್ಮ ಒಂದು ಶಕ್ತಿ ಎಂದು ಬೇಡರು ಮೊದಲಿನಿಂದಲೂ ಅರಿತಿರುವುದರಿಂದಾಗಿಯೇ ಶಕ್ತಿಯನ್ನು ಪಡೆಯಲು ಭಯ-ಭಕ್ತಿ, ಜಪ-ತಪ, ಅನುಷ್ಠಾನ-ಯಜ್ಞ-ಯಾಗಾದಿಗಳನ್ನು, ಧ್ಯಾನ, ಬಲಿ, ಅರ್ಪಣೆ, ಹಬ್ಬ, ಜಾತ್ರೆ, ಉತ್ಸವ, ಆರಾಧನೆ ಮುಂತಾದ ಧಾರ್ಮಿಕ ಪ್ರಯೋಗಗಳು ಆಚರಣೆಗಳನ್ನು ಅನುಸರಿಸುತ್ತಲೇ ಬರುತ್ತಿದ್ದಾರೆ. ಇವರು ತಮಗಿಂತ ಮಿಗಿಲಾದ ಅಲೌಕಿಕ ಶಕ್ತಿ ಜಗತ್ತಿನಲ್ಲಿ ಒಂದು ಇದೆ ಎಂದು ನಂಬುತ್ತಾ ಬಂದಿದ್ದಾರೆ. ನೈಸರ್ಗಿಕ ವಿಕೋಪಗಳಾದ ಗುಡುಗು, ಮಿಂಚು, ಭೂಕಂಪ, ಪ್ರವಾಹ, ಬಿರುಗಾಳಿ, ಸುನಾಮಿ, ಬರಗಾಲ ಇತ್ಯಾದಿಗಳ ಹಿಂದೆ ದೇವರಿದ್ದಾನೆ ಎಂದು ನಂಬಿದ್ದಾರೆ. ಸಗರನಾಡಿನ ಬೇಡರು ಮೂಲತಃ ಆದಿವಾಸಿಗಳು. ಇವರು ನಿಸರ್ಗ ಪೂಜೆ, ಪಿತೃ ಪೂಜೆ, ಪಶು, ಪಕ್ಷಿ, ಗಿಡ, ಮರ, ಪ್ರಾಣಿ, ಸೂರ್ಯ, ಚಂದ್ರ, ನಕ್ಷತ್ರ, ಮಂತ್ರ, ಮಾಟ, ಮಾಯೆ, ಹೇಳಿಕೆ-ಕೇಳಿಕೆಗಳು, ಭೂತ-ಪ್ರೇತ-ಪಿಶಾಚಿ ಮುಂತಾದವುಗಳನ್ನು ನಂಬಿದ್ದಾರೆ. ಆದ್ದರಿಂದ ಧರ್ಮ ಧಾರ್ಮಿಕ ಆಚರಣೆಗಳೊಂದಿಗೆ ಬೇಡರು ನಿಕಟವಾದ ಸಂಬಂಧವನ್ನು ಹೊಂದಿದ್ದಾರೆ. ಸರ್ವ ಚೇತನವಾದ ದೇಹ ನಶ್ವರ. ಆತ್ಮ ಅಮರ. ದೈವಿ ಸಾಕ್ಷಾತ್ಕಾರ, ಪುನರ್ ಜನ್ಮ, ನಂಬಿಕೆ, ಕುಲದೇವತೆ, ಇಷ್ಟ ದೇವತೆ, ಆರಾಧ್ಯ ದೇವತೆ, ಗ್ರಾಮ ದೇವತೆ ಮುಂತಾದವುಗಳ ಬಗ್ಗೆ ಅಪಾರವಾದ ನಂಬಿಕೆಗಳನ್ನು ಇಟ್ಟಿದ್ದಾರೆ. ಸಗರನಾಡಿನಲ್ಲಿ ಮನೆ ದೇವರುಗಳಾದ ಶ್ರೀ ವೇಣುಗೋಪಾಲಸ್ವಾಮಿ, ಶ್ರೀ ಆಂಜನೇಯಸ್ವಾಮಿ, ರಂಗನಾಥಸ್ವಾಮಿ, ಮಲ್ಲಯ್ಯಸ್ವಾಮಿ ವಿವಿಧ ದೇವರುಗಳ ಆರಾಧನೆಯನ್ನು ಚಾಚು ತಪ್ಪದೇ ಮಾಡುತ್ತಾರೆ. ಸುರಪುರ ಶಹಾಪುರ ತಾಲೂಕಿನ ಬೇಡರು ತಿರುಪತಿ ತಿಮ್ಮಪ್ಪ ಮತ್ತು ಶ್ರೀ ವೇಣುಗೋಪಾಲಸ್ವಾಮಿಯ ಹಾಗೂ ಆಂಜನೇಯ ಸ್ವಾಮಿಯ ಆರಾಧಕ ರಾಗಿರುವುದರಿಂದ ಶುಕ್ರವಾರ ಶನಿವಾರದಂದು ಯಾವುದೇ ಕಾರಣಕ್ಕೂ ಮಾಂಸ ಆಹಾರವನ್ನು ತಿನ್ನುವುದಿಲ್ಲ. ಆದರೆ ಜೇವರ್ಗಿ ತಾಲೂಕಿನಲ್ಲಿರುವ ಕೆಲವು ಬೇಡರ ಮನೆ ದೇವರು ಮಲ್ಲಯ್ಯಸ್ವಾಮಿ ಆಗಿರುವುದರಿಂದ ಆತನ ವಾರವಾದ ರವಿವಾರದಂದು ಮಾಂಸಾಹಾರವನ್ನು ಸೇವನೆ ಮಾಡುವುದಿಲ್ಲ. ಉಳಿದ ಸೋಮವಾರದಿಂದ ಶನಿವಾರದ ವರೆಗೆ ಮಾಂಸ ಆಹಾರವನ್ನು ತಿನ್ನುತ್ತಾರೆ. ಇದು ಸಗರನಾಡಿನಲ್ಲಿರುವ ಬೇಡರ ಪ್ರಮುಖ ವ್ಯತ್ಯಾಸ.

**ಧರ್ಮದ ಅರ್ಥ**: 'ಧರ್ಮ ಎಂಬ ಪದವು ಸಂಸ್ಕೃತ ಭಾಷೆಯ 'ಧೃ' ಎಂಬ ಧಾತುವಿನಿಂದ ಹುಟ್ಟಿದೆ. ಧೃ ಎಂದರೆ ಧರಿಸು, ಧಾರಣೆ ಮಾಡು ಅಥವಾ ಪೋಷಣೆ ಮಾಡು, ಹಿಡಿದಿಟ್ಟುಕೊಳ್ಳುವುದು ಇತ್ಯಾದಿ ಅರ್ಥಗಳನ್ನು ಹೊಂದಿದೆ.

**ಧಾರಯತಿ ಇತಿ ಧರ್ಮಃ** : ಯಾವುದು ಜಗತ್ತನ್ನು ಪೋಷಿಸುತ್ತಿದೆಯೋ, ಉದ್ಧಾರ ಮಾಡುವುದೇ ಎಲ್ಲವನ್ನೂ ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯ ಪಡೆದಿದೆಯೋ, ಕಾಪಾಡುವುದೋ ಅದುವೇ ಧರ್ಮ. ಧರ್ಮಕ್ಕೆ ಇಂಗ್ಲೀಷಿನಲ್ಲಿ ರಿಲಿಜನ್ ಎಂದು ಕರೆಯುತ್ತಾರೆ. ಇದು ಲ್ಯಾಟಿನ್ ಭಾಷೆಯ 'ಲಿರಿಗೆರ' ಎಂಬ ಪದದಿಂದ ಬಂದಿದೆ. ರಿಲಿಗೆರ ಎಂದರೆ ಒಟ್ಟಿಗೆ

ಕೂಡಿಸು, ಬಂಧಿಸು, ಜೋಡಿಸು, ಶ್ರದ್ಧೆಯಿಂದ ಆಚರಿಸು ಎಂದರ್ಥ. ಧಾರ್ಮಿಕ ಆಚರಣೆಗಳು ಎಂದರೆ ಧರ್ಮದ ಅಥವಾ ದೇವರ ಹೆಸರಿನಲ್ಲಿ ನಡೆಯುವ ಹಬ್ಬ ಹರಿದಿನ ಜಾತ್ರೆ ಉತ್ಸವ ಪೂಜೆ ಜಪ ತಪಗಳನ್ನು ಮಾಡುವುದೇ ಧಾರ್ಮಿಕ ಆಚರಣೆಗಳು ಎಂದು ಕರೆಯಬಹುದು.'೨

**೫.೨ ಬೇಡ ಸಮುದಾಯದ ಹಬ್ಬ ಹರಿದಿನಗಳ ಆಚರಣೆಗಳು:**

ಹಬ್ಬವೆಂದರೆ ಸಂತೋಷದ ಸಮಾರಂಭ ಮನೋರಂಜನೆ ನೀಡುವ ಸಾಧನೆಗಳು ಸಂಸ್ಕೃತ ಪರ್ವನ (ಪರ್ವ) ಶಬ್ದದ ತದ್ಭವವೇ ಹಬ್ಬ. ಮನುಷ್ಯನ ಮೇಲೆ ಇರುವ ದೇವಋಣ, ಪಿತೃಋಣ, ಋಷಿಋಣಗಳನ್ನು ತೀರಿಸುವ ವಿಧಾನಗಳೇ ಈ ಹಬ್ಬಗಳು ಜನಾಂಗದ ಐಹಿಕ ಸುಖ ಸಾಧನೆಗೆ ನೆರವಾಗುವುದು ಹಬ್ಬದ ಒಂದು ಮುಖ. ಮತ್ತೊಂದು ಮುಖವೆಂದರೆ ಮೋಕ್ಷ ಸಾಧನೆಗಾಗಿ ಹಬ್ಬಗಳನ್ನು ಆಚರಿಸುವುದು. ಹಿಂದುಗಳಿಗೆ ಹಬ್ಬವೆಂದರೆ ಬಲು ಖುಷಿ. ಒಂದೊಂದು ಹಬ್ಬದ ಆ ಋತುವಿನ ಇಲ್ಲವೆ ಮಾಸದ ಇಲ್ಲವೇ ಇಷ್ಟದೇವತೆಗೆ ಸಂಬಂಧಿಸಿದ ದಿನವೇ ಆಗಿರುತ್ತದೆ. ಪ್ರತಿಯೊಂದು ಹಬ್ಬವು ಒಂದೊಂದು ಸಂಪ್ರದಾಯ ಆಚರಣೆಯನ್ನು ಹೊಂದಿದೆ. ಅವುಗಳ ಸುತ್ತಲೂ ಅನೇಕ ದಂತಕತೆ ಪೌರಾಣಿಕ ಸಂಬಂಧಗಳನ್ನು ಹೆಣೆದುಕೊಂಡಿವೆ. ಇವುಗಳ ಆಚರಣೆ ಒಂದು ದೃಷ್ಟಿಯಲ್ಲಿ ಶಾಸ್ತ್ರೋಕ್ತವೂ ಮತ್ತು ವೈಜ್ಞಾನಿಕವೂ ಆಗಿದೆ. ಉತ್ಸವ ಪ್ರಿಯಾಃ ಮನುಷ್ಯ ಎಂದು ಕಾಳಿದಾಸನು ತನ್ನ ವಿಕ್ರಮೋವರ್ಷಿಯದಲ್ಲಿ ಹೇಳಿದಂತೆ ಸಕಲ ಮಾನವರಿಗೂ ಉತ್ಸವವು (ಹಬ್ಬ) ಪ್ರಿಯವಾದದ್ದು. ಮಾನವನು ಸೌಖ್ಯಕ್ಕಾಗಿ, ಸೌಂದರ್ಯಕ್ಕಾಗಿ, ಮನರಂಜನೆಗಾಗಿ, ಬಾಳಿನ ಬದಲಾವಣೆಗಾಗಿ ಸಾಧನೆಯಿಂದ ಸಿದ್ಧಿಗಾಗಿ, ಸಂಸ್ಕಾರದಿಂದ ಸನ್ಮಾರ್ಗಕ್ಕಾಗಿ ಆತ್ಮೀಯರನ್ನು ಕೂಡಿಕೊಳ್ಳುವುದಕ್ಕಾಗಿ ಈ ಹಬ್ಬ ಹರಿದಿನಗಳನ್ನು ಆಚರಣೆಯಲ್ಲಿ ತಂದಿದ್ದಾರೆ. ಬೇರೆ ಬೇರೆ ನಾಡುಗಳಲ್ಲಿ ಮತ್ತು ಸಮುದಾಯ ಪಂಗಡಗಳಲ್ಲಿ ಆಚರಣೆಯಲ್ಲಿ ವೈವಿಧ್ಯತೆ ಇದೆ. ಅದೇ ರೀತಿಯಾಗಿ ಸಗರನಾಡಿನ ಬೇಡ ಸಮುದಾಯದವರಲ್ಲಿಯೂ ಹಬ್ಬಗಳ ಆಚರಣೆಯಲ್ಲಿ ವೈವಿಧ್ಯತೆ ಇದೆ. ಹಿಂದಿನ ಕಾಲದಲ್ಲಿ ಹಬ್ಬಗಳನ್ನು ಆಚರಿಸುವುದು ಕೇವಲ ದೇವರಿಗೆ ಕೃತಜ್ಞತೆ ಸಲ್ಲಿಸುವುದಕ್ಕಿಂತಲೂ ಭಯದಿಂದ ಕೆಲವು ದೇವತೆಗಳನ್ನು ಪೂಜಿಸುವುದಾಗಿತ್ತು. ಸಮಾಜದಲ್ಲಿ ವರ್ಣಾಶ್ರಮ ಧರ್ಮಗಳನ್ನು ಅನುಸರಿಸಿ ಆರಾಧ್ಯ ದೇವತೆಗಳು ಸಾಕಾರ ಮೂರ್ತಿ ಪೂಜೆಗಳು ನಡೆಯುತ್ತಿದ್ದವು. ಮೂಢ ನಂಬಿಕೆಯಿಂದ ದೇವತೆಗಳ ಸಂಖ್ಯೆ ಒಂದಕ್ಕೆ ನೂರಾಗಿ, ನೂರಕ್ಕೆ ಸಾವಿರಾಗಿ ಕೋಟಿಗಟ್ಟಲೆ ಬೆಳೆದು ನಿಂತು ಅನೇಕ ಪಶು ಬಲಿಗಳು ಆಗುತ್ತಿದ್ದವು. ಆದಿ ಮಾನವನು ಒಂದು ದೃಷ್ಟಿಯಲ್ಲಿ ದೇವತೆಗಳನ್ನು ಸಂತೃಪ್ತಿಗೊಳಿಸುವುದಕ್ಕಾಗಿ ಏನು ಬೇಕೋ ಅದನ್ನು ಮಾಡಲು ಪ್ರಾರಂಭಿಸಿದನು. ಆದರೆ ಶತಮಾನಕ್ಕೆ ಉರುಳಿದಂತೆ ಧರ್ಮದಲ್ಲಿ ಕ್ರಾಂತಿಯಾಗಿ ಮೂಢ

ಭಕ್ತಿ ಮಾಯವಾಗಿ ಅನುದಾನ ಕರುಣೆ ನಶಿಸಿ ಹೋಗಿ ಪ್ರಜ್ವಲ ಮನಸ್ಸಿನಿಂದ ಪೂಜಿಸುವುದೇ ದೇವರ ಸಾನಿಧ್ಯವನ್ನು ಪಡೆದುಕೊಳ್ಳುವ ಮಹತ್ವದ ಮೆಟ್ಟಿಲು ಎಂದು ಜನ ಕಂಡುಕೊಂಡಿತು. ಮಾನವನು ನಿತ್ಯದ ಲೌಕಿಕ ಜೀವನದಿಂದ ಪಾರಮಾರ್ಥಿಕ ಜೀವನದತ್ತ ಮುನ್ನಡೆಯಲು ಸನಾತನವಾಗಿ ಆಚರಣೆಯಲ್ಲಿರುವ ಹಬ್ಬಗಳು ಸಾಧನವಾಗಿವೆ. ಹಬ್ಬಗಳೆಂದರೆ ಕೇವಲ ಉಂಡುಟ್ಟು ತೇಗಿ ನಲಿದಾಡಿ ಕುಣಿದಾಡುವುದಲ್ಲ. ವ್ರತ ನಿಯಮಗಳನ್ನು ಎಲ್ಲಾ ದಿನಗಳಲ್ಲಿಯೂ ಆಚರಿಸಲು ಅಸಾಧ್ಯವಾಗಿರುವುದರಿಂದ ನಿಯತ ದಿನಗಳಲ್ಲಾದರೂ ಕಡ್ಡಾಯವಾಗಿ ದೇಹದಂಡನೆಯ ಮೂಲಕ ನಮಗೆ ನಾವೇ ಆತ್ಮ ಸಂಗಾತಿಗಳಾಗುವ ಕೆಲಸ ಮಾಡುವುದಾಗಿದೆ. ಹಬ್ಬಗಳನ್ನು ಆಚರಿಸುವುದು ನಮಲ್ಲಿ ವಿಶೇಷವಾಗಿ ಸಮುದಾಯಕವಾಗಿ ಬಂದಿದೆ. ಭಾರತೀಯರು ಸಂಪ್ರದಾಯ ಶರಣರು. ಭಾರತೀಯ ಹಬ್ಬಗಳು ಭಕ್ತಿ ಜ್ಞಾನ ಕರ್ಮಗಳ ಸಂಗಮವು. ದೇವರನ್ನು ಹಬ್ಬದ ದಿನ ವಿಶೇಷ ಭಕ್ತಿಯಿಂದ ನಮಿಸುತ್ತಾರೆ. ಹಬ್ಬದಿಂದ ಸಾಮಾಜಿಕ ಜೀವನ ಮತ್ತು ಕಲೆಯನ್ನು ಪ್ರದರ್ಶಿಸುವ ಅವಕಾಶವು ಸಿಗುತ್ತದೆ. ದೇವರ ಪೂಜೆ ಸಂಗೀತ ನೃತ್ಯವನ್ನೊಳಗೊಂಡಿರುತ್ತದೆ. ಭಾರತದ ಎರಡು ಮಹಾ ಗ್ರಂಥಗಳಾದ ರಾಮಾಯಣ ಮಹಾಭಾರತಗಳು ನಮ್ಮ ಸಂಸ್ಕೃತಿಯ ಪ್ರತೀಕಗಳು. ಮಹಾಭಾರತದಲ್ಲಿಯ ಭಗವದ್ಗೀತೆಯಲ್ಲಿ ಹಿಂದುಗಳ ಜೀವನವನ್ನು ಬದಲಿಸುವಂತಹ ಪೂಜ್ಯ ಗ್ರಂಥ. ವಾಲ್ಮೀಕಿ ರಚಿಸಿದ ರಾಮಾಯಣವು ಹಿಂದುಗಳ ಜೀವನ ವಿಧಾನವನ್ನು ತೋರಿಸುವ ಪವಿತ್ರ ಗ್ರಂಥ. ನಿತ್ಯದ ನೀರಸ ಜೀವನಕ್ಕೆ ಹಬ್ಬದಿಂದ ಹೊಸ ಕಳೆ ಬರುತ್ತದೆ. ಹಬ್ಬಕ್ಕೆ ಸಂತೋಷವೆಂದು ಇನ್ನೊಂದು ಹೆಸರನ್ನು ನೀಡಬಹುದು. ಆ ಒಂದು ದಿನವಾದರೂ ಸಂಸಾರದ ಅಡ್ಡಿ ಆತಂಕಗಳನ್ನು ಮರೆತು ನೆಂಟರಿಷ್ಟರೊಡನೆ ಸರಳವಾಗಿ ಕಾಲ ಕಳೆಯಬಹುದು. ಹಬ್ಬಗಳಲ್ಲಿ ಹೆಣ್ಣು ಮಕ್ಕಳ ಪಾತ್ರ ದೊಡ್ಡದು ಎಂದು ಹೇಳಬಹುದು.

ಕವಿ ಬೇಂದ್ರೆಯವರು ಹೇಳಿದಂತೆ: ಮನೆಯ ಹೊಸ್ತಿಲಕ್ಕೆ ಶುಭ ಬರೆಯುವಾಕೆ, ಮಂಗಲದ ಬಾರೆಂದು ಕರೆಯುವಾಕೆ ಈ ರೀತಿ ಗೃಹದಲ್ಲಿ ಗೃಹಿಣಿಯಾಗಿ ಮನೆಯನ್ನು ಮಕ್ಕಳನ್ನು ಶೃಂಗರಿಸಿ ದೇವರನ್ನು ಭಕ್ತಿಯಿಂದ ಪೂಜಿಸಿ ಎಲ್ಲರನ್ನೂ ಸಂತೋಷಗೊಳಿಸುವ ಕಾರ್ಯ ಅವಳದಾಗಿದೆ. ಒಟ್ಟಾರೆ ಹಬ್ಬಗಳಿಗೆ ಸಾಮಾಜಿಕವಾಗಿ ಮತ್ತು ಸಾರ್ವಜನಿಕ ಸ್ವರೂಪ ಬಂದು ಅವು ಸಂಸ್ಕೃತಿಯ ಹೆಗ್ಗುರುತುಗಳಾಗಿ ಜನಾಂಗದ ಜೀವಾಳವಾಗಿ ಪ್ರತಿಯೊಬ್ಬರಿಗೂ ಅಪೂರ್ವವೆನ್ನಿಸಿದೆ.

**ಹಬ್ಬ ಹರಿದಿನಗಳು:**

**ಯುಗಾದಿ:** ಋತುಗಳಲ್ಲಿ ವಸಂತವಿದ್ದಂತೆ ಹಬ್ಬಗಳಲ್ಲಿ ಯುಗಾದಿ ಹೊಸ ವರ್ಷ. ಯುಗಾದಿಯವರೆಗೆ ವರ್ಷದ ಆದಿ ಎಂದು ಹೇಳಬಹುದು. 'ಶಾಲಿವಾಹನ ಶಕದ ಚೈತ್ರ ಶುದ್ಧ ಪ್ರತಿಪದೆಯು ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗದ ಆರಂಭವಂತೂ

ಅಲ್ಲ ಉತ್ತರಾಯಣ, ದಕ್ಷಿಣಾಯನ ಎಂಬ ಎರಡು ಆಯನಗಳನ್ನು ಹೊಂದಿರುವ ವರ್ಷದ ಆದಿಗೆ ಯುಗಾದಿಯೆಂಬ ಅರ್ಥ ಸೂಕ್ತವಾದದು. ಸೂರ್ಯ ಚೈತ್ರ ಶುದ್ಧ ಪ್ರತಿಪದ ದಿನ ಭೂಮಧ್ಯ ರೇಖೆಯ ಮೇಲೆ ಇರುವುದರಿಂದಲೇ ಆ ದಿನವೇ ಯುಗಾದಿ ಎಂದರ್ಥ.'[೩]

ವರ್ಷದ ಮೂರುವರೆ ಶುಭ ದಿನಗಳಾದ ಯುಗಾದಿ, ವಿಜಯ ದಶಮಿ, ಬಲಿಪಾಡ್ಯಮಿ ಮತ್ತು ಅಕ್ಷಯತದಿಗೆ ಈ ದಿನಗಳಲ್ಲಿ ಎಂತಹ ಮಂಗಳ ಕಾರ್ಯಗಳನ್ನು ಮಾಡಬಹುದು. ಈ ದಿನದ ಆನಂದ ಸೌಖ್ಯಗಳು ಬಾಳಿನಲ್ಲಿ ಬೆಂಬತ್ತಿ ಬರುತ್ತದೆ ಎಂಬುದು ಜನರ ನಂಬಿಕೆ. ಹಾಗೆಯೇ ಸಗರನಾಡಿನ ಬೇಡರು ಕೂಡ ಇಂತಹ ದಿನಗಳಲ್ಲಿ ಹೊಸ ಕಾರ್ಯಗಳನ್ನು ಮಾಡುತ್ತಾರೆ. ರೈತರು ವ್ಯಾಪಾರಸ್ಥರು ಇನ್ನುಳಿದವರು ಅಂದಿನ ದಿನವೇ ಶುಭ ಕಾರ್ಯಗಳನ್ನು ಆಚರಿಸುತ್ತಾರೆ. ಈ ಹಬ್ಬದಂದು ಬೇಡರು ತಮ್ಮ ಮನೆಗಳಲ್ಲಿ ಮನೆದೇವರ ಪೂಜೆ ಪುನಸ್ಕಾರಗಳನ್ನು ಮಾಡುವ ಮೂಲಕ ಹಾಗೂ ಬೇವು ಎಂಬ ಪಾನಕವನ್ನು ಮಾಡುತ್ತಾರೆ. ಬಾಳೆಹಣ್ಣು, ಬೊಳ್ಳೊಳ್ಳಿ ಹಣ್ಣು, ಬೇನೆ ಹೂ, ಬದಾಮಿ, ಕಲ್ಲುಸಕ್ಕರೆ, ದ್ರಾಕ್ಷಿ, ಅಜವಾನ, ಅಂಗೂರು, ಹುಣಸೆ ಹಣ್ಣು, ಬೆಲ್ಲ ಇವುಗಳಿಂದ ಮಾಡಿದ ಪಾನಕವೇ ಬೇವು. ಆ ದಿನ ಬೇಡರ ಎಲ್ಲಾ ಮನೆಗಳಲ್ಲಿ ಈ ಬೇವು ಪಾನಕವನ್ನು ಮಾಡಿ ಸಂಬಂಧಿಕರನ್ನು ಸ್ನೇಹಿತರನ್ನು ಕರೆದು ಕುಡಿಸುತ್ತಾರೆ. ಆ ದಿನ ಹೋಳಿಗೆ ಕಡುಬು ಮಾಡಿ ದಾಸಯ್ಯನಿಗೆ ನೀಡಿದ ನಂತರ ಮನೆಯವರೆಲ್ಲರೂ ಊಟ ಮಾಡುತ್ತಾರೆ. ಆ ದಿನ ಹೊಸ ಬಟ್ಟೆಗಳನ್ನು ಧರಿಸಿ ಸಂತೋಷ ಪಡುತ್ತಾರೆ. ಬೇಡರು ಅವರವರ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಹಬ್ಬವನ್ನು ಆಚರಣೆ ಮಾಡುತ್ತಾರೆ.

**ಯುಗಾದಿ ಹಬ್ಬದ ವೈಶಿಷ್ಟ್ಯ:**

'ಬ್ರಹ್ಮದೇವನು ಸೃಷ್ಟಿ ಮಾಡಿದ ದಿನ. ಅಯೋಧ್ಯ ಪಟ್ಟಣದಲ್ಲಿ ಶ್ರೀರಾಮಚಂದ್ರನು ಪಟ್ಟಾಭಿಷೇಕ ಮಾಡಿದ ದಿನ ಶಾಲಿವಾಹನ ಶಕ ಪ್ರಾರಂಭವಾದ ದಿನ. ಎಲ್ಲವೂ ಚೈತ್ರ ಶುದ್ಧ ಪ್ರತಿಪದ ಇರುವುದರಿಂದ ಇದಕ್ಕೆ ಹೆಚ್ಚು ಮಹತ್ವ ಬಂದಿದೆ.'[೪]

**ಕಾರ ಹುಣ್ಣಿಮೆ ಮತ್ತು ಮಣ್ಣೆತ್ತಿನ ಅಮಾವಾಸ್ಯೆ:**

ಇದು ಒಕ್ಕಲಿಗರ ಅಥವಾ ಕೃಷಿಕರ ಹಬ್ಬ. ಹೈದರಾಬಾದ ಕರ್ನಾಟಕ ಸಗರನಾಡಿನಲ್ಲಿ ಈ ಹಬ್ಬವನ್ನು ಗ್ರಾಮಗಳಲ್ಲಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಕಾರ ಎಂದರೆ ಮಳೆ ಇಲ್ಲಿಂದಲೇ ಮುಂಗಾರು ಮಳೆ ಆರಂಭ ಕೃಷಿಗೆ ಆಧಾರವಾದ ಎತ್ತುಗಳಿಗೆ ಈದಿನ ಹೆಚ್ಚಿನ ಗೌರವ ಆದುದರಿಂದ ಜೇಷ್ಠ ಮಾಸದ ಪೂರ್ಣಿಮ ವೃಷಭ ಪೂಜೆಗೆ ಮೀಸಲಾಯಿತು. ಕನ್ನಡಿಗರಿಗೆ ಇದು ಕಾರಹುಣ್ಣಿಮೆ ಎನ್ನಿಸುತ್ತೆ. ಹುಣ್ಣಿಮೆಯ ಮರುದಿವಸ ಎತ್ತುಗಳನ್ನು ಸಿಂಗರಿಸಿ ಮೆರವಣಿಗೆ ಮಾಡುವುದು ಊರಿನ ಅಗಸಿಗೆ ಕರಿ ಹುಡುಮುತ್ತಾರೆ. ಕರಿಹರಿವ

ನಂದಿಯ ಕರಿ ಬಿಳಿ ಬಣ್ಣ ನೋಡಿ ಆ ವರ್ಷದ ಬೆಳೆಯ ಫಲಕಟ್ಟುವರು ಈ ಹಬ್ಬವನ್ನು ಬೇಡರ ಜೊತೆಗೆ ಎಲ್ಲಾ ಜಾತಿಯವರು ಸಾಮಾನ್ಯವಾಗಿ ಆಚರಣೆ ಮಾಡುತ್ತಾರೆ.

**ಈ ಹಬ್ಬದ ಹಿನ್ನೆಲೆ:**

ನಂದೀಶ್ವರನು ಲೋಕಕಂಟಕನಾಟ ಕಾಕಾಸುರನನ್ನು ಅಂದು ಕೊಂದು ಶಾಂತಿ ಸ್ಥಾಪಿಸಿದ್ದರ ಸಂಕೇತವಾಗಿ ಕಾರಹುಣ್ಣಿಮೆ ಆಚರಿಸುವರೆಂಬ ಪೌರಾಣಿಕ ಹಿನ್ನೆಲೆಯಿದೆ. ಕಾಕಾಸುರನ ಹಾವಳಿ ಲೋಕದಲ್ಲಿ ನಡೆದು ಅವನಿಗೆ ಭಯ ಭೀತರಾಗಿ ಶಿವನನ್ನು ಮೊರೆಹೋಗಲು ಹರನು ಆಗ ನಂದೀಶ್ವರನಿಗೆ ಹೇಳಿದಾಗ ಈಶ್ವರನ ಹೆಸರಿನಲ್ಲಿ ಕಾಕಾಸುರನನ್ನು ಸಂಹರಿಸುವನು. ಆ ಸಂತಸದ ಪ್ರತೀಕವಾಗಿ ಕರಿಯ ಮೊದಲ ದಿನ ಆಚರಿಸುವರು.

**ಮಣ್ಣೆತ್ತಿನ ಅಮಾವಾಸ್ಯೆ:** ಕಾರ ಹುಣ್ಣಿಮೆಯಂದು ಜೀವಂತ ಎತ್ತಿನ ಪೂಜೆಯಾದರೆ, ಈ ದಿನದಂದು ಮಣ್ಣಿನಿಂದ ತಯಾರಿಸಿದ ವೃಷಭದ ಪೂಜೆಯಾಗುತ್ತದೆ. ಇದು ಸೃಷ್ಟಿ ಜೀವನದ ಹಬ್ಬ ಇದಕ್ಕೆ ಬಸವನ ಅಮಾವಾಸ್ಯೆಯೆಂಬ ಇನ್ನೊಂದು ಹೆಸರು ಇದೆ. ಸಗರನಾಡಿನ ಪ್ರಮುಖ ಹಬ್ಬಗಳಲ್ಲಿ ಇದು ಒಂದು. ರೈತರು ಮಣ್ಣಿನ ಎತ್ತುಗಳನ್ನು ಮಾಡಿ ಹೋಳಿಗೆ ಕಡುಬು ಮಾಡಿ ನೈವೇದ್ಯ ಮಾಡಿ ಪೂಜೆಯನ್ನು ಸಲ್ಲಿಸುತ್ತಾರೆ.

**ನಾಗರ ಪಂಚಮಿ ಹಬ್ಬ:** ಶ್ರಾವಣ ಶುಕ್ಲ ಪಂಚಮಿಗೆ ನಾಗರ ಪಂಚಮಿ ಎಂದು ಕರೆಯುವರು. ನಾಗ ಪೂಜೆಯೇ ನಾಗರ ಪಂಚಮಿಯ ವೈಶಿಷ್ಟ್ಯ. ದ್ರಾವಿಡರು ನಾಗಪ್ಪನನ್ನು ಅಗ್ರ ದೇವನನ್ನಾಗಿ ಬರೆಯುತ್ತಾರೆ. ಸಗರನಾಡಿನ ಹನುಮಾನ ದೇವಸ್ಥಾನಗಳಲ್ಲಿ ಇನ್ನಿತರ ದೇವಾನು ದೇವತೆಗಳ ದೇವಸ್ಥಾನಗಳಲ್ಲಿ ಈ ನಾಗಮೂರ್ತಿಗಳನ್ನು ಕಾಣಬಹುದು. ಈ ನಾಡಿನಲ್ಲಿ ನಾಗ ಮೂರ್ತಿಗಳಿಗೆ ಹಾಲು ಹಾಕಿ ಹಬ್ಬವನ್ನು ಆಚರಣೆ ಮಾಡುತ್ತಾರೆ. ವಿಶೇಷವಾಗಿ ಇದು ಹೆಣ್ಣು ಮಕ್ಕಳ ಹಬ್ಬ. ಶಿವನಿಗೆ ಆಭರಣವಾಗಿ, ವಿಷ್ಣುವಿಗೆ ಹಾಸಿಗೆಯಾಗಿ, ವಿಘ್ನೇಷ್ವರನ ಒಡಲಿಗೆ ಕಟ್ಟಾಗಿ ಒಕ್ಕಲಿಗನ ಆಪ್ತಮಿತ್ರನಿಗೆ ಸೇವೆ ಸಲ್ಲಿಸುತ್ತಿರುವ ನಾಗನ ನಿಷ್ಠೆ ಅನುಪಮವಾದದ್ದು. ಹಾವು ಹೊಲದಲ್ಲಿ ಇಲಿ ತಿಂದು ಬೆಳೆ ರಕ್ಷಿಸುವುದರಿಂದ ಇದಕ್ಕೆ ಕ್ಷೇತ್ರ ಪಾಲಕ ಎಂದು ಹೆಸರು. ನಾಗನ ಕುರಿತು ಜಾನಪದ ಗೀತೆಗಳಲ್ಲಿ ಒಂದು ಪದ್ಯ ಹೀಗಿದೆ.

'ನಾಗಪ್ಪಗ್ಹಾಲ ಹೊಯ್ಯೋಣ
ನಾಗರ ಹೆಡಿಯ್ಹಾಂಗ್ ಆಡೋಣ
ನಾಗರ ಪಂಚಮಿ ನಾಡ ಹೆಣ್ಣಿಗೆ ಹಬ್ಬ

ನಾಗಪ್ಪಗ್ಹಾಲ ಎರಿಯೋಣ ನನಗೆಳತಿ

ನಾಗರ ಹೆಡಿಯ್ಹಾಂಗ ಆಡೋಣ'[೫]

(ಮೂಲ ಆಧಾರ: ಜನಪದ ಗೀತೆ ಹಿಂದೂ ಹಬ್ಬ ಹರಿದಿನಗಳು ಪುಸ್ತಕ ವಿವೇಕ ಪ್ರಕಾಶನ ಡಿವೈನ್ ಪಾರ್ಕ್ ಟ್ರಸ್ಟ್ (ರಿ))

ಎಂದು ನಲಿದಾಡಿ ತಮ್ಮ ಎಲ್ಲ ನೋವುಗಳನ್ನು ಮರೆತು ಅಂದು ಹೆಂಗಳೆಯರು ಹುರುಪಿನಿಂದ ಇದ್ದು ಮುಂದಿನ ನಾಗರ ಪಂಚಮಿಗೆ ಕೂಡೋಣ ಎಂದು ಹಾರೈಸುವರು. ಬೆಳೆ ರಕ್ಷಣೆ ಮಾಡುವುದರಿಂದ ಪ್ರತಿಯಾಗಿ ಕೃತಜ್ಞತೆಯನ್ನು ಸಲ್ಲಿಸಲು ಪ್ರೇಮಪೂರಿತವಾಗಿ ಹಾಲನ್ನು ಎರೆಯುತ್ತಾರೆ. ಇದು ಭಾರತೀಯ ಹಿಂದು ಧರ್ಮದ ಸಂಸ್ಕೃತಿಯ ವಿಶ್ವ ವ್ಯಾಪಕವಾದ ದೃಷ್ಟಿಕೋನವನ್ನು ತೋರಿಸುತ್ತದೆ.

**ಗಣೇಶ ಚತುರ್ಥಿ**: 'ಭಾದ್ರಪದ ಮಾಸದಲ್ಲಿ ಬರುವ ಈ ಹಬ್ಬ ಭಾರತೀಯರೆಲ್ಲರೂ ಆಚರಿಸುವ ಹಬ್ಬವಾಗಿದೆ. ನಮ್ಮ ದೇಶದಲ್ಲಿ ಪ್ರಥಮ ಪೂಜೆ ಶ್ರೀ ಗಣೇಶನಿಗೆ ಸಲ್ಲುತ್ತದೆ. ಭಾರತೀಯರ ಹೃದಯದಲ್ಲಿ ಸಾವಿರಾರು ವರ್ಷಗಳಿಂದ ಚಿರಸ್ಥಾಯಿಯಾಗಿ ಅಗ್ರ ಪೂಜೆ ಹೊಂದಿದವನಾತ. ರುದ್ರಭಯಂಕರನಾಗಿ ಸರಳ ಸ್ವಭಾವದವನಾಗಿ ಹೊಟ್ಟೆಬಾಕನಾಗಿ ಮಹಾಸೇನಾನಿಯಾಗಿ ಪ್ರಜಾಪ್ರಭುತ್ವದ ಹಿರಿಯ ಸಂಕೇತವುಳ್ಳವನಾಗಿ ನಾಟ್ಯಾಚಾರ್ಯನಾಗಿ ಸಿದ್ಧಿಗಳನ್ನು ವಶಪಡಿಸಿಕೊಂಡವನಾಗಿ, ವಿಘ್ನನಿವಾರಕನಾಗಿ, ಗಣನಾಯಕನಾಗಿ ಶ್ರೀ ಗಣೇಶನು ಭಕ್ತರಿಗೆ ನಾನಾ ರೂಪದಲ್ಲಿ ಕಾಣಿಸಿಕೊಂಡಿದ್ದಾನೆ.'[೬]

'ಯಸ್ಮಾದೋಂಕಾರ ಸಂಭೂತಿರ್ಯತೋ

ವೇದಾಯತೋ ಜಗತ

ಯೇವ ಸರ್ವಮಿದಂ ವ್ಯಾಪ್ತಂ ತಂ

ವಿದ್ಧಿ ಗಣನಾಯಕಮ್'[೭]

ಯಾವನಿಂದ ಓಂಕಾರ ಸಂಭವಿಸಿತೋ ಯಾರಿಂದ ವೇದಗಳು ಜನಿಸಿದವೋ ಯಾರಿಂದ ಆ ಜಗತ್ತು ವ್ಯಾಪಿಸಿದೆಯೋ ಅವನನ್ನು ಗಣಗಳ ನಾಯಕನೆಂಬ ಅರ್ಥವನ್ನು ಕೊಡುತ್ತದೆ. ಭಾರತದಾದ್ಯಂತ ಜೊತೆಗೆ ಸಗರನಾಡಿನಲ್ಲಿಯೂ ಎಲ್ಲ ಜಾತಿ ಜನಾಂಗದವರ ಜೊತೆಗೆ ಬೇಡರು ಕೂಡ ಗಣೇಶ ಚತುರ್ಥಿ ಹಬ್ಬವನ್ನು ಮಾಡುತ್ತಾರೆ. ವಾಲ್ಮೀಕಿ ಸಂಘಟನೆಗಳು ಅಥವಾ ಬೇಡ ಸಮುದಾಯದ ಸಂಘಟನೆಗಳು ಈ ದಿನದಂದು ತಮ್ಮ ನೇತೃತ್ವದಲ್ಲಿ ಗಣೇಶ ಮೂರ್ತಿಗಳನ್ನು ಕೂಡಿಸುತ್ತಾರೆ. ಕೆಲವರು ೧೧ ದಿನ ಇನ್ನು ಕೆಲವರು ೫ ದಿನ ಗಣೇಶನನ್ನು ಕೂಡಿಸಿ ನದಿ ಅಥವಾ ಬಾವಿಗಳಲ್ಲಿ ವಿಸರ್ಜನೆ

ಮಾಡುತ್ತಾರೆ. ಅಲ್ಲದೇ ಕೆಲವು ಬೇಡರ ಮನೆಗಳಲ್ಲಿ ಗಣೇಶ ಮೂರ್ತಿಗಳ ಪ್ರತಿಷ್ಠಾಪನೆ ಮಾಡಿ ನೈವೇದ್ಯ ಮಾಡಿ ಪೂಜೆಯನ್ನು ಮಾಡುತ್ತಾರೆ.

**ನವರಾತ್ರಿ ಮತ್ತು ವಿಜಯದಶಮಿ:**

'ಆಶ್ವಯುಜ ಮಾಸದ ಶುಕ್ಲ ಪಕ್ಷದ ಪಾಡ್ಯದಿಂದ ದಶಮಿಯವರೆಗೆ ನಾಡಿನಲ್ಲೆಲ್ಲಾ ನವರಾತ್ರೋತ್ಸವವನ್ನು ವಿಜೃಂಭಣೆಯಿಂದ ಆಚರಿಸಲ್ಪಡುತ್ತದೆ. ಸ್ವಾತಂತ್ರ ಪೂರ್ವದಲ್ಲಿ ರಾಜರುಗಳು ಮಹಾ ಮಾಂಡಲೀಕರು ಮತ್ತು ಸಂಸ್ಥಾನಿಕರು ಈ ಹಬ್ಬವನ್ನು ವೈಭವದಿಂದ ಆಚರಿಸುತ್ತಿದ್ದರು. ಅದೇ ರೀತಿಯಾಗಿ ಸಗರನಾಡಿನ ಬೇಡರಾಜರುಗಳು ಸಹ ನವರಾತ್ರಿ ವಿಜಯದಶಮಿ ಹಬ್ಬವನ್ನು ಸಡಗರದಿಂದ ಆಚರಿಸುತ್ತಾರೆ. ಅಸತ್ಯದ ಮೇಲೆ ಸತ್ಯದ ಜಯ, ಅಧರ್ಮದ ಮೇಲೆ ಧರ್ಮದ ಜಯವೇ ಈ ಹಬ್ಬದ ಮೂಲ ಗುರಿಯಾಗಿದೆ.'[೮] ಈ ಹಬ್ಬವು ಪ್ರಕೃತಿ ಮಾತೆಯ ಪೂಜೆಯಾಗಿರುವುದರಿಂದ ಕೃಷಿ ಪ್ರಧಾನವಾದ ಈ ಸಗರ ನಾಡಿನಲ್ಲಿ ಈ ಹಬ್ಬಕ್ಕೆ ಪ್ರಾಮುಖ್ಯತೆಯಿದೆ.

ಕೃಷಿಗೆ ಶರದ್ ಋತುವಿನಲ್ಲೂ, ವಸಂತ ಋತುವಿನಲ್ಲೂ ಹಲವಾರು ಸೊಂಕುರೋಗಗಳು ತಗಲುವದುಂಟು. ಇದನ್ನು ಹೋಗಲಾಡಿಸುವುದಕ್ಕಾಗಿ ಮಾತೃಸ್ವರೂಪಿಯಾದ ಪ್ರಕೃತಿ ದೇವಿಯ ಪೂಜೆಯನ್ನು ಮಾಡುವುದೇ ಮುಖ್ಯ ಉದ್ದೇಶವಿರಬಹುದು. ಸಗರ ನಾಡಿನ ಸಂಪ್ರದಾಯಸ್ಥ ಬೇಡರ ಮನೆಗಳಲ್ಲಿ ೯ ದಿವಸಗಳ ಕಾಲ ನಂದಾದೀಪವನ್ನು ಇರಿಸಿ ದೇವಿಯನ್ನು ಆರಾಧಿಸುತ್ತಾರೆ. ಆದ್ದರಿಂದ ಈ ಹಬ್ಬಕ್ಕೆ ನವರಾತ್ರಿ ಎಂದು ಹೆಸರು ಬಂದಿದೆ. ದುರ್ಗೆಯು ಮಹಿಶಾಸುರನನ್ನು ಸಂಹರಿಸುತ್ತಾಳೆ. ಮತ್ತು ರಾಮನು ಇಂದೇ ರಾವಣನನ್ನು ಸಂಹರಿಸಿ ವಿಜಯ ದಶಮಿಯಂದು ವಿಜಯಿಯಾದ ದಿನ. ಮಹಾಭಾರತದಲ್ಲಿ ಶಮೀವೃಕ್ಷದ (ಬನ್ನಿ ಮರ) ಪೂಜೆ ವಿಜಯದಶಮಿಯ ದಿನ ಸೀಮೋಲ್ಲಂಘನದಲ್ಲಿ ಶಮೀ ಪೂಜೆ ರಾಮನು ಶಮೀಯನ್ನು ಪೂಜಿಸಿದ್ದು ಪಾಂಡವರು ಅಜ್ಞಾತವಾಸ ಮುಗಿಸಿ ಶಮೀ ಗಿಡದಲ್ಲಿ ಅಡಗಿಸಿಟ್ಟ ಸಶ್ತ್ರಾಸ್ತ್ರಗಳನ್ನು ಪೂಜಿಸಿ ಲೋಕಕ್ಕೆ ನಿಜರೂಪ ತೋರಿಸಿದ ದಿನವಾಗಿದೆ. ಅಂದು ಸಂತೋಷದ ಸಂಕೇತವಾಗಿ ಬಂಗಾರವನ್ನು ಪಾಂಡವರು ಹಂಚಿರಬೇಕು. ಇಂದು ಸಹ ಸಗರನಾಡಿನಲ್ಲಿ ಅಂದೇ ದೇಶಾದ್ಯಂತ ಹಿಂದುಗಳು ಸಹ ಬಂಗಾರದ ಭಾವನೆಯಲ್ಲಿ ಬನ್ನಿಯನ್ನು ಆಪ್ತರಿಷ್ಟರಿಗೆ ಕೊಟ್ಟು ನಮಿಸುತ್ತಾರೆ.

**ದೀಪಾವಳಿ ಹಬ್ಬ:**

ಮನೆ ಮನೆಗಳನ್ನು ದೀಪಗಳ ಸಾಲು ಬೆಳಗುತ್ತಿರುವುದರಿಂದ ದೀಪಾವಳಿ ಹಬ್ಬವೆನಿಸಿದೆ. ಇದಕ್ಕೆ ಉತ್ತರ ಕರ್ನಾಟಕ ಹೈದ್ರಾಬಾದ ಕರ್ನಾಟಕದಲ್ಲಿ ಹಟ್ಟಿ ಹಬ್ಬವೆಂದು ಹೆಸರು. ಹಟ್ಟಿ ದನದ ಕೊಟ್ಟಿಗೆ ಅಲ್ಲಿರುವ ಎಲ್ಲಾ ವಸ್ತುಗಳನ್ನು ಪೂಜಿಸುವುದು ಸಂಪ್ರದಾಯ. ಪಾಂಡವರು ತಮ್ಮ ಒಂದು ವರ್ಷದ ಅಜ್ಞಾತವಾಸ ಮುಗಿಸಿ ಕೌರವರಿಂದ ಒಯ್ಯಲ್ಪಟ್ಟ ಗೋವುಗಳನ್ನು

ಗೆದ್ದು ಅಂದೇ ಎಲ್ಲರೂ ವಿರಾಟ ರಾಜನಲ್ಲಿ ಕಾಣಿಸಿಕೊಂಡು ಐಕ್ಯತೆಯ ಸಂಕೇತಕ್ಕಾಗಿ ಪಾಂಡವರು ಎಂದು ಸಗಣಿಯನ್ನು ಇಟ್ಟು ಪೂಜಿಸುವರು.

'ದೀಪಾವಳಿ ಬಹು ಪುರಾತನದ ಹಬ್ಬ ಶಾಸನಗಳಲ್ಲಿ ಇದರ ಉಲ್ಲೇಖ ದೊರೆಯುತ್ತದೆ. ನರಕಾಸುರನ ಸಂಹಾರೋತ್ಸವ ಬಲೀಂದ್ರ ಪೂಜೆ, ಗೋಪೂಜೆಗಳು ಇಲ್ಲಿ ಮುಖ್ಯವಾದವುಗಳು. ಬಲಿ ಚಕ್ರವರ್ತಿ ಭಾಗವತ ಪ್ರಸಿದ್ಧವಾದ ಮಹಾ ಭಕ್ತನಲ್ಲದೇ ದಾನಶೀಲ. ಅಂತಹ ಭಕ್ತನ ಸ್ಮರಣೆ ಮತು ಭಾರತೀಯರಿಗೆ ಪೂಜ್ಯವಾದ ಗೋವಿನ ಅರ್ಚನೆ ದೀಪಾವಳಿಯಲ್ಲಿ ಆಗುತ್ತದೆ.'[೯] ಸಗರನಾಡಿನಲ್ಲಿ ಈ ಹಬ್ಬವನ್ನು ಬೇಡರು ೩ ದಿನ ವಿಜೃಂಭಣೆಯಿಂದ ಆಚರಿಸುತ್ತಾರೆ. ಪ್ರಥಮ ದಿನ ನರಕ ಚತುರ್ದಶಿ ಅಂದು ನರಕಾಸುರನ ವಧೆಯಾಗಿರುವುದರಿಂದ ಹರಿಭಕ್ತರಿಗೆ ಹಬ್ಬವೆನಿಸಿದೆ. ಅಂದು ಮನೆಯಲ್ಲಿ ಮುತ್ತೈದೆಯರು ಗಂಡಸರಿಗೆ ಮಂಗಳಾರತಿಯನ್ನು ಮಾಡುತ್ತಾರೆ. ಅಮಾವಾಸ್ಯೆ ಇದು ಎರಡನೇ ದಿನದ ಆಚರಣೆ. ಬೇಡ ವ್ಯಾಪಾರಸ್ಥರು ಅಂದು ಲಕ್ಷ್ಮೀ, ಸರಸ್ವತಿ ಪೂಜೆ ಮಾಡುತ್ತಾರೆ. ದೀಪಾವಳಿ ವ್ಯಾಪಾರಸ್ಥರ ವ್ಯವಹಾರಕ್ಕೆ ಶುಭದಿನ. ಕಾರ್ತೀಕ ಶುದ್ಧ ಪ್ರತಿಪದೆ ಇದು ಮೂರನೇ ದಿನ. ಈ ದಿವಸ ವಾಮನಾವತಾರದಿಂದ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ಮೆಟ್ಟಿದ ದಿನವಾಗಿದೆ. ಬಲಿಯ ನೆನಪಿಗಾಗಿ ಹಿಟ್ಟಿನ ಇಲ್ಲವೆ ಸಗಣಿ ಮೂರ್ತಿ ಮಾಡಿ ಪೂಜೆ ಮಾಡುವರು. ಭಾರತಾದ್ಯಂತ ಹಬ್ಬ ಎಲ್ಲರಿಗೂ ಒಂದೇಯಾದರೂ ಆಚರಿಸುವ ಕ್ರಮ ಬೇರೆ ಬೇರೆಯಾಗಿದೆ.

**ಎಳ್ಳ ಅಮಾವಾಸ್ಯೆ:** ಮಾರ್ಗಶೀರ್ಷ ಮಾಸದ ೩೦ನೇ ತಿಥಿಯೇ ಎಳ್ಳ ಅಮಾವಾಸ್ಯೆ ಮುಂಗಾರು ಬೆಳೆಯ ನಾಡಿನಲ್ಲಿ ಸೀಗೆ ಹುಣ್ಣಿಮೆಯು ಒಕ್ಕಲಿಗರ ವಿಶಿಷ್ಟ ಹಬ್ಬವಾಗಿರುವಂತೆ ಹಿಂಗಾರು ಬೆಳೆಯ ಪ್ರದೇಶದಲ್ಲಿ ಎಳ್ಳು ಅಮಾವಾಸ್ಯೆ ಕೃಷಿಕರ ಮಹತ್ವದ ಹಬ್ಬವಾಗಿದೆ. ಸಗರ ನಾಡಿನ ಬೇಡ ರೈತರು ಈ ಹಬ್ಬವನ್ನು ವಿಶೇಷವಾಗಿ ಆಚರಣೆ ಮಾಡುತ್ತಾರೆ. ಎಳ್ಳು ಹೋಳಿಗೆ ಕರೆಗಡಬು ಇನ್ನಿತರ ಸಿಹಿ ಅಡುಗೆ ಪದಾರ್ಥಗಳನ್ನು ಮಾಡಿ ಭೂಮಿ ಪೂಜೆ ಮಾಡಿ ಬೆಳೆದು ನಿಂತಿರುವ ಬೆಳೆಗಳಿಗೆ ಆಹಾರಧಾನ್ಯಗಳನ್ನು ಸಿಂಪಡಿಸುತ್ತಾರೆ. ಹುಲ್ಲುಹುಲ್ಲಿಗೋ ಸುರಾಂಬಳಿಗೋ ಅನ್ನುವ ರೈತನ ನುಡಿಯು ಪ್ರತಿ ಹುಲ್ಲಿಗೆ ಕಾಳು ಸೂರೆಯಾಗಲಿ ಅನ್ನುವುದು ಸೃಷ್ಟಿದೇವಿ ಅಂದು ಮೈತುಂಬಿ ಭೂಮಿಯಲ್ಲಿ ಹಸಿರಾಗಿ ನಗು ನಗುತ್ತಾ ನಿಂತಿರುವ ದೃಶ್ಯ ನಿಜವಾಗಲೂ ರಮಣೀಯವಾದುದು.

**ಮಕರ ಸಂಕ್ರಮಣ:** ಜನವರಿ ೧೪ನ್ನು ಪ್ರತಿವರ್ಷದ ಸಂಕ್ರಮಣದ ದಿನವೆನ್ನಬಹುದು. ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಹೋಗುವುದಕ್ಕೆ ಸಂಕ್ರಾಂತಿ ಎಂದು ಹೆಸರು. ರವಿಯು ಮಕರ ವೃತ್ತದಿಂದ ಕರ್ಕಾಟಕ ವೃತ್ತದ ಕಡೆಗೆ ಚಲಿಸಲು ಆರಂಭಿಸುತ್ತಾನೆ. ಅಂದು ಸೂರ್ಯನಿಗೆ ಹೆಚ್ಚಿನ ಪ್ರಾಧಾನ್ಯತೆ ಎರಡನೇಯ ಪೂಜೆ ವಾಯುವಿಗೆ ವಾಯು ವರ್ಷಕಾಲದ ಸಂಕೇತ ಮೂರನೇಯದು ಗ್ರಹದೇವತಾ ಪೂಜೆ

ಇದರಿಂದ ಸರ್ವರಿಗೂ ಸುಖ ಜೀವನ ಬರಲೆಂದು ಆಶಿಸಲಾಗುವುದು. ಸಂಕ್ರಾಂತಿಯ ಮರುದಿನ ಗೋವುಗಳ ಪೂಜೆ ಮಾಡುತ್ತಾರೆ. ಇದು ಹಿಂದುಗಳೆಲ್ಲರೂ ಮಾಡುವ ಮಹತ್ವದ ಕಾರ್ಯ ಹಾಗೆಯೇ ಸಗರನಾಡಿನ ಬೇಡರಲ್ಲಿಯು ಈ ಪದ್ಧತಿ ಇನ್ನೂ ಉಳಿದುಕೊಂಡು ಬಂದಿದೆ.

ಆ ಮಕರ ಸಂಕ್ರಾಂತಿಯಂದು ಸಗರನಾಡಿನ ಬೇಡರು ಎಲ್ಲಾ ಜಾತಿ ಜನಾಂಗದವರ ಜೊತೆಗೂಡಿ ಕೃಷ್ಣ ನದಿ ಅಥವಾ ಭೀಮಾನದಿಗೆ ಹೋಗಿ ಸ್ನಾನ ಮಾಡಿ ಸಿಹಿ ಊಟ ಉಂಡು ಆನಂದದಿಂದ ಇರುತ್ತಾರೆ. ಅಂದು ಎಳ್ಳುಬೆಲ್ಲವನ್ನು ಪರಸ್ಪರ ಕೊಟ್ಟು ತೆಗೆದುಕೊಂಡು ಜೀವನದಲ್ಲಿಯ ಸುಖ ದುಃಖಗಳಿಗೆ ಎಲ್ಲರೂ ಸಮಭಾಗಿಗಳು ಎನ್ನುವುದನ್ನು ತೋರಿಸುತ್ತದೆ.

**ಮಹಾಶಿವರಾತ್ರಿ:** 'ಮಾಘ ಬಹುಳ ೧೪ನೇ ತಿಥಿಯೇ ಮಹಾಶಿವರಾತ್ರಿ. ಶಿವನಿಗೆ ಇಂದು ವಿಶೇಷ ಭಕ್ತಿ ಸಲ್ಲಿಸುವುದೇ ಈ ಹಬ್ಬದ ವೈಶಿಷ್ಟ್ಯ.'[೧೦] ಎಲ್ಲಾ ಜಾತಿ ಜನಾಂಗದವರು ಮತ್ತು ಬಾಲಕ ತರುಣ ಹಾಗೂ ವೃದ್ಧರು ಎಲ್ಲರೂ ಈ ವ್ರತವನ್ನು ಮಾಡಲು ಅರ್ಹರಾಗಿರುತ್ತಾರೆ. ಶಿವನಿಗೆ ಕಣ್ಣು ಕೊಟ್ಟ ಏಕೈಕ ಮಹಾಭಕ್ತ ಬೇಡರ ಕಣ್ಣಪ್ಪ ಎಂದು ಹೇಳಬಹುದು. ಆದ್ದರಿಂದ ಸಗರನಾಡಿನ ಬೇಡರು ಶಿವನನ್ನು ಭಯ ಭಕ್ತಿಯಿಂದ ಆರಾಧನೆ ಮಾಡುತ್ತಾರೆ. ಈ ದಿನ ಅಭಿಷೇಕ, ಅರ್ಚನೆ, ಉಪವಾಸ, ಜಾಗರಣೆಗಳು ನಡೆಯುತ್ತವೆ. ಶಿವ ಪುರಾಣದ ಪ್ರಕಾರ ಶಿವರಾತ್ರಿಯಂದು ಯಾರು ಪೂರ್ತಿ ರಾತ್ರಿ ಶಿವನಾಮ ಜಪಿಸುತ್ತ ಎಚ್ಚರದಿಂದಿರುವರೋ ಅವರಿಗೆ ಮುಕ್ತಿ ಸಿಕ್ಕೇ ಸಿಗುತ್ತದೆ ಎಂದು ಉಲ್ಲೇಖವಿದೆ.

**ಹೋಳಿ ಹುಣ್ಣಿಮೆ:**

ಫಾಲ್ಗುಣ ಶುದ್ಧ ೧೫ನೇ ತಿಥಿಯೇ ಕಾಮನ ಹುಣ್ಣಿಮೆ

ಆನೆಗಂಬಿರಿ ಚಂದ ಕುರುರಿಗೆ ಥಡಿ ಚಂದ

ಸದರೀಗೆ ಚಂದ ಕಾಮಣ್ಣ ಬಗಲಿಗೆ

ರೂಪಕ ಚಂದ ರತಿದೇವಿ (ಆಧಾರ ಜನಪದ ನುಡಿ)

ರೂಪದಲ್ಲಿ ಕಾಮಣ್ಣನು ಶ್ರೇಷ್ಠನೆಂದು ಪಾರ್ವತಿಯೇ ಹೇಳಿದ್ದಾಳೆ. ಕೋಗಿಲೆಯ ಕೂಗು ವಸಂತದ ಆಗಮನ ಪುಷ್ಪದ ಅರಳುವಿಕೆ ಇವೆಲ್ಲವೂ ಫಾಲ್ಗುಣ ಮಾಸದ ಪ್ರಕೃತಿಯಲ್ಲಿ ಬದಲಾವಣೆಯಾಗುತ್ತದೆ ಅಲ್ಲದೆ ಮನುಷ್ಯನೂ ಸಹ ಬದಲಾವಣೆಯಾಗುತ್ತಾನೆ. ಶ್ರೀ ಕೃಷ್ಣ ರಾಧೆಯರು ಬಣ್ಣದ ಓಕಲಿ ಆಡುತ್ತಿದ್ದರು ಎಂಬ ಉಲ್ಲೇಖ ಭಾಗವತದಲ್ಲಿ ಅಲ್ಲಲ್ಲಿ ಬಂದಿದೆ. ಹೋಳಿ ಹುಣ್ಣಿಮೆಯ ದಿನ ಹಿಂದುಗಳು ಇಡೀ ವಿಶ್ವದಾದ್ಯಂತ ರಂಗಿನಾಟ ಆಡುತ್ತಾರೆ. ಹಾಗೆಯೇ ಸಗರನಾಡಿನಲ್ಲಿ ರಂಗಿನಾಟವನ್ನು ಆಡಿ ನಲಿಯುತ್ತಾರೆ. ಹಬ್ಬದ ದಿನ ಬಡವ ಬಲ್ಲಿದ ಉಚ್ಚ ನೀಚ ಭೇದ ಭಾವವಿಲ್ಲದೇ ಸ್ವಚ್ಛಂದತೆಯಿಂದ

ರಂಗೋತ್ಸವವನ್ನು ಮಾಡುತ್ತಾರೆ. ರಂಗೋತ್ಸವವು ವಿಶೇಷವೆಂದು ಹೇಳಬಹುದು. ಆದರೆ ಇಂದು ಸ್ವಾತಂತ್ರ್ಯದಿಂದ ಅಶ್ಲೀಲ ಗೀತೆಗಳನ್ನು ಉಪಯೋಗಿಸಿ ನಿರ್ಲಜ್ಯತೆಯ ಸೀಮೆಯನ್ನು ದಾಟುವುದು ಅಸಂಸ್ಕೃತಿಯ ಅಸಭ್ಯತೆಯ ದ್ಯೋತಕವಾಗಿದೆ. ಈ ದಿನ ಮನ್ಮಥನನ್ನು ಶಿವನು ದಹಿಸಿದನಂತೆ ಕಾಮವೇ ಮನುಷ್ಯನ ಸರ್ವ ದುರಾಚಾರಗಳಿಗೂ ಸಕಲ ದೋಷಗಳಿಗೂ ಮೂಲ. ಕಾಮವೆಂದರೆ ಆಸೆ ಎಂದು ಶ್ರೀಕೃಷ್ಣ ಗೀತೆಯಲ್ಲಿ ಹೇಳಿದ್ದಾನೆ.

**ಕಾಮನನ್ನು ಸುಡುವುದು:**

ಬಣ್ಣದಾಟದ ಜೊತೆಗೆ ಬೇಡ ಯುವಕರು ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ಕಟ್ಟಿಗೆ ಕುಳ್ಳುಗಳನ್ನು ಸಂಗ್ರಹಿಸಿ ರಾತ್ರಿ ಕಾಮದಹನವನ್ನು ಮಾಡುವುದರ ಜೊತೆಗೆ ಹೋಳಿ ಹಾಡುಗಳನ್ನು ಹಾಡಿ ಜೋರಾಗಿ ಬಾಯಿಯನ್ನು ಬಡಿದುಕೊಳ್ಳುತ್ತಾರೆ. ಈ ಪ್ರಸಂಗವನ್ನು ನೋಡಲು ಮನರಂಜನೆ ಸಿಗುತ್ತದೆ. ಕಾಮನನ್ನು ಸುಡುವುದಕ್ಕೆ ಒಂದು ಪೌರಾಣಿಕ ಹಿನ್ನಲೆಯಿದೆ.

**ಗೋಕುಲಾಷ್ಟಮಿ:** 'ಶ್ರೀಕೃಷ್ಣನ ಜನ್ಮ ದಿನವನ್ನು ಕೃಷ್ಣಾಷ್ಟಮಿ, ಗೋಕುಲಾಷ್ಟಮಿ ಎಂದು ಕರೆಯಲಾಗುವುದು. ಶ್ರಾವಣ ಮಾಸದ ಕೃಷ್ಣ ಪಕ್ಷದ ಎಂಟನೇ ದಿನವೇ ಕೃಷ್ಣ ಜನ್ಮಾಷ್ಟಮಿಯೆಂದು ದ್ವಾಪರಯುಗದಲ್ಲಿ ವಿಷ್ಣುವಿನ ಅವತಾರವೇ ಈ ಕೃಷ್ಣ ಹುಟ್ಟಿದ ದಿನವನ್ನು ಭಾರತಾದ್ಯಂತ ಜನರು ವಿಜೃಂಭಣೆಯೊಂದಿಗೆ ಆಚರಿಸುತ್ತಾರೆ. ವೇದಗಳಲ್ಲಿ ಉದ್ಭವನಾದ ಮತ್ಸ್ಯಾವತಾರಿ ಜಗತ್ತನ್ನೇ ಹೊತ್ತು ಕೂರ್ಮಾವತಾರ ಭೂಮಿಯನ್ನು ರಕ್ಷಿಸಿದ ವರಹಾ ಅವತಾರಿ, ಹಿರಣ್ಯಕಶಿಪುವಿನ ಸಂಹಾರಿ ನರಸಿಂಹಾವತಾರಿ ಬಲಿಯನ್ನು ಪಾತಾಳಕ್ಕೆ ತುಳಿದ ವಾಮನಾವತಾರಿ ಕ್ಷತ್ರಿಯರನ್ನು ಸಂಹರಿಸಿದ ಪರಶುರಾಮಾವತಾರಿ, ರಾವಣನನ್ನು ಸಂಹರಿಸಿದ ರಾಮಾವತಾರಿ ಕಂಸನ ಸಂಹಾರ ಮಾಡಿದ ಕೃಷ್ಣವತಾರಿ, ಕಲ್ಯಾಣಮೂರ್ತಿಯಾದ ಬೌದ್ಧವತಾರಿ ಮ್ಲೇಚ್ಛರನ್ನು ಬಡಿದೆಬ್ಬಿಸಿದ ಕಲ್ಕಿ ಅವತಾರಿ ಇವೆಲ್ಲಾ ಕೃಷ್ಣನಿಗೆ ಕರೆಯಲ್ಪಡುವ ಹಲವಾರು ಹೆಸರುಗಳಲ್ಲಿ ಶ್ರೀ ಕೃಷ್ಣವೆಂದೆ ಜಗದ್ಗುರು ಸರ್ವಕಾಲಿಕ ಎಂಬುದನು ಎತ್ತಿ ತೋರಿಸುತ್ತದೆ.'[೧೧] ಸಗರನಾಡಿನ ಅತ್ಯಂತ ಸಂತೋಷ ಸಂಭ್ರಮ ಹಬ್ಬವೆಂದರೆ ಗೋಕುಲಾಷ್ಟಮಿ ಆಗಿದೆ. ಇಡೀ ಸಗರನಾಡಿನ ಬೇಡರು ಮತ್ತು ಇತರ ಜಾತಿಯವರು ಉಪವಾಸ ಮಾಡಿ ಭಕ್ತಿ ಪೂರ್ವಕವಾಗಿ ಆಚರಿಸುವ ಹಬ್ಬವಾಗಿದೆ. ಕೃಷ್ಣ ಪರಮಾತ್ಮನ ಜನ್ಮ ದಿನ ಸುರಪುರ ದರ್ಬಾರಿನೊಳಗೆ ಚಿಕ್ಕದಾದ ಬಿದಿರು ಕಡ್ಡಿಯ ಚಪ್ಪರ ಅದಕ್ಕೆ ದಾರದಿಂದ ಮಾಡುವ ಪುಟ್ಟ ಅಲಂಕೃತ ತೊಟ್ಟಿಲು ನಿರ್ಮಿಸಿ ಅದರೊಳಗೆ ಕೃಷ್ಣನ ಮೂರ್ತಿಯನ್ನು ತೂಗಿ ಕೃಷ್ಣ ಜನ್ಮ ಪುರಾಣವನ್ನು ಹೇಳಲಾಗುವುದು. ಈ ಪುರಾಣ ಮುಗಿಯುವ ಹೊತ್ತಿಗೆ ಗೋಪಾಲಸ್ವಾಮಿ ಗುಡಿಯಿಂದ ತೀರ್ಥ ಪ್ರಸಾದ ಬರುತ್ತದೆ. ದರಬಾರಿನಲ್ಲಿ ಸೇರಿದ ಜನರಿಗೆ ತೀರ್ಥವನ್ನು ಹಂಚಿದ ತಿರುಪತಿಗೆ ಹುಂಡಿ (ಕಾಣಿಕೆ)

ಕಟ್ಟಲಾಗುವುದು. ಇದನ್ನು ರಾಜವೇಷದಲ್ಲಿ ಅರಸನು ತನ್ನ ತಲೆಯ ಮೇಲೆ ಇಟ್ಟುಕೊಂಡು ದರ್ಬಾರಿನಲ್ಲಿ ಹೊರಬಾಗಿಲನಬರೆಗೂ ಬರುತ್ತಾರೆ. ಅಲ್ಲಿ ಅವರ ತಲೆಯ ಮೇಲಿನ ಹುಂಡಿ ಗಂಟನ್ನು ದೂತರಾದ ದರ್ಬಾರಿನ ಪುರೋಹಿತರು ತೆಗೆದುಕೊಂಡು ತಿರುಪತಿಗೆ ಹೋಗಿ ನೀಡುವ ಸಂಪ್ರದಾಯ ದರ್ಬಾರದಲ್ಲಿದೆ.

ಗೋಕುಲಾಷ್ಟಮಿ ದಿನ ಅರಮನೆಯವರು ತಮ್ಮ ಪರಿವಾರದವರ ಜೊತೆ ಸೇರಿಕೊಂಡು ಮೆರವಣಿಗೆ ಮೂಲಕ ನೀರು ತುಂಬಿದ ತೊಗಲಿನ ತಿಥಿಗಳೊಂದಿಗೆ ಹಳದಿ ವಸ್ತ್ರಧಾರಿಗಳಾಗಿ ನೀರಾಟ ಆಡುತ್ತಾರೆ. ಶ್ರೀ ಗೋಪಾಲಸ್ವಾಮಿ ದೇವಸ್ಥಾನಕ್ಕೆ ಆಗಮಿಸುತ್ತಾರೆ. ದೊರೆಗಳು ಕಡ್ಡಾಯವಾಗಿ ಅರಸರಿಗಾಗಿ ಸಿದ್ಧಪಡಿಸಿದ ವೇದಿಕೆಯಲ್ಲಿ ಕುಳಿತುಕೊಳ್ಳುವರು. ಸಗರನಾಡಿನ ಎಲ್ಲಾ ಗ್ರಾಮಗಳ ಜನರು ಅಲ್ಲಿ ಸೇರಿರುತ್ತಾರೆ. ದೊರೆಗಳು ಅಲ್ಲಿ ಸೇರಿದ ಜನರತ್ತ ನಾಣ್ಯಗಳನ್ನು ಎಸೆಯುತ್ತಾರೆ. ಅವುಗಳನ್ನು ಆರಿಸಿಕೊಂಡು ಜನರು ಕಂಬವನ್ನು ಏರಲು ಸಿದ್ಧತೆ ಮಾಡಿಕೊಳ್ಳುವರು. ಸುರಪುರದ ೫ ಕೇರಿಗಳಿಂದ ಬಂದ ಜನರು ೫ ಕಂಬಗಳನ್ನು ಪ್ರತಿಷ್ಠಾನ ಮಾಡುತ್ತಾರೆ. ಈ ಕಂಬಗಳು ೩೦-೪೦ ಅಡಿಗಳಷ್ಟು ಹೆಚ್ಚು ಎತ್ತರವಿರುತ್ತವೆ. ಕಂಬಗಳು ಮೇಲ್ಭಾಗದಲ್ಲಿ ಇಬ್ಬರು ಕೂಡುವ ವ್ಯವಸ್ಥೆ ಮಾಡಿರುತ್ತಾರೆ. ಅವರು ನೀರು ತುಂಬಿದ ಗಡಿಗೆಗಳನ್ನು ತಮ್ಮ ಬಳಿ ಇಟ್ಟುಕೊಂಡಿರುತ್ತಾರೆ. ಮತ್ತು ಕಂಬ ಏರುವವರ ಮೇಲೆ ನೀರು ಹಾಕುತ್ತಾ ಇರುತ್ತಾರೆ. ಕಂಬವನ್ನು ಏರಿ ತುತ್ತ ತುದಿಯ ಪುಟ್ಟಿ ಮೇಲೆ ಕಟ್ಟಿರುವ ಬಾಳೆ ಹಣ್ಣುಗಳನ್ನು ಕಿತ್ತು ಕೆಳಗಿದ್ದ ಜನರಿಗೆ ಎಸೆಯುತ್ತಾರೆ. ಈ ಕ್ಷಣವನ್ನು ನೋಡಿ ಜನರು ಭಾವ ಪರವಶತೆಗೆ ಒಳಗಾಗಿ ಪುಳಕಿತರಾಗುತ್ತಾರೆ.

ಕೃಷ್ಣಾಷ್ಟಮಿ ಎರಡನೇ ದಿನ ರಣಗಂಬ ಏರುವ ಸ್ಪರ್ಧೆ ಇರುತ್ತದೆ. ಮತ್ತು ವಿವಿಧ ಜನಪದ ಕ್ರೀಡೆಗಳು, ಗೀತೆಗಳು ಜರುಗುತ್ತವೆ. ವಿಶೇಷವಾಗಿ ಕಂಬಗಳನ್ನು ಹತ್ತುವ ಸ್ಪರ್ಧೆಯು ಮುಖ್ಯವಾಗಿ ಬೇಡರಿಗೆ ಮೀಸಲಾಗಿರುತ್ತದೆ. ದೇವರ ಕಂಬವನ್ನು ಸತ್ಯಂಪೇಟೆ ಬೇಡರು, ದೊಣ್ಣಿಗೇರಿ ಕಂಬವನ್ನು ಡೊಣ್ಣಿಗೇರಿ ಬೇಡರು, ನಡುಗೇರಿ ಕಂಬವನ್ನು ನಡುಗೇರಿ ಬೇಡರು, ಮಲ್ಲಿಭಾವಿ ಕಂಬವನ್ನು ಮಲ್ಲಿಭಾವಿ ಬೇಡರು ಏರುವ ಮೂಲಕ ನಡೆಸಿಕೊಡುತ್ತಾರೆ.

**ತಿಂಥಣಿ ಮೌನೇಶನಿಗೆ ಪೂಜೆ:**

ತಿಂಥಣಿ ಮೌನೇಶನಿಗೆ ಸಗರನಾಡಿನ ಬೇಡರು ಐತಿಹಾಸಿಕ ಹಿನ್ನೆಲೆಯ ಧಾರ್ಮಿಕ ಸಂಬಂಧವಿದೆ. ಸೈನಿಕನಾಗಿದ್ದ ಪಿಡ್ಡನಾಯಕನು ತನ್ನದೇ ಆದ ರಾಜ್ಯ ಹೊಂದಿಲ್ಲ ಎಂದು ಯೋಚಿಸುತ್ತಾ ಕುಳಿತುಕೊಂಡಾಗ ಪವಾಡ ಪುರುಷನಾದ ಮೋನಪ್ಪಯ್ಯ ಪಿಡ್ಡನಾಯಕನಿಗೆ ಸಗರನಾಡಿನಲ್ಲಿ ಸ್ವತಂತ್ರ ರಾಜ್ಯ ಕಟ್ಟಲು ಆಶೀರ್ವಾದ ಮಾಡುತ್ತಾರೆ. ಅಂತೆಯೇ ಈ ನಾಡಿನಲ್ಲಿ ತನ್ನ ಸಾಮ್ರಾಜ್ಯವನ್ನು ಸ್ಥಾಪಿಸುತ್ತಾರೆಂದು ಪ್ರತೀತಿ ಇದೆ. ಇದು ತಿಂಥಣಿ

ಮಾನಪ್ಪಯ್ಯನ ಮತ್ತು ಸುರಪುರದ ಸಂಬಂಧದ ಕುರಿತು ಕೇಳಿ ಬರುವ ಮಾತು. ಈಗಲೂ ಮೋನಪ್ಪಯ್ಯನ ಜಾತ್ರೆಯ ವೇಳೆಯಲ್ಲಿ ಸುರಪುರದ ರಾಜ ಪ್ರತಿನಿಧಿಗಳು ಕಾಯಿ-ಕರ್ಪೂರ, ಹೂ-ಹಣ್ಣುಗಳನ್ನು ತೆಗೆದುಕೊಂಡು ಮೊದಲು ಸುರಪುರದ ಕಾಳಮ್ಮನ ಗುಡಿಗೆ ಭೇಟಿ ನೀಡಿ ನಂತರ ಅಲ್ಲಿಂದ ತಿಂಥಣಿ ಮೌನೇಶ್ವರನ ದೇವಸ್ಥಾನಕ್ಕೆ ಹೋಗಿ ಪೂಜೆಯನ್ನು ಸಲ್ಲಿಸಿ ಬರುವ ಸಂಪ್ರದಾಯವಿದೆ.

**ಮಹಾಲಯ ಅಮಾವಾಸ್ಯೆ:**

ಹುಟ್ಟು ಆಸಕ್ಮಿಕವಾದರೂ ಸಾವು ಖಚಿತ. ಈ ಜೀವನವೆನ್ನುವುದು ಋಣದ ರತ್ನಗಣಿ ಎಂದು ಹೇಳಬಹುದು. ನಮ್ಮ ಜೀವನದಲ್ಲಿ ಹಲವರಿಂದ ಉಪಕಾರವನ್ನು ಪಡೆದಿರುತ್ತೇವೆ. ಹೆತ್ತವರು, ಹೊತ್ತವರು, ಸಹೋದರ, ಸಹೋದರಿಯರು, ಬಂಧು ವರ್ಗದವರು, ಕುಟುಂಬದವರು, ವಿದ್ಯಾದಾನ ಮಾಡಿದ ಗುರುಗಳು, ಸ್ನೇಹಿತರು ಎಲ್ಲರಿಂದಲೂ ಉಪಕೃತರಾಗಿರುತ್ತೇವೆ. ಅವರೆಲ್ಲರಿಗೂ ಕೃತಜ್ಞತೆ ಸಲ್ಲಿಸುವುದು ನಮ್ಮ ಕರ್ತವ್ಯ. ಕಣ್ಮುಂದೆ ಇರುವವರನ್ನು ಗೌರವಿಸುವುದು ಒಂದು ಮಾದರಿಯಾದರೆ, ಅಗಲಿರುವವರ ಋಣವನ್ನು ನೆನೆದು ನಮ್ಮ ಗೌರವವನ್ನು ಸೂಚಿಸುವುದು ಇನ್ನೊಂದು ಮಾದರಿ. ಭಾದ್ರಪದ ಕೃಷ್ಣಪಕ್ಷದಲ್ಲಿ ಆಚರಿಸಲ್ಪಡುವ ಪಿತೃಪಕ್ಷದ ಉದ್ದೇಶ ಅಗಲಿದ ಹಿರಿಯರನ್ನು ಸ್ಮರಿಸುವುದು ಈ ಹದಿನೈದು ದಿನಗಳಲ್ಲಿ ನಿಗದಿಪಡಿಸಲಾಗಿದೆ. ಆದರೆ ಇಂದಿನ ಒತ್ತಡದ ದಿನಗಳಲ್ಲಿ ಇದನ್ನು ಆಚರಿಸುವುದು ಎಲ್ಲರಿಗೂ ಕಷ್ಟ ಸಾಧ್ಯ. ಇದಕ್ಕಾಗಿ ಪಿತೃ ಪಕ್ಷದ ಕೊನೆಯ ದಿನವನ್ನು ಮಹಾಲಯ ಅಮಾವಾಸ್ಯೆ ಎಂದು ಆಚರಿಸಿ ಅಂದು ಸರ್ವ ಪಿತೃಗಳಿಗೂ ತರ್ಪಣ ನೀಡಲಾಗುತ್ತದೆ. ಇದನ್ನು ಧಾರ್ಮಿಕ ವಿಧಿ ಎನ್ನುವುದಕ್ಕಿಂತ ಅಗಲಿದವರಿಗೆ ನಮ್ಮ ಗೌರವ ಸಲ್ಲಿಸುವ ಉದಾತ್ತವಾದ ಆಚರಣೆ ಎಂದು ಕರೆಯಬಹುದು.

ಮಹಾಲಯದ ಆಚರಣೆಯ ವಿಧಿಯನ್ನು ಆಪಸ್ತಂಬಾದಿ ಸೂತ್ರಕಾರರು ತಮ್ಮ ಗೃಹ ಸೂತ್ರಗಳಲ್ಲಿ ವಿವರವಾಗಿ ನೀಡಿದ್ದಾರೆ. ಶ್ರಾದ್ಧಗಳಲ್ಲಿ ಮೂಲ ಶ್ರಾದ್ಧ ಮತ್ತು ವಿದಿತ ಶ್ರಾದ್ಧ ಎಂಬ ಎರಡು ವಿಧಗಳಿವೆ. ಹಿರಿಯರು ಮೃತರಾದ ನಂತರ ನಡೆಸುವ ಅಪರ ಕ್ರಿಯೆಗಳು ಪ್ರತಿ ಸಾಂವತ್ಸರಿಕ ಶ್ರಾದ್ಧದ ಆಚರಣೆಗಳು ಮೂಲ ಶ್ರಾದ್ಧ. ಗಯಾ ಮೊದಲಾದ ತೀರ್ಥಕ್ಷೇತ್ರಗಳಲ್ಲಿ ಮಾಡುವ ತೀರ್ಥ ಶ್ರಾದ್ಧ, ಮಾಘ ಮಾಸದಲ್ಲಿ ಮಾಡುವ ಅಷ್ಟಕ ಶ್ರಾದ್ಧ, ಶುಭ ಸಮಾರಂಭಗಳಲ್ಲಿ ಮಾಡುವ ನಾಂದಿ ಶ್ರಾದ್ಧಗಳಂತೆ ಮಹಾಲಯ ಶ್ರಾದ್ಧವು ವಿಧಿತ ಶ್ರಾದ್ಧ. ಮಹಾಲಯದ ಶ್ರಾದ್ಧದ ವಿಶೇಷವೆಂದರೆ ಇಲ್ಲಿ ಇದರಲ್ಲಿ ಪಾರ್ವಕ ಮತ್ತು ಏಕೋದಿಷ್ಟ ಎರಡು ಮಾದರಿಗಳು ಇವೆ. ಷಡ್ ಪಿತೃವರ್ಗದವರಿಗೆ ತರ್ಪಣ ನೀಡುವುದು ಪಾರ್ವಕ. ಈ ಪಾರ್ವಕ ಪಿತೃಗಳು ಯಾರೆಂದರೆ ತಂದೆಯ ಕಡೆ ಆರು ಜನ. ತಾಯಿಯ ತಂದೆಯ ಕಡೆ ಆರು ಜನ. ಒಟ್ಟು ಹನ್ನೆರಡು ಜನ. ವಾರ್ಷಿಕ ಶ್ರಾದ್ಧಗಳಲ್ಲಿ ಪಿತೃವರ್ಗದ

ಮೂವರಿಗೆ ಪಿಂಡಪ್ರಧಾನ ಮಾಡುವ ಅಧಿಕಾರವಿರುತ್ತದೆ. ಮಹಾಲಯದಲ್ಲಿ ಮಾತ್ರ ಪಾರ್ವಣ ಪಿತೃಗಳಿಗೆ ಕೂಡ ಪಿಂಡಪ್ರಧಾನವನ್ನು ಮಾಡಬಹುದು. ಹೀಗೆ ಮಾಡಲು ಬಯಸುವವರು ಹೋಮ, ಭೋಜನ, ಪಿಂಡಪ್ರಧಾನ ಮೂರು ವಿಧಿಗಳನ್ನು ಆಚರಿಸಬೇಕು. ಇನ್ನೊಂದು ಮಾದರಿ ಏಕೋದಿಷ್ಟ ಶ್ರಾದ್ಧ. ಇಲ್ಲಿ ಅಕ್ಕ, ತಂಗಿ, ತಮ್ಮ, ದೊಡ್ಡಪ್ಪ, ಚಿಕ್ಕಪ್ಪ, ಹೆಣ್ಣು ಕೊಟ್ಟ ಮಾವ, ಅತ್ತೆ, ಸೋದರ ಮಾವ, ವಿದ್ಯಾ ದಾನ ಮಾಡಿದ ಗುರುಗಳು, ಸಹಾಯ ಮಾಡಿದ ಬಂಧು ಮಿತ್ರ ವರ್ಗದವರು ಹೀಗೆ ಒಬ್ಬೊಬ್ಬರನ್ನು ಕರೆದು ತರ್ಪಣ ನೀಡುವುದು ಕ್ರಮ. ಹೀಗೆ ಮಾಡಲು ಸಮಯಾವಕಾಶ ಬೇಕಾಗುವುದರಿಂದ ಇದನ್ನೇ ಸಾಂಕೇತಿಕವಾಗಿಸಿ ಪಿತೃ ವರ್ಗಕ್ಕೆ ಒಬ್ಬರು, ಮಾತೃವರ್ಗಕ್ಕೆ ಒಬ್ಬರು, ಸಪತ್ನೀಕ ಮಾತಾಮಹಾ ವರ್ಗಕ್ಕೆ ಒಬ್ಬರು ಮತ್ತು ಉಳಿದ ಪಿತೃಗಳಿಗೆ ಒಬ್ಬರು ಎಂದು ಹೇಳಿಕೊಂಡು ತರ್ಪಣ ನೀಡುವ ಪದ್ಧತಿ ಕೂಡಾ ಆಚರಣೆಯಲ್ಲಿದೆ. ಹೆಂಡತಿಯು ಮೃತಳಾಗಿದ್ದರೆ ಈ ವಿಧಿಯಲ್ಲಿ ಸಪತ್ನೀಕ ಎಂದು ಸೇರಿಸಿಕೊಳ್ಳಬೇಕು. ಯಾವ ಮಾದರಿಯ ಶ್ರಾದ್ಧವನ್ನು ಮಾಡುತ್ತಾರೋ ಅದನ್ನು ಸಂಕಲ್ಪದಲ್ಲಿ ಸೇರಿಸಿಕೊಳ್ಳಬೇಕು. ಎರಡೂ ಮಾದರಿಯನ್ನು ಸೇರಿಸಿ ಮಾಡೋದಾದರೆ, ಪಾರ್ವಣ್ಯೇ ಕೊದಿಷ್ಟಾತ್ಮಕಂ ಸಕೃನಾಲಯ ಶ್ರಾದ್ಧಂ ಎಂದು ಹೇಳಿಕೊಳ್ಳಬೇಕು.

ಮಹಾಲಯದಲ್ಲಿ ರಕ್ತ ಸಂಭಂಧವಿಲ್ಲದವರಿಗೆ, ಬೇರೆ ಜಾತಿ ವರ್ಗದವರಿಗೆ ತರ್ಪಣ ನೀಡುವುದಕ್ಕೆ ಅವಕಾಶ ಕಲ್ಪಿಸಲಾಗಿದೆ. ಇದು ಸರಿಯೇ? ಎಂಬ ಪ್ರಶ್ನೆ ಕೆಲವರಿಗೆ ಕಾಡಬಹುದು. ಉಪಕಾರವನ್ನು ಪಡೆಯುವಾಗ ಇಂತಹ ಅಂಶಗಳನ್ನು ಗಮನಿಸಿದ್ದೀರಾ? ಇಲ್ಲ ಅಲ್ಲವೇ? ಅಂತೆಯೇ ಉಪಕಾರ ಸ್ಮರಿಸುವಲ್ಲಿ ಹಿಂಜರಿಕೆ ಏಕೆ ಎನ್ನುತ್ತದೆ ನಮ್ಮ ಶಾಸ್ತ್ರವಿಧಿ. ಈ ಉದಾರತೆ ಸೂಚಿಸುವ ಮಂತ್ರ ಭಾಗ ಹೀಗಿದೆ.

ಆ ಬ್ರಹ್ಮಣೋ ಯೇ ಪಿತೃವಂಶಜಾತಃ<br>
ಮಾತುಸ್ತಥಾ ವಂಶಭವಾ ಮದೀಯಾಃ<br>
ವರ್ಗದ್ವಯೇಷ್ಠಿನ್ ಮಮ ದಾಸಭೂತಾಃ<br>
ಬೃತ್ಯಾಸ್ತಥಾ ಆಶ್ರಿ ತ ಸೇವಕಾಶ್ಚ<br>
ಮಿತ್ರಾಣಿ ಸಖ್ಯಃ ಪಶವಶ್ಚ ವೃಕ್ಷಾಃ<br>
ಸ್ಪೃಷ್ಟಾಶ್ಚ ದೃಷ್ಟಾಶ್ಚ ಕೃತೋಪಕಾರಾಃ<br>
ಜನಾಂತರೇ ಯೇ ಮಮ ಸಂಗತಾಶ್ಚ<br>
ತೇಭ್ಯಃ ಸ್ವಧಾ ಪಿಂಡಮಹಂ ದದಾಮಿ<br>
ತಾಭ್ಯಃ ಸ್ವಧಾ ಪಿಂಡಮಹಂ ದದಾಮಿ (ಆಧಾರ: ವೇದಮಂತ್ರಗಳ ಪುಸ್ತಕ)

ಇದು ಬಹಳ ಅರ್ಥಪೂರ್ಣವಾದ ಶ್ಲೋಕ. ಬ್ರಹ್ಮನಿಂದ ಹಿಡಿದು ನಮ್ಮ ಪಿತೃವರ್ಗದಲ್ಲಿ ಅನಾದಿಯಿಂದಲೂ ನಮಗೆ ಉಪಕಾರ ಮಾಡಿದವರಿಗೆ, ಸ್ನೇಹಿತರಾದವರಿಗೆ, ನಮ್ಮ ಯಶಸ್ಸಿಗೆ ಶ್ರಮಿಸಿದವರಿಗೆ, ನಮ್ಮ ಕುಟುಂಬದ ವರ್ಗಕ್ಕೆಲ್ಲಾ ಅಮೃತಮಯವಾದ ಹಾಲನ್ನು ಕೊಟ್ಟು ಉಪಕಾರ ಮಾಡಿದ ಗೋ ಮಾತೆಯರಿಗೆ, ನಮಗೆ ವಾಹನವಾಗಿ ಶ್ರಮಿಸಿದ ಕುದುರೆ, ಆನೆ ಮೊದಲಾದ ಪ್ರಾಣಿ ವರ್ಗಕ್ಕೆ, ನಮಗೆ ನೆರಳನ್ನು ನೀಡಿ ಸಲಹಿದ ವೃಕ್ಷಗಳಿಗೆ, ಕಷ್ಟದಲ್ಲಿ ನೆರವಾಗಿ ಬದುಕನ್ನು ಸಹನೀಯವಾಗಿಸಿದ ಮಹನೀಯರಿಗೆ ಜನ್ಮಾಂತರಗಳಲ್ಲಿ ಉಪಕಾರ ಮಾಡಿದವರನ್ನೆಲ್ಲಾ ಸ್ಮರಿಸಿಕೊಂಡು ತರ್ಪಣವನ್ನು ನೀಡುತ್ತಿದ್ದೇವೆ ಎನ್ನುವುದು ಇದರ ಅರ್ಥ. ಮಹಾಲಯ ಅಮಾವಾಸ್ಯೆ ಆಚರಣೆ ನಮ್ಮ ಪ್ರಾಚೀನ ಸಂಸ್ಕೃತಿಯ ಉತ್ತಮ ಕುರುಹಾಗಿದೆ. ಉಪಕಾರ ಮಾಡಿದವರನ್ನು ಸ್ಮರಿಸಿಕೊಳ್ಳಬೇಕು. ಮನುಷ್ಯರನ್ನು ಮಾತ್ರವಲ್ಲ, ಪ್ರಾಣಿ ಪಶುವರ್ಗವನ್ನು ನಮಗೆ ಉಪಕಾರವನ್ನು ಮಾಡಿದವರನ್ನೆಲಾ ವರ್ಷದಲ್ಲಿ ಒಮ್ಮೆ ನೆನೆದು ಅವರಿಗೆ ಕೃತಜ್ಞತೆ ಸಲ್ಲಿಸುವ ಈ ಆಚರಣೆ ನಮ್ಮಲ್ಲಿ ವಿನಯದ ಭಾವವನ್ನು ಹೃದಯವನ್ನು ವಿಕಸನ ಗೊಳಿಸುತ್ತದೆ.

**ರಾಖಿ ಹಬ್ಬ:**

'ನಮ್ಮ ಭಾರತ ದೇಶದ ಹಬ್ಬಗಳ ಆಚರಣೆಯಲ್ಲಿ ರಾಖಿ ಹಬ್ಬ ವಿಶಿಷ್ಟವಾದದ್ದು. ಈ ಹಬ್ಬ ಖಿನ್ನನಾಗದಂತೆ ನಾನಿದ್ದೇನೆ. ದಾರಿ ತೋರುವೆ. ನೆರವಾಗುವೆ. ನಿನ್ನ ರಕ್ಷಣೆ ಮಾಡುವೆ ಎಂಬ ಸಂದೇಶವನ್ನು ಸಾರುತ್ತದೆ. ಪ್ರತಿ ವರ್ಷ ಆಗಸ್ಟ್ ತಿಂಗಳಿನಲ್ಲಿ ಬರುವ ಈ ಹಬ್ಬ ಹಿಂದುಗಳ ಐಕ್ಯತೆಯ ಹಬ್ಬವಾಗಿದೆ. ಹಿಂದೂ ಧರ್ಮದ ಏಳಿಗೆಗಾಗಿ ಪಣತೊಟ್ಟು ಸಗರನಾಡಿನ ಬೇಡರು ಹಿಂದಿನಿಂದಲೂ ಈ ರಕ್ಷಣೆಯ ದ್ಯೋತಕವಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಸಹೋದರಿಯರು ಅಣ್ಣಂದಿರಿಗೆ ರಾಖಿಯನ್ನು ಕಟ್ಟುತ್ತಾರೆ.'[೧೨]

**೫.೩ ಸಗರನಾಡಿನ ಬೇಡರ ಸ್ತ್ರೀ ದೇವತೆಗಳು:**

ಸಗರ ನಾಡಿನಲ್ಲಿ ಪ್ರತಿಯೊಂದು ಗ್ರಾಮಕ್ಕೆ ಸ್ತ್ರೀ ದೇವತೆಗಳು ಇವೆ. ಅದರಲ್ಲಿಯೂ ಬೇಡರು ಸ್ತ್ರೀ-ದೇವತೆಗಳನ್ನು ಅತಿಯಾಗಿ ನಂಬುತ್ತಾರೆ. ಪೂಜೆ ಪುನಸ್ಕಾರ ಪ್ರಾಣಿಗಳನ್ನು ಬಲಿ ಕೊಡುವುದರ ಮೂಲಕ ದೇವತೆಗಳ ಹರಕೆಗಳನ್ನು ತೀರಿಸುತ್ತಾರೆ.

**ಸುರಪೂರ ತಾಲೂಕಿನ ಸ್ತ್ರೀ ದೇವತೆಗಳು:**

**ಗಡೆ ದುರ್ಗಮ್ಮ:**

ಸುರಪೂರ ಪಟ್ಟಣದ ಕಬಾಡಗೇರಾ ಓಣಿಯಲ್ಲಿರುವ ದೇವತೆಯೇ ಈ ಗಡೆ ದುರಗಮ್ಮ. ಈ ದೇವತೆಯ ಜಾತ್ರೆಯನ್ನು ಪ್ರತಿ ವರ್ಷ ಶಿವರಾತ್ರಿ ವೇಳೆಯಲ್ಲಿ ನಡೆಸಲಾಗುತ್ತದೆ. ವಿಶೇಷವೆಂದರೆ ಈ ದೇವತೆಗೆ ಪ್ರಾಣಿ ಬಲಿ ನೀಡುವುದಿಲ್ಲ. ಈ ದೇವತೆಯ ಜಾತ್ರೆಯಂದು ತಾಲೂಕಿನ ಎಲ್ಲಾ ಗ್ರಾಮದವರು ಮನೆಯಲ್ಲಿ ಸಿಹಿ ಊಟವನ್ನೇ ದೇವತೆಗೆ ನೈವೆದ್ಯ

ಮಾಡುತ್ತಾರೆ. ಸುರಪೂರ ಅರಮನೆಯಿಂದ ಪೂಜೆ ಸಾಮಗ್ರಿಗಳು ದೇವಿ ಗುಡಿಗೆ ಹೋಗುತ್ತವೆ. ದೇವಿಯ ಪಲ್ಲಕ್ಕಿಯು ದರ್ಬಾರಿಗೆ ಆಗಮಿಸುವಾಗ ಅರಮನೆಯ ಬೇಡ ಪರಿವಾರದವರು ಭಕ್ತಿಯಿಂದ ಪೂಜೆ ಸಲ್ಲಿಸುತ್ತಾರೆ.

**ದಂಡಿನ ಮರಗಮ್ಮ:**

ಈ ದೇವಿಗೆ ಐತಿಹಾಸಿಕ ಹಿನ್ನೆಲೆ ಇದೆ. ಸುರಪುರದ ಮಧ್ಯ ಭಾಗದಲ್ಲಿ ಬಿಚ್ಚುಗತ್ತಿಕೇರಿಯ ಕೆರೆಯ ದಂಡೆಯ ಮೇಲೆ ಈ ದೇವತೆಯ ದೇವಸ್ಥಾನವಿದೆ. ಈ ದೇವಿಯ ಮೂರ್ತಿ ಚಿತ್ರ ನೋಡಲು ಭಯಾನಕವಾಗಿದೆ. ಈ ದೇವತೆಯ ಪೂಜೆ ಪುನಸ್ಕಾರಗಳು ೩-೪ ವರ್ಷಗಳಿಗೊಮ್ಮೆ ನಡೆಯುತ್ತದೆ. ದೇವತೆಗೆ ಬೇಡಿಕೊಂಡವರು ಪ್ರಾಣಿ ಬಲಿ ನೀಡುವುದರ ಮೂಲಕ ಹರಕೆಯನ್ನು ತೀರಿಸುತ್ತಾರೆ. ಈ ಹಿಂದೆ ಸೈನ್ಯವು ಇದೇ ಸ್ಥಳದಲ್ಲಿ ಯುದ್ಧಕ್ಕೆ ಹೋಗುವ ಸಮಯದಲ್ಲಿ ಸೈನಿಕರ ಪತ್ನಿಯರು ಈ ದೇವಿಯ ಸಮ್ಮುಖದಲ್ಲಿ ತಾಳಿಯನ್ನು ಬಿಚ್ಚಿಡುತ್ತಿದ್ದರು. ಯುದ್ಧದಲ್ಲಿ ಮರಣ ಹೊಂದಿದವರಿಗೆ ಪುನರ್ ವಸತಿ ಕಲ್ಪಿಸಲಾಗುತ್ತಿತ್ತು. ಜಯಿಸಿ ಬಂದವರು ಮತ್ತೆ ದೇವಿಯ ಸಮ್ಮುಖದಲ್ಲಿ ಪತ್ನಿಗೆ ತಾಳಿಯನ್ನು ಕಟ್ಟುತ್ತಿದ್ದರು. ಹೀಗೆ ಈ ದೇವಿಯ ಮಹಾತ್ಮೆ ದೊಡ್ಡದು.

**ಕಿರಣಗಿ ಮರಗಮ್ಮ:** ಸುರಪುರದ ಡೊಣ್ಣಿಗೇರಿ ಓಣಿಯಲ್ಲಿ ಇರುವ ದೇವಿಯೇ ಈ ಕಿರಣಗಿ ಮರಗಮ್ಮ. ಈ ದೇವತೆ ಗುಲ್ಬರ್ಗಾ ಜಿಲ್ಲೆಯ ಕಿರಣಗಿ ಎಂಬ ಗ್ರಾಮದಿಂದ ಬಂದು ಇಲ್ಲಿ ನೆಲೆಸಿದ್ದಾಳೆ ಎಂಬ ಪ್ರತೀತಿ ನಂಬಿಕೆ ಇದೆ. ಈ ದೇವತೆಯ ಮೂರ್ತಿ ಬಹು ಸುಂದರವಾಗಿದೆ. ಡೊಣ್ಣಿಗೇರಿಯ ಬೇಡರು, ಬಿಚ್ಚಗತ್ತಿಗೇರಿಯ ಬೇಡರು, ಕಬಾಡಾಗೇರಾ ಬೇಡರು, ಕಾನಿಕೇರಿ ಬೇಡರು, ಮ್ಯಾಗೇರಿ ಬೇಡರು, ನಡುಗೇರಿ ಬೇಡರು ಹಾಗೂ ತಾಲೂಕಿನ ಎಲ್ಲಾ ಗ್ರಾಮಗಳ ಬೇಡರು ಈ ದೇವತೆಯ ಭಕ್ತರು. ಬೇಡಿಕೊಂಡವರು ಈ ದೇವತೆಗೆ ಪ್ರತಿ ವರ್ಷ ಕುರಿ-ಮೇಕೆಗಳ ಬಲಿಯನ್ನು ಕೊಡುತ್ತಾರೆ. ಅಲ್ಲದೇ ಈ ದೇವತೆಗೆ ಎಷ್ಟೇ ಕಾನೂನಿನ ಅಡೆತಡೆ ಇದ್ದರೂ ಕೂಡಾ ಕೋಣದ ಬಲಿಯನ್ನು ಕೊಡುತ್ತಾರೆ.

**ಹುಲಿಕಲ್ ರತ್ನಮ್ಮ:** ಸುರಪುರ ಹುಲಿಕಲ್ ಬೆಟ್ಟದಲ್ಲಿ ಈ ದೇವತೆಯ ಗುಡಿ ಇದೆ. ರತ್ನಮ್ಮ ಮತ್ತು ಕಿರಣಗಿ ಮರೆಮ್ಮ ಅಕ್ಕ ತಂಗಿಯರು ಎಂಬ ಪ್ರತೀತಿ ಇದೆ. ಈ ದೇವತೆಗೆ ಟೆಂಗಿನ ಕಾಯಿ ಒಡೆದು ದೇವಸ್ಥಾನದಲ್ಲಿಯೇ ಬಿಟ್ಟು ಬರುವ ಸಂಪ್ರದಾಯವಿದೆ. ಈ ದೇವತೆಗೆ ಕೂಡಾ ಕುರಿ-ಮೇಕೆಗಳ ಪ್ರಾಣ ಬಲಿ ನೀಡಿ ದೇವತೆಯನ್ನು ಶಾಂತಗೊಳಿಸುತ್ತಾರೆ.

**ಶಹಾಪೂರ ತಾಲೂಕಿನ ಸ್ತ್ರೀ ದೇವತೆಗಳು:**

**ಯಲ್ಲಮ್ಮ ದೇವಿ:** ಸಗರನಾಡಿನ ಶಹಾಪುರದ ದೊಡ್ಡ ಸಗರದ ಹತ್ತಿರದಲ್ಲಿ ಬೆಟ್ಟದಲ್ಲಿ ಯಲ್ಲಮ್ಮ ದೇವಿಯ ದೇವಸ್ಥಾನವಿದೆ. ಈ ದೇವಿಯ ದರ್ಶನ ಮಾಡಬೇಕಾದರೆ ನೂರಾರು ಮೆಟ್ಟಿಲಗಳನ್ನು ಹತ್ತಬೇಕು. ಸಗರನಾಡಿನ ಬೇಡರು ಮತ್ತು ಎಲ್ಲಾ ಜಾತಿಯ ಜನರು ಈ ದೇವತೆಯ ಭಕ್ತರಾಗಿದ್ದಾರೆ. ಒಂದು ದಿನ ಯಲ್ಲಮ್ಮ ದೇವಿ ಬೆಟ್ಟದಿಂದ ಇಳಿದು ಹೊಲದಲ್ಲಿ

ಬೆಳೆದಿರುವ ಮೆಣಸಿನಕಾಯಿ, ಉಳ್ಳಾಗಡ್ಡಿ ಕಾಯಿಪಲ್ಯೆಗಳನ್ನು ಕಳುವು ಮಾಡಿಕೊಂಡು ಹೋಗುತ್ತಿದ್ದಾಗ ಒಂದು ದಿನ ಹೊಲದ ಮಾಲಿಕ ಈಕೆಯನ್ನು ಹಿಡಿಯಲೂ ಹೋದಾಗ ಬೆಟ್ಟದ ತುದಿಯ ಕಲ್ಲಿನ ಗುಹೆಯಲ್ಲಿ ಅವಿತು ಕುಳಿತ ಸಂದರ್ಭದಲ್ಲಿ ಹಿಡಿಯಲು ಹೋದಾಗ ಆಕೆಯ ಶರೀರವೇ ಮಾಯವಾಗಿ ಕೇವಲ ಜಡೆ(ತುರುಬು) ಅಷ್ಟೇ ಕಲ್ಲು ಸಂದಿಯಲ್ಲಿ ಸಿಕ್ಕಿಕೊಂಡಿತ್ತಂತೆ ಎಂಬ ದೇವಿಯ ಕಥೆಯನ್ನು ಈ ನಾಡಿನ ಜನರು ಹೇಳುತ್ತಾರೆ. ಅಂದಿನಿಂದ ಬೆಟ್ಟದ ಮೇಲಿರುವ ಯಲ್ಲಮ್ಮ ದೇವಿಯ ತುರುಬ (ಜಡೆ) ಕ್ಕೆ ಪೂಜೆಯನ್ನು ಮಾಡುವುದರ ಮೂಲಕ ಪ್ರತಿ ವರ್ಷ ಪ್ರಾಣಿ ಬಲಿಯನ್ನು ಕೊಟ್ಟು ತಮ್ಮ ಹರಕೆಯನ್ನು ತೀರಿಸಿಕೊಳ್ಳುವ ಸಂಪ್ರದಾಯವಿದೆ. ಈ ದೇವಿಯ ಕೃಪೆಗೆ ಹಲವಾರು ಜನರು ಪಾತ್ರರಾಗಿದ್ದಾರೆ. ಕಳೆದ ವರ್ಷ ೨೦೧೦ರಲ್ಲಿ ಈ ದೇವಿಯ ಪ್ರಾಣಿ ಬಲಿಯನ್ನು ನಿಲ್ಲಿಸಲು ಜಿಲ್ಲಾಧಿಕಾರಿಗಳು ಆಜ್ಞೆ ಹೊರಡಿಸಿದಾಗ ಏನೂ ಪ್ರಯೋಜನವಾಗಲಿಲ್ಲ. ಸಗರ ನಾಡಿನ ಜನರು ಪ್ರತಿರೋಧ ಮಾಡಿದಾಗ ಮತ್ತೇ ದೇವತೆಗೆ ಪ್ರಾಣಿಬಲಿ ಕೊಡಲು ಪ್ರಾರಂಭವಾಯಿತು.

**ಜೇವರ್ಗಿ ತಾಲೂಕಿನ ಸ್ತ್ರೀ ದೇವತೆಗಳು:**

**ಮಹಾಲಕ್ಷ್ಮೀ ದೇವಿ:** ಜೇವರ್ಗಿ ಪಟ್ಟಣದಲ್ಲಿರುವ ಮಧ್ಯಭಾಗದಲ್ಲಿ ಮಹಾಲಕ್ಷ್ಮೀ ದೇವಿ ಗುಡಿ ಇದೆ. ಹೊಸದಾಗಿ ಮದುವೆಯಾದವರು ಈ ದೇವಿಯ ದರ್ಶನ ಮಾಡಲೇ ಬೇಕು. ಈ ತಾಲೂಕಿನಲ್ಲಿರುವ ಎಲ್ಲಾ ಗ್ರಾಮಗಳ ಆರಾಧ್ಯ ದೇವತೆಯಾಗಿದ್ದಾಳೆ. ದಿನ ನಿತ್ಯ ಈ ದೇವತೆಗೆ ಪೂಜೆ ನಡೆಯುತ್ತಲೇ ಇರುತ್ತದೆ. ಇವಳು ಯಾರಿಗೆ ಒಲಿಯುತ್ತಾಳೆ ಅವರ ಮನೆಯಲ್ಲಿ ಐಶ್ವರ್ಯಕ್ಕೆ ಕೊರತೆ ಇರುವುದಿಲ್ಲಾ ಎಂಬ ನಂಬಿಕೆ ಇದೆ.

**ದ್ಯಾವಮ್ಮ ದೇವಿ:** ಜೇವರ್ಗಿ ತಾಲೂಕಿನ ನರಬೋಳ ಗ್ರಾಮದ ದೇವತೆಯ ಈ ದ್ಯಾವಮ್ಮ ದೇವಿ ಈಕೆಯ ಮೂರ್ತಿ ನೋಡಲು ಎರಡು ಕಣ್ಣು ಸಾಲದು. ನಾನು ನನ್ನ ಪಿ.ಹೆಚ್.ಡಿ. ಅಧ್ಯಯನಕ್ಕೆ ಹೋದಾಗ ಈ ದೇವಿಯ ದರ್ಶನ ಮಾಡಿ ಜನರ ಬಾಯಿಯಿಂದ ಈ ದೇವತೆಯ ಮಹಾತ್ಮೆಯನ್ನು ಕೇಳಿದಾಗ ಆಶ್ಚರ್ಯವಾಯಿತು. ಈ ಗ್ರಾಮದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಈ ದೇವತೆಗೆ ಭಯ ಭಕ್ತಿಯಿಂದ ನಡೆಯುತ್ತಾರೆ. ೩ ವರ್ಷಕ್ಕೊಮ್ಮೆ ಈ ದೇವಿ ಜಾತ್ರೆ ನಡೆಯುತ್ತದೆ. ಅಂದು ಕುರಿ ಮೇಕೆಗಳನ್ನು ಬಲಿ ಕೊಡುವುದರ ಮೂಲಕ ದೇವಿ ಹರಕೆಯನ್ನು ತೀರಿಸುತ್ತಾರೆ. ಅಲ್ಲದೆ ಈ ದೇವಿಗೆ ಬಿಟ್ಟಿರುವ ಕೋಣವನ್ನು ಅಂದು ಬಲಿ ಕೊಡಲಾಗುತ್ತದೆ. ಬೇಡ ಜನಾಂಗದವರು ಹೆಚ್ಚಿನ ಭಕ್ತರಾಗಿದ್ದಾರೆ. ಹೀಗೆ ಸಗರನಾಡಿನ ಗ್ರಾಮಗಳಲ್ಲಿ ದೇವತೆಗಳಿಗೆ ಹಲವಾರು ಹೆಸರುಗಳಿಂದ ಕರೆಯಲ್ಪಡುತ್ತಾರೆ. ದ್ಯಾಮವ್ವ, ದುರಗಮ್ಮ, ಮರಗಮ್ಮ, ರತ್ನಮ್ಮ, ಕಾಳಮ್ಮ, ಯಲ್ಲಮ್ಮ, ಭೀಮಮ್ಮ ವಿವಿಧ ಹೆಸರುಗಳಿಂದ ಪೂಜಿಸುತ್ತಾರೆ. ಜೊತೆಗೆ ಹಿಂದು ಧರ್ಮ ಭಾವೈಕ್ಯದ ಸಂಗಮ. ಆದ್ದರಿಂದ ಸಗರನಾಡಿನ ಬೇಡರು ಕೂಡಾ ಮೊಹರಂ ಹಬ್ಬದ ದಿನದಂದು ಕಾಯಿ,

ಕರ್ಪೂರ ಊದಿನಕಡ್ಡಿಯನ್ನು ಕಳಿಸುತ್ತಾರೆ. ಬೇಡರ ವಿವಿಧ ಗೌರವಸ್ಥ ಮನೆತನಗಳಿಗೆ ಮೊಹರಂ ದೇವರುಗಳಾದ ಸೈಕಾಶಮಿ, ಪೀರ, ಕೌಡಿಪೀರ, ಹಿಟ್ಟಿನ ಪೀರ, ಮೆಕ್ಕಿ ಪೀರ ಮನೆಯ ಬಾಗಿಲುಗಳಿಗೆ ಹೋಗಿ ದರ್ಶನ ಕೊಟ್ಟು ಬರುತ್ತವೆ.

**ಉಡುಗೆ-ತೊಡುಗೆ:**

ಆದಿವಾಸಿಗಳು ಈ ಮೊದಲು ಕಾಡುಗಳಲ್ಲಿ ವಾಸವಾಗಿದ್ದರಿಂದ ಮರದ ತೊಗಟೆಗಳನ್ನು ಎಲೆಗಳನ್ನು ಪ್ರಾಣಿಗಳ ತೊಗಲನ್ನು ಉಡುಗೆಯಾಗಿ ಧರಿಸುತ್ತಿದ್ದರು. ಬೇಡರೂ ಕೂಡಾ ಆದಿವಾಸಿಗಳಲ್ಲಿ ಒಬ್ಬರಾಗಿದ್ದರಿಂದ ನಾಗರಿಕ ಪ್ರಪಂಚಕ್ಕೆ ಕಾಲಿಡುವ ಮೊದಲು ಇದೇ ತರಹದ ವಸ್ತ್ರ ವಿನ್ಯಾಸಗಳನ್ನು ಮಾಡಿಕೊಳ್ಳುತ್ತಿದ್ದರು ಎಂದು ಸಂಶೋಧನೆಯಿಂದ ತಿಳಿದು ಬಂದಿದೆ. ಪ್ರಸ್ತುತ ೨೧ನೇ ಶತಮಾನದಲ್ಲಿ ಜಾಗತೀಕರಣ, ಶೈಕ್ಷಣೀಕರಣ, ಪಾಶ್ಚಾತೀಕರಣದ ಪ್ರಭಾವದಿಂದ ಬೇಡರು ಅಧುನೀಕರಣಕ್ಕೆ ತಕ್ಕಂತೆ ಉಡುಪನ್ನು ಧರಿಸುತ್ತಾರೆ. ಕಾಲಕ್ಕೆ ತಕ್ಕಂತೆ ತಮ್ಮ ಉಡುಪಿನಲ್ಲಿ ಬದಲಾವಣೆ ಮಾಡಿಕೊಳ್ಳುತ್ತಿದ್ದಾರೆ. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದ ಬಿಳಿ ಧೋತರ ಉದ್ದನ ತೋಳಿನ ಅಂಗಿ ಹಾಗೆ ತಲೆಯ ಮೇಲೆ ಬಿಳಿ ಅಥವಾ ಕೆಂಪು ಕೇಸರಿ ರುಂಬಾಲುಗಳನ್ನು ಸುತ್ತಿಕೊಳ್ಳುತ್ತಿದ್ದರು. ಈಗಲೂ ಕೂಡಾ ಈ ಉಡುಗೆಯ ಪದ್ಧತಿ ಇದ್ದರೂ ಅದು ನಶಿಸಿ ಹೋಗುವ ಹಂತಗಳಲ್ಲಿ ಇದೆ. ಆದರೆ ನಗರ ಪ್ರದೇಶದಲ್ಲಿರುವ ಬೇಡರು ಧೋತರ ಬಿಳಿ ನಿಲುವು ಅಂಗಿಯ ಜೊತೆಗೆ ಈಗಿನ ಉಡುಗೆ ತೊಡುಗೆಯನ್ನು ಅನುಸರಿಸುತ್ತಿದ್ದಾರೆ. ಶ್ರೀಮಂತ ಬೇಡರು ಸಮಾಜದಲ್ಲಿ ತಮಗೆ ಒಳ್ಳೆಯ ಸ್ಥಾನ-ಮಾನ ಗೌರವ ಸಿಗುತ್ತದೆ ಎಂದು ಬಿಳಿ ಅಂಗಿ ಪೈಜಾಮ ಬಿಳಿ ಪ್ಯಾಂಟುಗಳನ್ನು ಧರಿಸುತ್ತಿದ್ದಾರೆ. ಜೊತೆಗೆ ವಿಶೇಷ ದಿನಗಳಲ್ಲಿ ರೇಷ್ಮೆಯ ಅಂಗಿಗಳನ್ನು ಹೊಲಿಸಿ ಹಾಕಿಕೊಳ್ಳುತ್ತಿದ್ದಾರೆ. ಪ್ರಸ್ತುತ ಸಗರನಾಡಿನ ಪಟ್ಟಣ ಪ್ರದೇಶಗಳಲ್ಲಿ ವಾಸಿಸುವ ಬೇಡ ನಾಯಕರು ಚುನಾವಣೆ, ವಿವಾಹ, ಧಾರ್ಮಿಕ ಸಮಾರಂಭಗಳಲ್ಲಿ ಗಂಜಿ ಎದ್ದಿದ ಬಿಳಿ ಅಂಗಿ ಮತ್ತು ಪ್ಯಾಂಟುಗಳನ್ನು ಧರಿಸುವ ಶೋಕಿ ಇದೆ. ಒಂದುವೇಳೆ ರೇಷ್ಮೆ ಬಟ್ಟೆಗಳನ್ನು ಧರಿಸಿದರೆ ಅವರಿಗೆ ಸಿಗುವ ಗೌರವವೇ ಬೇರೆಯಾಗಿರುತ್ತದೆ. ಇದನ್ನು ಮನಗಂಡ ಸಗರನಾಡಿನ ಕೆಲವು ಬೇಡ ನಾಯಕರು ವಸ್ತ್ರ ವಿನ್ಯಾಸ ಅಥವಾ ಉಡುಗೆ ತೊಡುಗೆಗೆ ಹೆಚ್ಚಿನ ಮಹತ್ವ ಕೊಡುತ್ತಾ ಬಂದಿದ್ದಾರೆ. ಇತ್ತೀಚಿನ ದಿನ ಮಾನಗಳಲ್ಲಿ ವಿವಾಹ ಸಂದರ್ಭಗಳಲ್ಲಿ ವರನಾದವನು ತಾಳಿಯನ್ನು ಕಟ್ಟುವ ತನಕ ಸಾಂಪ್ರದಾಯಿಕ ಉಡುಗೆಯನ್ನು ತೊಟ್ಟು ನಂತರ ವೇದಿಕೆಯ ಮೇಲೆ ಬಂದಾಗ ಕೋಟು, ಷರ್ಟು, ಟೈ, ಸಾಕ್ಸ್ ಬೂಟುಗಳನ್ನು ಹಾಕಿಕೊಳ್ಳುತ್ತಾನೆ. ಇಲ್ಲವೆ ಬಿಳಿ ಅರಷಿಣ ಕೇಸರಿ ಬಣ್ಣದ ರೇಷ್ಮೆ ಬಟ್ಟೆಯ ಅಂಗಿಗಳನ್ನು ಹಾಕಿಕೊಳ್ಳುತ್ತಿದ್ದಾನೆ. ಬೇಡರು ತಮ್ಮ ಅರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಬಟ್ಟೆಗಳನ್ನು ಧರಿಸುತ್ತಾರೆ. ಬಟ್ಟೆಗಳನ್ನು ಬರೀ ಮೈ-ಕೈ ಮುಚ್ಚಲು ಮತ್ತು ಮುಂದಿನ ಸ್ಥಾನಮಾನಗಳನ್ನು ನಿರ್ಧರಿಸುತ್ತದೆ. ಇಂದಿನ ಬೇಡ ಯುವ ಜನಾಂಗ ಬಣ್ಣ-

ಬಣ್ಣದ ಬಟ್ಟೆಗಳನ್ನು ಧರಿಸುವುದರ ಜೊತೆಗೆ ಟೀ ಷರ್ಟ್, ಜೀನ್ಸ್ ಪ್ಯಾಂಟಗಳನ್ನು ಧರಿಸುತ್ತಿದ್ದಾರೆ. ಗ್ರಾಮಗಳಲ್ಲಿ ಮಹಿಳೆಯರು ಕೆಂಪು ಹಸಿರು ಕೇಸರಿ ಬಣ್ಣದ ಕಾಟನ್ ಇಲಕಲ್ ಸೀರೆಗಳನ್ನು ತೊಡುತ್ತಿದ್ದಾರೆ. ಆಧುನೀಕರಣದ ಪ್ರಭಾವದಿಂದ ಇವತ್ತಿನ ವರ್ಕ್ ಮಾಡಿದ ಸೀರೆಗಳನ್ನು, ಪಾಲಿಸ್ಟರ್ ಸೀರೆಗಳನ್ನು, ರೇಷ್ಮೆ ಸೀರೆಗಳನ್ನು ತೊಡುತ್ತಿದ್ದಾರೆ. ಯುವತಿಯರು ಲಂಗ-ದಾವಣಿಯನ್ನು ಬಿಟ್ಟು ಇಂದು ಚುಡಿದಾರ ಪೈಜಾಮ್ ಪಂಜಾಬಿ ಮಾದರಿಯ ಡ್ರೆಸ್‌ಗಳನ್ನು ತೊಡುತ್ತಿದ್ದಾರೆ. ಹೀಗೆ ಬೇಡರ ಉಡುಗೆ ತೊಡುಗೆಯಲ್ಲಿ ಕಾಲ ಕಾಲಕ್ಕೆ ಸಾಕಷ್ಟು ಬದಲಾವಣೆಗಲಾಗಿರುವುದನ್ನು ಕಾಣಬಹುದು.

**೫.೪ ಸಗರನಾಡಿನ ಬೇಡರ ವಿಧಿ ನಿಷೇಧಗಳು:** ಜಗತ್ತು ನಂಬಿಕೆಯ ಮೇಲೆ ನಿಂತಿದೆ. ಈ ನಂಬಿಕೆ ಎನ್ನುವ ಪದ ಇಲ್ಲದೇ ಹೋದರೆ ಜಗತ್ತು ನಿರ್ನಾಮವಾಗುತ್ತದೆ. ಪತಿ ಪತ್ನಿಯರ ನಡುವೆ ನಂಬಿಕೆ ತಂದೆ ತಾಯಿಯ ಮಕ್ಕಳ ನಡುವೆ ನಂಬಿಕೆ ಸಹೋದರ ಸಹೋದರಿಯರ ನಡುವೆ ನಂಬಿಕೆ ಸ್ನೇಹಿತರ ನಡುವೆ ನಂಬಿಕೆ ಬಂಧು ಬಾಂಧವರ ನಡುವೆ ನಂಬಿಕೆ ಪ್ರಮುಖವಾಗಿ ಮಾನವ ಮತ್ತು ದೇವರ ನಡುವೆ ನಂಬಿಕೆ ಇರಲೇಬೇಕು. ಇದರ ಜೊತೆಗೆ ಕೆಲವು ವಿಧಿ ನಿಷೇಧಗಳನ್ನು ನಂಬಲಾಗುತ್ತದೆ. ಕಾರಣ ಸೃಷ್ಟಿ ಯಾವ ಸಮಯ ಸಂದರ್ಭದಲ್ಲಿ ಏನನ್ನು ಸೃಷ್ಟಿ ಮಾಡುತ್ತದೋ ತಿಳಿಯುವುದಿಲ್ಲ. ಪ್ರಕೃತಿಯ ರಹಸ್ಯದಲ್ಲಿ ಏನೇನು ಅಡಗಿದೆಯೋ ಅದನ್ನು ಬಿಚ್ಚಿಡಲು ವಿಜ್ಞಾನಿಗಳಿಗೂ ಸಾಧ್ಯವಾಗಲಿಲ್ಲ. ಆದ್ದರಿಂದ ಪ್ರಪಂಚದ ನಾನಾ ಧರ್ಮ ಜಾತಿಗಳಲ್ಲಿ ನಂಬಿಕೆ ವಿಧಿ ನಿಷೇಧ ಗಳಿರುವಂತೆ ಸಗರನಾಡಿನ ಬೇಡ ಸಮುದಾಯದಲ್ಲಿಯೂ ವಿಧಿ-ನಿಷೇಧಗಳಿವೆ. ಇಂದಿಗೂ ಕೂಡ ನಂಬಿಕೆಗೆ ಅನುಗುಣವಾಗಿ ವಿಧಿ ಬದ್ಧವಾಗಿ ನಡೆದುಕೊಳ್ಳುತ್ತಾರೆ. ಪ್ರಮುಖವಾಗಿ ಗ್ರಾಮಗಳಲ್ಲಿ ಈ ನಂಬಿಕೆ ನಿಷೇಧಗಳನ್ನು ಹೆಚ್ಚಾಗಿ ನಂಬುತ್ತಾರೆ. ಇದು ಕೆಲವು ಸಲ ಇದು ನಿಜ ಸತ್ಯ ಎನಿಸಿದರೂ ಇನ್ನು ಕೆಲವು ಸಲ ಇದು ಸುಳ್ಳು ಎಂದನ್ನಿಸುತ್ತದೆ. ಆದರೂ ಕೂಡಾ ವಿಧಿ-ನಿಷೇಧಗಳು ಸುಳ್ಳಲ್ಲ. ಅದರಲ್ಲಿ ವೈಜ್ಞಾನಿಕ ಸತ್ಯ ಅಡಗಿದೆ ಎಂಬ ವಾದವೂ ಇದೆ. ಆ ಸಗರನಾಡಿನ ಬೇಡರ ವಿಧಿ-ನಿಷೇಧಗಳೆಂದರೆ

- "ಮಗುವು ಮೂಲಾ ನಕ್ಷತ್ರದಲ್ಲಿ ಜನಿಸಿದರೆ ಸೋದರ ಮಾವ ಸಾವನ್ನಪ್ಪುತ್ತಾನೆ ಎಂಬ ನಂಬಿಕೆ
- ಮಗು ಕಾಲು ಮುಂದು ಮಾಡಿ ಹುಟ್ಟಿದರೆ ಐಶ್ವರ್ಯವನ್ನು ತರುತ್ತಾನೆ ಅಥವಾ ತರುತ್ತಾಳೆ ಎಂಬ ನಂಬಿಕೆ
- ಮಗು ಹುಟ್ಟಿದ ಮನೆಗೆ ಕಾಲು ತೊಳೆದು ಒಳಗೆ ಬರಬೇಕು ಎಂಬ ನಿರ್ಬಂಧವಿದೆ
- ನೆಂಟರು ಹೊರಡುವಾಗ ಕಸ ಬಳಿಯಬಾರದು
- ಮದುವೆಯಲ್ಲಿ ಬಾಸಿಂಗ ಮುರಿದರೆ ಅಪಶಕುನ

- ಹಂದಿ ಮನೆಯೊಳಕ್ಕೆ ಹೋದರೆ ಹೊರಕ್ಕೆ ಬಿಡದೇ ಮನೆಯಲ್ಲಿಯೇ ಹೂಳುವುದು
- ಮನೆಯಲ್ಲಿ ಮೂರು ಒಲೆಗಳನ್ನು ಹಾಕಬಾರದು
- ಬೇಡರ ಮನೆಯಲ್ಲಿ ಗರ್ಭವತಿಯಿದ್ದಾಗ ಹೊಸ ಒಲೆಗಳನ್ನು ಇಡಬಾರದು
- ಮದುವೆಯಾದ ನಂತರ ಒಂದು ವರ್ಷದ ಒಳಗಡೆ ಮನೆ ಕಟ್ಟಿಸಲು ಬುನಾದಿ ಹಾಕಬಾರದು
- ದೇವರ ಗುಡಿ ಎದುರಿಗೆ ಮನೆ ಇರಬಾರದು
- ಗುಡಿಗೆ ಹೋಗಿ ಮನೆಗೆ ಬಂದಾಗ ಕಾಲು ತೊಳೆಯಬಾರದು
- ದಾರಿಯಲ್ಲಿ ಹೋಗುವಾಗ ಮುಂಗಿಸಿ ಕಂಡರೆ ಒಳ್ಳೆಯದು
- ಅಮಾವಾಸ್ಯೆಗಳಂದು ದ್ವಿ ಚಕ್ರವಾಹನ ಸವಾರಿ ಮಾಡಬಾರದು
- ನಾಯಿ ಒಂದೇ ಸಮನೆ ಅಳುತ್ತಿದ್ದರೆ ಕೆಟ್ಟದ್ದು ಎಂಬ ಭಾವನೆ ಇದೆ
- ತಿಥಿ ಮಾಡಿ ಬಾವಿದಂಡೆಯ ಮೇಲೆ ಪಿಂಡವನ್ನು ಇಟ್ಟಾಗ ಕಾಗೆ ಬಂದು ತಿಂದರೆ ಸತ್ತವರ ಆತ್ಮ ಬಂದು ತಿಂದಂತೆ ಎಂಬ ನಂಬಿಕೆ
- ಮಂಗಳವಾರ-ಶುಕ್ರವಾರ ದೇವಿ ಗುಡಿಗೆ ಹೋದರೆ ಒಳ್ಳೆಯದು ಎಂಬ ನಂಬಿಕೆ
- ಶನಿವಾರ ರವಿವಾರ ಆಂಜನೇಯನ ಗುಡಿಗೆ ಹೋದರೆ ಒಳ್ಳೆಯದು ಎಂಬ ನಂಬಿಕೆ
- ಮನೆಯ ಮೇಲೆ ಗೂಬೆ ಕುಳಿತು ಕೂಗಬಾರದು ಎಂಬ ನಂಬಿಕೆ
- ಕುಂಕುಮ ಮೈಮೇಲೆ ಚೆಲ್ಲಿದರೆ ಶುಭ ಎಂಬ ನಂಬಿಕೆ
- ಶವ ಸಂಸ್ಕಾರಕ್ಕೆ ಹೋದ ಮೇಲೆ ಮೈ ತೊಳೆದುಕೊಂಡು ಬರಬೇಕು ಎಂಬ ನಿರ್ಬಂಧ
- ಹೊಲದಲ್ಲಿ ರಾಶಿ ತುಂಬುವಾಗ ತಲೆಗೆ ಟವಲು ಸುತ್ತಿರಬೇಕು
- ಹೊರಗಡೆ ಹೊರಟಾಗ ತುಂಬಿದ ಕೊಡ ಎದುರಿಗೆ ಬಂದರೆ ಒಳ್ಳೆಯದು ಎಂಬ ನಂಬಿಕೆ
- ಹೊಸ್ತಿಲನ್ನು ತುಳಿಯುವಂತಿಲ್ಲ
- ಮನೆಯ ಹೊಸ್ತಿಲ ಸಮೀಪ ಚಪ್ಪಲಿಗಳನ್ನು ಬಿಡುವಂತಿಲ್ಲ
- ಮಾತನಾಡುವಾಗ ಒಂದು ಸೀನು ಸೀನಿದರೆ ಸತ್ಯ ಎಂಬ ನಂಬಿಕೆ

•ಮದುಮಗನ ಕೈಯಲ್ಲಿ ನಿಂಬೆ ಹಣ್ಣು ಚುಚ್ಚಿದ ಚಾಕು ಕೊಡುವದರಿಂದ ಭೂತ ಪ್ರೇತಗಳು ಬರುವುದಿಲ್ಲ ಎಂಬ ನಂಬಿಕೆ

•ಗೃಹ ಪ್ರವೇಶದ ದಿನ ಆಕಳನ್ನು ಮನೆಯೊಳಕ್ಕೆ ಕರೆತರುವುದು

•ಮಾತನಾಡುವಾಗ ಹಲ್ಲಿ ಲೊಚಗುಟ್ಟಿದರೆ ನಿಜ ಎಂಬ ನಂಬಿಕೆ

•ಬೇಡರು ತಮ್ಮ ಮಕ್ಕಳಿಗೆ ಜ್ವರ ಇತ್ಯಾದಿ ರೋಗಗಳು ಲಿಂಬೆ ಹಣ್ಣನ್ನು ಮೂರು ಸಾರಿ ಮುಖದ ಮೇಲೆ ಇಳಿಸಿ ಮೂರು ದಾರಿ ಕಲಿಯುವ ಜಾಗದಲ್ಲಿ ಬಿಸಾಡುತ್ತಾರೆ

•ದೃಷ್ಟಿ ಇಳಿಸಿ ಬಿಸಾಡಿದ ಪದಾರ್ಥಗಳನ್ನು ದಾಟಿದವರು ಜ್ವರ ಅಥವಾ ಜೀವನಕ್ಕೆ ಸಮಸ್ಯೆಗಳು ಬಂದಾಗ ಜ್ವರ ಬಂದವರು ಚಪಾತಿ, ಉತ್ತುತ್ತಿ ಬಾಳೆಹಣ್ಣು ೨ ಉತ್ತತ್ತಿ ೨ ಎಲೆ ೨ ಅಡಿಕೆ ಇವೆಲ್ಲವುಗಳನ್ನು ಪತ್ರೋಳಿಯಲ್ಲಿಟ್ಟು ಮೂರು ಸಾರಿ ಮುಖದ ಮೇಲೆ ಇಳಿಸಿ ಮೂರು ದಾರಿ ಕಲಿಯುವ ಜಾಗದಲ್ಲಿ ಇಟ್ಟು ಬರುತ್ತಾರೆ ಆಗ ತಮಗೆ ತಗುಲಿದ ಪೀಡೆ ನಿವಾರಣೆಯಾಗುತ್ತದೆ ಎಂಬ ನಂಬಿಕೆ

•ಮಕ್ಕಳು ಹೆಚ್ಚಾಗಿ ಅಳುತ್ತಿದ್ದರೆ ಜೇನಿ ತಪ್ಪಲಿನಿಂದ ಇಳಿಸಿದಾಗ ಅಳು ನಿಲ್ಲಿಸುತ್ತದೆ ಎಂಬ ನಂಬಿಕೆ

•ರಾತ್ರಿ ಎಲ್ಲಾದರೂ ಹೋಗುವ ಸಮಯದಲ್ಲಿ ಕಡ್ಡಿ ಪಟ್ಟಣ ಅಥವಾ ನಿಂಬೆ ಹಣ್ಣನ್ನು ಜೇಬಿನಲ್ಲಿ ಇಟ್ಟುಕೊಳ್ಳುತ್ತಾರೆ. ಇದರಿಂದ ಭೂತ ಪ್ರೇತಗಳು ಸನಿಹ ಬರುವುದಿಲ್ಲ ಎಂಬ ನಂಬಿಕೆ

•ಹಳೆಯ ಜಂತಿಗಳನ್ನು ಮನೆಯಲ್ಲಿ ಉರುವುದಿಲ್ಲಾ. ಒಂದು ವೇಳೆ ಉರುವುದರೆ ದರಿದ್ರ ಬಡಿಯುತ್ತದೆ ಎಂಬ ನಂಬಿಕೆ.'[೧೩]

ಹೀಗೆ ಸಗರನಾಡಿನ ಬೇಡರು ಸಾಂಸ್ಕೃತಿಕ ಜೀವಿಗಳು ಸಂಸ್ಕೃತಿಯಲ್ಲಿಯೇ ಹುಟ್ಟಿ ಸಂಸ್ಕೃತಿಯಲ್ಲಿಯೇ ಬೆಳೆದು ಸುಸಂಸ್ಕೃತರಾಗಿ ಸಾಯುತ್ತಾರೆ. ಇವರು ಅನಾದಿಯಿಂದಲೂ ಹಿಂದೂ ಧರ್ಮದ ರಕ್ಷಕರಾಗಿ ಅನುಯಾಯಿಗಳಾಗಿ ಧರ್ಮವಂತರಾಗಿ ದೈವಗಳ ಆರಾಧಕರಾಗಿ ತಲೆ ತಲಾಂತರದಿಂದ ತಮ್ಮ ಧಾರ್ಮಿಕ ಸಂಸ್ಕೃತಿಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದಿದ್ದಾರೆ. ಇಂದು ೨೧ನೇ ಶತಮಾನದ ಆಧುನೀಕರಣ, ಜಾಗತೀರಣ, ಪಾಶ್ಚಾತೀಕರಣ ಪ್ರಭಾವಕ್ಕೆ ಒಳಗಾದರೂ ಮೊದಲಿನಿಂದಲೂ ಆಚರಣೆ ಮಾಡಿಕೊಂಡು ಬಂದ ಯುಗಾದಿ ಪಾಡ್ಯ, ಗಣೇಶ ಚತುರ್ಥಿ, ನಾಗಪಂಚಮಿ, ಶ್ರೀಕೃಷ್ಣ ಜನ್ಮಾಷ್ಟಮಿ, ವಿಜಯ ದಶಮಿ, ಹೋಳಿ ಹುಣ್ಣಿಮೆ, ರಕ್ಷಾಬಂಧನ, ಮುಂತಾದ ಹಬ್ಬಗಳನ್ನು ತಪ್ಪದೇ ವಿಧಿ ವಿಧಾನಗಳ ಮೂಲಕ ಮಾಡುತ್ತಾ ಬರುತ್ತಿದ್ದಾರೆ. ಇಂದಿನ ವಿಜ್ಞಾನ ಯುಗದಲ್ಲಿಯೂ ಯಾವುದೇ ಒಂದು ಹೊಸ ವಿಶೇಷ ಕೆಲಸ ಕಾರ್ಯಗಳನ್ನು ಮಾಡುವ ಮೊದಲು

ಜ್ಯೋತಿಷ್ಯವನ್ನು ಕೇಳುವ ಪರಿಪಾಠವನ್ನು ಇಟ್ಟುಕೊಂಡಿದ್ದಾರೆ. ಇದರಲ್ಲಿ ಸಮಯ, ಕಾಲ, ಯಮಗಂಡಕಾಲ, ಶುಭಕಾಲ, ಪಾಪ, ಪುಣ್ಯ, ಸ್ವರ್ಗ, ನರಕ, ಜನ್ಮ, ಪುನರ್ ಜನ್ಮ ಇವುಗಳಲ್ಲಿ ನಂಬಿಕೆಯನ್ನು ಇಟ್ಟುಕೊಂಡಿದ್ದಾರೆ. ಬ್ರಾಹ್ಮಣರನ್ನು ತಮ್ಮ ಗುರುಗಳು ಎಂದು ತಿಳಿದು ಬ್ರಾಹ್ಮಣ ಜ್ಯೋತಿಷಿಗಳು ಹೇಳುವ ವಿಧಿ ವಿಧಾನಗಳನ್ನು ಪಾಲಿಸುತ್ತಿರುವುದು ಒಂದು ವಿಶೇಷ ಸಂಗತಿ. ಬ್ರಾಹ್ಮಣರಿಗೆ ಈ ಸಗರನಾಡಿನ ಬೇಡರು ಕೊಟ್ಟಷ್ಟು ಗೌರವ ಬೇರೆ ಯಾವ ಜಾತಿಯವರೂ ಕೊಡುವುದಿಲ್ಲ. ಬ್ರಾಹ್ಮಣ ಒಂದು ವೇಳೆ ಕುಡುಕನಾಗಿದ್ದರೂ ಅಷ್ಟೇ ವಿನಯದಿಂದ ಕಾಣುವ ಸಂಸ್ಕೃತಿ ಇವರಲ್ಲಿದೆ. ಹಾಗೆಯೇ ಸಗರನಾಡಿನ ಬ್ರಾಹ್ಮಣ ಸಮಾಜದವರು ಬೇಡರ ಮೇಲೆ ಅಷ್ಟೇ ಅಭಿಮಾನವನ್ನು ಇಟ್ಟಿದ್ದಾರೆ. ಈ ನಾಡಿನಲ್ಲಿ ಇವರುಗಳು ಗುರುಶಿಷ್ಯ ಇರುವುದು ಏಕಲವ್ಯ ದ್ರೋಣಾಚಾರ್ಯರ ಸಂಬಂಧವನ್ನು ನೆನಪಿಸುತ್ತದೆ. ಆದರೆ ಪ್ರಸ್ತುತ ದಿನಮಾನಗಳಲ್ಲಿ ಬೇಡರು ತಮ್ಮ ಸಂಸ್ಕೃತಿಗೆ ಧಕ್ಕೆಯನ್ನು ತಂದುಕೊಳ್ಳುತ್ತಿದ್ದಾರೆ.

ಲೌಕಿಕ ಜೀವನಕ್ಕೆ ಮಾರುಹೋಗುತ್ತಿರುವ ಇಂದಿನ ಬೇಡ ಯುವಕ ಯುವತಿಯರು ತಮ್ಮ ಶ್ರೇಷ್ಠ ಸಂಸ್ಕೃತಿಯನ್ನು ಮರೆಯುತ್ತಿದ್ದಾರೆ. ಸವಾಜದ ಬದಲಾವಣೆಗೆ ಹೊಂದಿಕೊಂಡಿರುವ ಸಗರನಾಡಿನ ಬೇಡರು ತಮ್ಮ ಆಚರಣೆಗಳಲ್ಲಿರುವ ಕಳೆಯನ್ನು ಕಳೆದುಕೊಳ್ಳುತ್ತಿದ್ದಾರೆ. ಬೇಡರ ಕಟ್ಟು-ಪಾಡುಗಳು, ವಿಧಿ-ವಿಧಾನಗಳು, ನೀತಿ-ನಿಯಮಗಳು, ವಿಧಿ-ನಿಷೇಧಗಳು ನಶಿಸಿಹೋಗುತ್ತಿರುವುದು ದುರದೃಷ್ಟಕರ ಸಂಗತಿ. ಇಂದಿನ ಬೇಡರಿಗೆ ತಮ್ಮ ಮೂಲ ಸಂಸ್ಕೃತಿ ಯಾವುದು, ಸಂಸ್ಕೃತಿ ಎಂದರೇನು? ಧರ್ಮ ಎಂದರೇನು? ಧಾರ್ಮಿಕ ಆಚರಣೆಗಳು ಎಂದರೇನು? ಪೂಜೆ, ಜಪ-ತಪ ಇವುಗಳ ಬಗ್ಗೆ ತಿಳುವಳಿಕೆ ಇಲ್ಲದಂತಾಗಿದೆ. ತಂದೆ-ತಾಯಿ, ಸಹೋದರ ಸಹೋದರಿ ರಕ್ತ ಸಂಬಂಧ, ಐಕ್ಯತೆ ಒಗ್ಗಟ್ಟು ಇವುಗಳ ಬಗ್ಗೆ ಆಸಕ್ತಿ ಕಡಿಮೆಯಾಗುತ್ತಿದೆ. ಆದರೆ ಕೆಲವು ಸಂಪ್ರದಾಯ ಪಂಥ ಬೇಡ ಕುಟುಂಬಗಳು ಮಾತ್ರ ಇಂದಿಗೂ ತಮ್ಮ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬರುತ್ತಿರುವುದು ಸಂತೋಷಕರವಾದ ಸಂಗತಿ ಎಂದು ಹೇಳಬಹುದು.

### ೫.೫ ಸಗರ ನಾಡಿನ ಬೇಡ ಸಮುದಾಯದವರ ಹುಟ್ಟು ಮತ್ತು ಸಾವಿನ ಸಂಸ್ಕಾರಗಳು

ಬೇಡರು ಹುಟ್ಟು ಸಾವುಗಳನ್ನು ಸಂಸ್ಕಾರ ಸಹಿತವಾಗಿ ಮಾಡುತ್ತಾರೆ. ಜಗತ್ತಿನಲ್ಲಿ ಸಾಕಷ್ಟು ಬದಲಾವಣೆಗಳು ಆದರೂ ಸಂಸ್ಕಾರಗಳಲ್ಲಿ ಬದಲಾವಣೆಯಾಗಿಲ್ಲ ಎಂದು ಹೇಳಬಹುದು. ಪದ್ಧತಿ ಆಚಾರ ವಿಚಾರ ನೀತಿ ನಿಯಮ ಸಂಪ್ರದಾಯ ಇವುಗಳನ್ನು ಮರೆತರೆ ಪ್ರಾಣಿಗಳಿಗೆ ಸಮ ಎಂಬ ಮನೋಭಾವನೆ ಬೇಡರಲ್ಲಿದೆ. ಎಷ್ಟೇ ಕಷ್ಟ ನಷ್ಟ ಬಂದರೂ ಸಂಸ್ಕಾರವನ್ನು ಬಿಡುವುದಿಲ್ಲ. ಸಾಲ ಮಾಡಿಯಾದರೂ ತುಪ್ಪ ತಿನ್ನು ಎನ್ನುವ ಗಾದೆ ಮಾತಿನಂತೆ ಸಾಲ ಮಾಡಿಯಾದರೂ ಸಂಸ್ಕಾರದ ಆಚರಣೆಗಳನ್ನು ಮಾಡುತ್ತಾರೆ.

**ಹುಟ್ಟಿನ ಸಂಸ್ಕಾರಗಳು:**

**ಜಾತಕರ್ಮ:** 'ಬೇಡರ ಮನೆಗಳಲ್ಲಿ ಶಿಶುವು ಜನ್ಮ ತಾಳಿದಾಗ ಅಂದರೆ ನಾಭಿನಾಳ ಛೇದನಕ್ಕೆ ಮೊದಲೇ ಶಿಶುವಿನ ಜನ್ಮದ ಸಂಬಂಧವಾಗಿ ಮಾಡುವ ಸಂಸ್ಕಾರವೇ ಜಾತ ಕರ್ಮವಾಗಿದೆ. ತಂದೆಯಾದವನು ಮಗುವನ್ನು ತನ್ನ ಕುಟುಂಬಕ್ಕೆ ಸ್ವಾಗತಿಸುತ್ತಾ ಮಗುವಿನ ದೀರ್ಘಾಯುಷ್ಯ ಸಮೃದ್ಧಿ ಆರೋಗ್ಯಕ್ಕಾಗಿ ಮಗು ಹುಟ್ಟುವ ೩ ಅಥವಾ ೫ನೇ ದಿನಕ್ಕೆ ಸೂಜಿಯಿಂದ ಚೂಟಿಗಿ (ಬರೆ) ಹಾಕುತ್ತಾರೆ. ಅಂದರೆ ಮಗುವಿಗೆ ಹೊಟ್ಟೆ ಬೇನೆ ಇನ್ನಿತರ ಕಾಯಿಲೆಗಳು ಬರಬಾರದೆಂದು ಚೂಟಿಗೆ ಹಾಕುತ್ತಾರೆ. ಅಲ್ಲದೆ ಹುಟ್ಟಿದ ೩ನೇ ದಿನಕ್ಕೆ ಸೂಲಗಿತ್ತಿ ಮನೆಗೆ ಬಂದು ಗೋಡೆಗೆ ಮನಸ್ಸಿನಲ್ಲಿದ್ದುದ್ದನ್ನು ಬರೆದು ಹೋಗುತ್ತಾಳೆ. ಅಂದರೆ ಇದನ್ನು ಶೆಟಿಗಮ್ಮನ ಬರಹ ಎಂದು ಕರೆಯುತ್ತಾರೆ. ಇದನ್ನು ಆ ಶಿಶುವಿನ ಬ್ರಹ್ಮ ಬರಹ ಎಂದು ನಂಬಿದ್ದಾರೆ.

**ನಾಮಕರಣ:** ಹುಟ್ಟಿದ ಮಗುವಿಗೆ ಹೆಸರನ್ನು ಇಡುವ ಸಂಸ್ಕಾರ ವಿಧಿಯೇ ನಾಮಕರಣ. ಇಂದು ಬೇಡರು ಮಕ್ಕಳಿಗೆ ಹೆಸರು ಇಡುವ ಕ್ರಿಯಾ ವಿಧಿಯನ್ನು ಪವಿತ್ರ ವಿಧಿಯಾಗಿಸಿದ್ದಾರೆ. ಮಗು ಹುಟ್ಟಿದ ೯, ೧೬, ೨೧ ಹಾಗೂ ೩ ತಿಂಗಳು ಆದ ನಂತರ ಮಗುವನ್ನು ತೊಟ್ಟಿಲಲ್ಲಿ ಹಾಕಿ ನಾಮಕರಣ ಅಥವಾ ಹೆಸರನ್ನು ಇಡುತ್ತಾರೆ. ಮಗು ಹುಟ್ಟಿದ ನಕ್ಷತ್ರ ರಾಶಿ ಫಳಿಗೆ ಮತ್ತಿತರ ಜ್ಯೋತಿಶಾಸ್ತ್ರ ಸಂಬಂಧವಾದ ವಿಚಾರಗಳನ್ನು ಪರಿಶೀಲಿಸಿ ಅದಕ್ಕೆ ಅನುಸಾರವಾಗಿ ಹೆಸರನ್ನು ಇಡುತ್ತಾರೆ. ಹೆಚ್ಚಾಗಿ ದೇವರ ಹೆಸರುಗಳನ್ನು ಮನೆಯ ಹಿರಿಯರ ಹೆಸರುಗಳನ್ನು ಇಡುವುದು ಇವರಲ್ಲಿ ಸಾಮಾನ್ಯವಾಗಿದೆ.

**ಚೌಲ ಕರ್ಮ:**

'ಸಗರನಾಡಿನ ಬೇಡರು ತಮ್ಮ ಮನೆಯಲ್ಲಿ ಮಗು ಜನಿಸಿ ೩ ಅಥವಾ ೫ ವರ್ಷಗಳಾದ ನಂತರ ಮಗುವಿಗೆ ತಲೆ ಕೂದಲುಗಳನ್ನು ಪ್ರಥಮ ಬಾರಿಗೆ ಕತ್ತರಿಸುತ್ತಾರೆ. ಇದನ್ನು ಚೌಲ ಕರ್ಮ ಸಂಸ್ಕಾರ ಎನ್ನುತ್ತಾರೆ. ಸುದೀರ್ಘವಾದ ಆಯಸ್ಸು ಹಾಗೂ ಸೌಂದರ್ಯದ ದೃಷ್ಟಿಯಿಂದ ಈ ಸಂಸ್ಕಾರ ಅಗತ್ಯ. ತಮ್ಮ ತಮ್ಮ ಮನೆ ದೇವರುಗಳ ದೇವಸ್ಥಾನ ಅಥವಾ ಅವರು ಬೇಡಿಕೊಂಡಂತಹ ದೇವಸ್ಥಾನಗಳಲ್ಲಿ ಸಂಬಂಧಿಕರನ್ನು ಕರೆಯಿಸಿ ಈ ಚೌಲ ಕಾರ್ಯಕ್ರಮವನ್ನು ಮಾಡಿ ಸಿಹಿ ಊಟ ಹಾಕಿಸುತ್ತಾರೆ.

**ಕರ್ಣ ಛೇದ:**

ಬೇಡರಲ್ಲಿ ಮಕ್ಕಳಿಗೆ ಕಿವಿಯನ್ನು ಚುಚ್ಚಿ ಆಭರಣ ತೊಡಿಸುವುದು ಸಾಮಾನ್ಯ. ಈ ಸಂಸ್ಕಾರವನ್ನು ಕರ್ಣ ಛೇದನ ಎಂದು ಕರೆಯುತ್ತಾರೆ. ಕಿವಿ ಚುಚ್ಚುವುದರಿಂದ ಅಂಡವಾಯು ಮತ್ತು ನೀರಿನಿಂದ ತುಂಬಿದ ಬಾವು ಇತ್ಯಾದಿ ಕೆಲವು ರೋಗಗಳು ಬರುವುದಿಲ್ಲ ಎನ್ನಲಾಗಿದೆ. ಹೀಗೆ ಹುಟ್ಟಿನಿಂದ ಯೌವನಾವಸ್ಥೆಯವರೆಗೆ ಬಾಲ್ಯ ಸಂಸ್ಕಾರಗಳ ಜೊತೆಗೆ ಬೇಡರು ಮಕ್ಕಳನ್ನು ನಾಗರಿಕರನ್ನಾಗಿ ಮಾಡಲು ಶಾಲೆ ಕಾಲೇಜುಗಳಿಗೆ ಕಳುಹಿಸಿ ಸಂಸ್ಕಾರವಂತರನ್ನಾಗಿ

ಮಾಡುತ್ತಾರೆ. ಇಂದಿಗೂ ಕೂಡಾ ಈ ಮೇಲಿನ ಸಂಸ್ಕಾರ ವಿಧಿಗಳನ್ನು ಮಾಡುತ್ತಾ ಬರುತ್ತಿದ್ದಾರೆ. ಹಿಂದೂ ಧರ್ಮದಲ್ಲಿ ಹಲವಾರು ಸಂಸ್ಕಾರ ವಿಧಿಗಳು ಇದ್ದರೆ ಕೆಲವು ಸಂಸ್ಕಾರ ವಿಧಿಗಳು ಮಾತ್ರ ಪ್ರಚಲಿತದಲ್ಲಿವೆ.'[೧೪]

**ಮರಣ ಸಂಸ್ಕಾರ:** ತನ್ನ ಜೀವಮಾನದ ಪರ್ಯಂತ ಹಲವಾರು ಸಂಸ್ಕಾರಗಳನ್ನು ಆಚರಿಸುತ್ತಾ ಬಂದಾತನ ಅಂತ್ಯ ಕ್ರಿಯೆಯನ್ನು ಬಂಧುವರ್ಗ ಸೇರಿ ಆತನ ಮರಣದ ನಂತರ ವಿಧಿವತ್ತಾಗಿ ನಡೆಸಿ ಆತನಿಗೆ ಮುಂದೆ ಆಧ್ಯಾತ್ಮಿಕ ಸುಖ ಪ್ರಾಪ್ತವಾಗಲೆಂದು ಹಾರೈಸುತ್ತಾರೆ. ಮರಣವು ದೇಹಕ್ಕೆ ಬರುವುದು ಹೊರತು ಆತ್ಮಕ್ಕಲ್ಲ. ಆತ್ಮ ಅವಿನಾಶಿಯಾದರೆ, ಮರಣದ ನಂತರ ಜೀವಾತ್ಮನು ತನ್ನ ಸೂಕ್ಷ್ಮ ಶರೀರದಿಂದೊಡಗೂಡಿರುತ್ತಾನೆ. ಇದು ಹಿಂದು ಬೇಡರ ನಂಬಿಕೆ. ಆದ್ದರಿಂದ ಜೀವಿಯ ಮರಣೋತ್ತರದಲ್ಲಿ ಕೂಡಾ ಕೆಲವು ಸಂಸ್ಕಾರಗಳನ್ನು ಮಾಡಬೇಕಾಗಿದ್ದು ಅದು ಜೀವಿಯ ಸದ್ಗತಿಯ ಪ್ರಾಪ್ತಿಗೆ ಸಹಾಯಕವಾಗುವ ಸಂಸ್ಕಾರಗಳಾಗಿವೆ. ಪ್ಯಾಪ್ಲಿ ಬೆಡಗಿನವರಿಗೆ ಕೌದಿ ಅಥವಾ ಜಮಖಾನೆಯಲ್ಲಿ ಶವವನ್ನು ಸಾಗಿಸಿ ಸ್ಮಶಾನದಲ್ಲಿ ಸುಡುತ್ತಾರೆ. ಗೋಸಲವಂಶದವರಿಗೆ ಬಿದಿರು ಸದಿಗೆಯ ಮೇಲೆ ಶವವನ್ನು ಸಾಗಿಸುತ್ತಾರೆ.

**ಮರಣ ಹೊಂದಿದ ವ್ಯಕ್ತಿಗಳ ದಿವಸ ಕಾರ್ಯಗಳು: (ತಿಥಿ)**

**೩ ದಿನದ ದಿವಸದ ತಿಥಿ:** 'ಬೇಡರಲ್ಲಿ ಈ ಪದ್ಧತಿಯನ್ನು ೩ ದಿವಸದ ಕೂಳು ಎಂದು ಕರೆಯುತ್ತಾರೆ. ಬೇಡರ ಮನೆಯಲ್ಲಿ ಮರಣ ಹೊಂದಿದ ವ್ಯಕ್ತಿಗೆ ಸಂಬಂಧಿಕರೆಲ್ಲರೂ ಕೂಡಿ ೩ ದಿನಕ್ಕೆ ಕುರಿ ಅಥವಾ ಮೇಕೆಯನ್ನು ಬಲಿ ಕೊಟ್ಟು ಆ ವ್ಯಕ್ತಿಗೆ ಪಡಿ ಮಾಡಿ (ನೈವೆದ್ಯ) ಲೋಬಾನ ಹಾಕಿ ಪೂಜೆಯನ್ನು ಮಾಡುತ್ತಾರೆ.

**೧೧ ಅಥವಾ ೧೩ ದಿವಸದ ತಿಥಿ:** ಸಗರನಾಡಿನ ಬೇಡರು ಗೋಸಲ ವಂಶಕ್ಕೆ ಗುಜ್ಜಲ ವಂಶಕ್ಕೆ ಸೇರಿದವರು. ೧೩ ದಿನದ ದಿವಸ ಮಾಡಿದರೆ ಪ್ಯಾಪ್ಲಿ ವಂಶದವರು ೧೧ ದಿನದ ದಿವಸವನ್ನು ಮಾಡುತ್ತಾರೆ. ಈ ದಿವಸದ ಸಂದರ್ಭದಲ್ಲಿ ರಕ್ತ ಸಂಬಂಧಿಗಳನ್ನು, ಸ್ನೇಹಿತರನ್ನು, ಬಂಧು ಬಾಂಧವರನ್ನು ಕರೆದು ಮರಣ ಹೊಂದಿದ ವ್ಯಕ್ತಿಯ ಭಾವಚಿತ್ರವಿಟ್ಟು ಪೂಜೆ ಮಾಡಿ ಕಾಯಿ ಒಡೆದು ಲೋಬಾನ ಹಾಕಿದ ನಂತರ ಎಲ್ಲರಿಗೂ ತಿಥಿ ಊಟವನ್ನು ಹಾಕಿಸುತ್ತಾರೆ. ಬೆಳಿಗ್ಗೆ ೧೦ ಗಂಟೆಯ ಸಮಯ ಆ ವ್ಯಕ್ತಿಗೆ ಸಂಬಂಧಪಟ್ಟವರು ತಲೆ ತಲಾಂತರ ಹೆಸರುಗಳನ್ನು ಕರೆಯುವುದರ ಮೂಲಕ ಪಿಂಡವನ್ನು ಬಿಡುತ್ತಾರೆ. ನಂತರ ರಾತ್ರಿ ಲೋಬಾನ ಹಾಕುತ್ತಾರೆ.'[೧೫]

**ಅಡಿಟಿಪ್ಪಣಿ**

೧. ಚ.ನ. ಶಂಕರರಾವ್, ೨೦೧೧-೧೨, ಸಮಾಜಶಾಸ್ತ್ರ ಪುಸ್ತಕ, ಪು.ಸಂ. ೨೦೮.

೨. ಅದೇ, ಪು.ಸಂ. ೪೭.

೩. ವಿವೇಕ ಪ್ರಕಾಶನ, ೨೦೧೩, ಹಿಂದು ಹಬ್ಬ ಹರಿದಿನಗಳು ಪುಸ್ತಕ, ಪು.ಸಂ. ೩೬

೪. ಅದೇ, ಪು.ಸಂ. ೩೭

೫. ಅದೇ, ಪು.ಸಂ. ೩೯

೬. ಅದೇ, ಪು.ಸಂ. ೪೬

೭. ಕೆ.ಅಜಿತಪ್ರಭು, ೨೦೧೨, ಶ್ರೀಗಣೇಶ ಕೈಪಿಡಿ, ಪು.ಸಂ. ೩

೮. ವಿವೇಕ ಪ್ರಕಾಶನ, ೨೦೧೩, ಹಿಂದು ಹಬ್ಬ ಹರಿದಿನ, ಪು.ಸಂ. ೪೯

೯. ಅದೇ, ಪು.ಸಂ. ೫೧

೧೦. ಅದೇ, ಪು.ಸಂ. ೪೬

೧೧. ಅದೇ, ಪು.ಸಂ. ೪೪

೧೨. ಅದೇ, ಪು.ಸಂ. ೫೭

೧೩. ಬೇಡ ವಕ್ತೃದಾರರಿಂದ ಮಾಹಿತಿ ಸಂಗ್ರಹ

೧೪. ಚ.ನ. ಶಂಕರರಾವ್, ೨೦೧೧-೧೨, ಸಮಾಜಶಾಸ್ತ್ರ ಪುಸ್ತಕ, ಪು.ಸಂ. ೨೦೯.

೧೫. ವಕ್ತೃದಾರರಿಂದ ಮಾಹಿತಿ ಸಂಗ್ರಹ.

## ಅಧ್ಯಾಯ ೬

## ಸಗರನಾಡಿನ ಬೇಡ ಸಮುದಾಯದ ಆರ್ಥಿಕ ಜೀವನ

೧. ಸಗರನಾಡಿನ ಸುರಪುರ, ಶಹಾಪುರ, ಜೇವರ್ಗಿ ತಾಲೂಕುಗಳ ಬೇಡ ಸಮುದಾಯದ ಆರ್ಥಿಕ ಜೀವನ

೨. ಸಗರನಾಡಿನ ಬೇಡರು ಆರ್ಥಿಕವಾಗಿ ಹಿಂದುಳಿದಿರುವುದಕ್ಕೆ ಕಾರಣಗಳು

೩. ಸಗರನಾಡಿನ ಬೇಡರು ಆರ್ಥಿಕವಾಗಿ ಸಬಲರಾಗಿರುವುದಕ್ಕೆ ಕಾರಣಗಳು

೪. ಬೇಡ ಸಮುದಾಯದವರ ಆರ್ಥಿಕ ಅಭಿವೃದ್ಧಿಗಾಗಿ ಸರ್ಕಾರದ ವಿವಿಧ ಸೌಲಭ್ಯಗಳು ಮತ್ತು ಯೋಜನೆಗಳು

೫. ಸಗರನಾಡಿನ ಬೇಡರ ಆರ್ಥಿಕ, ಶೈಕ್ಷಣಿಕ ಅಂಕಿ ಸಂಖ್ಯೆಗಳ ಪಟ್ಟಿ

## ಅಧ್ಯಾಯ ೬

## ಸಗರನಾಡಿನ ಬೇಡ ಸಮುದಾಯದ ಆರ್ಥಿಕ ಜೀವನ

ಮಾನವನು ತನ್ನ ಜೀವನ ಪರ್ಯಂತ ಒಂದಲ್ಲ ಒಂದು ಬಗೆಯ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿರುತ್ತಾನೆ. ತನ್ನ ಭೌತಿಕ ಅಗತ್ಯತೆಗಳ ಪೂರೈಕೆಗಾಗಿ ಆಹಾರ, ಬಟ್ಟೆ, ಮತ್ತು ವಸತಿಗಳನ್ನು ಪಡೆಯುವುದಕ್ಕಾಗಿ ತಾನು ಬಯಸುವ ಆಸ್ತಿ ಹಾಗೂ ಸಂಪತ್ತಿನ ಸಂಪಾದನೆಗಾಗಿ ಮಾನವನು ತನ್ನನ್ನು ತೊಡಗಿಸಿಕೊಳ್ಳುವ ಚಟುವಟಿಕೆಗಳನ್ನು ಆರ್ಥಿಕ ಚಟುವಟಿಕೆಗಳು ಎನ್ನಬಹುದು. ಮಾನವನು ಭೌತಿಕ ಅಗತ್ಯಗಳು ಆತನ ಅಸ್ತಿತ್ವದ ಅವಿಭಾಜ್ಯ ಅಂಗವಾಗಿರುವಂತೆ ಈ ಅಗತ್ಯತೆಗಳ ಪೂರೈಕೆಯ ಆರ್ಥಿಕ ಚಟುವಟಿಕೆಗಳೂ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಕಾಲಾನುಕ್ರಮದಲ್ಲಿ ಈ ಅಗತ್ಯತೆಗಳ ಪೂರೈಕೆಯ ಪರಿಶ್ರಮದೊಂದಿಗೆ ಕೆಲವು ಆಚರಣೆಗಳು ಬೆಳೆದು ಬಂದವು. ಈ ಆಚರಣೆಗಳು ಒಂದು ಸ್ಥಾಪಿತ ಸ್ವರೂಪವನ್ನು ಕಳೆದುಕೊಂಡು ಕ್ರಮೇಣ ಆರ್ಥಿಕ ಸಂಸ್ಥೆಗಳಾಗಿ ರೂಪಾಂತರಗೊಂಡಿವೆ. ಈ ಆರ್ಥಿಕ ಸಂಸ್ಥೆಗಳು ನಮ್ಮ ಸಮೂಹ ಜೀವನದ ಅನಿವಾರ್ಯ ಅಂಶಗಳಾಗಿ ಸೇರಿಕೊಂಡಿವೆ. ನಮ್ಮ ಸಮೂಹ ಜೀವನವು ಸಾಮಾಜಿಕ ಸಂಸ್ಥೆಗಳ ಹಿಡಿತಕ್ಕೆ ಸಿಲುಕಿರುವಂತೆ ಆರ್ಥಿಕ ಸಂಸ್ಥೆಗಳ ನಿಯಂತ್ರಣಕ್ಕೂ ಒಳಪಟ್ಟಿದೆ. ಅಂತೆಯೇ ಮಾನವನು ಕೇವಲ ಸಮೂಹ ಜೀವಿಯಲ್ಲ ಆರ್ಥಿಕ ಜೀವಿಯೂ ಹೌದು.

ಎಲ್ಲಾ ಸಮಾಜಗಳ ಜನರು ಕೂಡಾ ತಮ್ಮ ಅನುಭವದ ಮೂಲಕ ಕೆಲವೊಂದು ವಸ್ತುಗಳು ಮತ್ತು ಸೇವೆಗಳ (goods and services) ಅಗತ್ಯತೆಯನ್ನು ಕಂಡುಕೊಳ್ಳುವುದು ತೀರಾ ಸಹಜ. ಒಂದು ಸಮಾಜದಲ್ಲಿ ಬಿಲ್ಲು ಮತ್ತು ಬಾಣಗಳೆಂಬ ವಸ್ತುಗಳ ಮತ್ತು ಮಾಂತ್ರಿಕ ಶಕ್ತಿಯ ವೈದ್ಯನೊಬ್ಬನ ಸೇವೆಯ ಅಗತ್ಯವಿದ್ದರೆ, ಮತ್ತೊಂದು ಸಮಾಜದಲ್ಲಿ ಒಂದು ಕಂಪ್ಯೂಟರ್ ಸೆಟ್ ಮತ್ತು ತಂತ್ರಜ್ಞಾನಿಯೊಬ್ಬನ ನೈಪುಣ್ಯದ ಅಗತ್ಯತೆ ತಲೆದೋರಬಹುದು. ಈ ತೆರನಾದ ಅಗತ್ಯತೆಗಳು ಜೈವಿಕವಾಗಿ ನಿರ್ಧಾರಿತ ವಾದವುಗಳಾಗಿರಬಹುದು. ಅಥವಾ ಸಾಮಾಜಿಕವಾಗಿ ಯೋಗ್ಯವಾದವು ಗಳೆಂದು

ನಿರ್ಧಾರಿತವಾದವುಗಳಿರಬಹುದು. ಅವುಗಳನ್ನು ಮಾನವ ಶ್ರಮದಿಂದ ಮಾತ್ರ ಪೂರೈಕೆ ಮಾಡಲು ಸಾಧ್ಯ. ಜನರು ಬಯಸುವ ಕೆಲವು ವಸ್ತುಗಳು [ಉದಾಹರಣೆಗೆ ನಾವು ಸೇವಿಸುವ ಗಾಳಿ] ಬೇಕಾದ ಪ್ರಮಾಣದಲ್ಲಿ ದೊರೆಯಬಹುದು. ಹಾಗೆಯೇ ಜನರು ಇಚ್ಛಿಸುವ ಕೆಲವು ಬಗೆಯ ವೈಯಕ್ತಿಕ ಸೇವೆಗಳು ಕೂಡಾ ಉದಾಹರಣೆಗೆ ಚಿಕ್ಕ ಮಕ್ಕಳು ತಾಯಂದಿರಿಂದ ಪಡೆಯುವ ಪ್ರೀತಿ-ವಾತ್ಸಲ್ಯ (Love and affection) ಮುಖ್ಯವಾಗಿ ಲಭಿಸಬಹುದು. ಆದರೆ ಹೆಚ್ಚಿನ ಎಲ್ಲಾ ಬಗೆಯ ವಸ್ತುಗಳು ಮತ್ತು ಸೇವೆಗಳು ಪೂರೈಕೆಯಲ್ಲಿ ಬಹಳ ಸೀಮಿತವಾಗಿವೆ. ಅವುಗಳನ್ನು ಉತ್ಪಾದಿಸಲು ಮತ್ತು ಸಮಾಜದ ಸದಸ್ಯರುಗಳಿಗೆ ಹಂಚಲು ಪರಿಶ್ರಮಿಸುವುದು ಅನಿವಾರ್ಯವಾಗುವುದು. ಇಂತಹ ಪರಿಶ್ರಮದಿಂದ ಕೂಡಿದ ಚಟುವಟಿಕೆಯೇ ನಮ್ಮ ಆರ್ಥಿಕ ಜೀವನದ ತಿರುಳು.

ಮಾನವನ ಆರ್ಥಿಕ ಚಟುವಟಿಕೆಗಳು ವ್ಯವಸಾಯ, ಕೈಗಾರಿಕೆ, ಸಾರಿಗೆ ಮತ್ತು ಸಂಪರ್ಕ, ಹಂಚಿಕೆಯ ಏರ್ಪಾಟು, ಹಣ ಸಂಪಾದನೆ, ಸಂಪತಿನ ಸೃಷ್ಟಿ ಮುಂತಾದ ಅನೇಕ ಅಂಶಗಳನ್ನು ಒಳಗೊಂಡಿದೆ. ಸೂಕ್ಷ್ಮವಾಗಿ ಹೇಳುವುದಾದರೆ ಆರ್ಥಿಕ ಚಟುವಟಿಕೆಗಳು ಮುಖ್ಯವಾಗಿ ಸಂಪತ್ತಿನ ಸುತ್ತ ಹೆಣೆಯಲ್ಪಟ್ಟಿದ್ದು ಸಂಪತ್ತಿನ ಉತ್ಪಾದನೆ, ಸಂಗ್ರಹಣೆ, ಹಂಚಿಕೆ ಮತ್ತು ಉಪಭೋಗ ಇವುಗಳಿಗೆ ಸಂಬಂಧಿಸಿದವುಗಳಾಗಿವೆ. ಈ ಚಟುವಟಿಕೆಗಳು ಬಹು ಮುಖ್ಯವಾದವುಗಳು, ಬಹುರೂಪದವುಗಳು ಮತ್ತು ಸಂಕೀರ್ಣ ಸ್ವರೂಪದವುಗಳಾಗಿದ್ದು ಅವುಗಳ ಒಪ್ಪಂದವನ್ನು ಒಂದು ವ್ಯವಸ್ಥೆ ಎನ್ನಬಹುದಾಗಿದೆ.

ಸಗರನಾಡಿನಲ್ಲಿ ಬೇಡ ಸಮುದಾಯ ತನ್ನದೇ ಆದ ಐತಿಹಾಸಿಕ ಭವ್ಯ ಪರಂಪರೆಯನ್ನು ಹೊಂದಿದೆ. ಈ ನಾಡಿನ ಸುರಪುರ ಶಹಾಪುರ ಜೇವರ್ಗಿ ತಾಲೂಕುಗಳಲ್ಲಿ ಅಲ್ಲದೇ ಕಕ್ಕೇರಿ, ಹುಣಸಗಿ, ಕೆಂಭಾವಿ, ಸಗರ, ತಿಂಥಣಿ ಗ್ರಾಮಗಳಲ್ಲಿ ಹಾಗೂ ಗ್ರಾಮಗಳಿಗೆ ಹೊಂದಿಕೊಂಡಿರುವ ಗಡ್ಡಿ (ದೊಡ್ಡಿ)ಗಳಲ್ಲಿ ಬೇಡರು ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಆಧುನಿಕ ಜೀವನದ ಸವಾಲುಗಳನ್ನು ಎದುರಿಸಿ ಬದುಕಲು ಬೇಕಾಗಿರುವ ಸ್ಥಿತಿಗತಿಯಲ್ಲಿ ತುಂಬಾ ದುರ್ಬಲರಾಗಿದ್ದಾರೆ ಎಂದು ಹೇಳಬಹುದು. ಇದಕ್ಕೆ ಮುಖ್ಯ ಕಾರಣವೆಂದರೆ ಅನಾದಿಕಾಲದಿಂದಲೂ ಬೇಡ ಸಮುದಾಯ ನಾಡಿನಿಂದ ದೂರ ಉಳಿದು ಅರಣ್ಯ ಪ್ರದೇಶಗಳಲ್ಲಿ ತಮ್ಮದೇಯಾದ ಆಚಾರ ವಿಚಾರ ಸಂಪ್ರದಾಯಗಳನ್ನು ರೂಢಿಸಿಕೊಂಡು ತಮ್ಮ ಜೀವನೋಪಾಯಕ್ಕೆ ಬೇಟೆಯನ್ನು ಆಡುತ್ತಾ ಪಶು ಸಂಗೋಪನೆಯನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದರು. ಅರಣ್ಯಗಳು ನಾಶ ಹೊಂದಿದಂತೆಲ್ಲಾ ಬೇಡರು ನಾಡಿನೊಂದಿಗೆ ಸಂಪರ್ಕ ಬೆಳೆಸಿಕೊಂಡು ಬದುಕುವುದು ಅನಿವಾರ್ಯವಾಯಿತು. ತಮ್ಮದೇ ಆದ ಜೀವನ ಮೌಲ್ಯಗಳ ನೆಲೆಯಲ್ಲಿ ಸ್ವಾವಲಂಬಿ ಬದುಕನ್ನು ಬದುಕಿದ ಬೇಡರು ಶಿಕ್ಷಣ ಬಂಡವಾಳ ವ್ಯವಹಾರ ಜ್ಞಾನ ಮುಂತಾದವುಗಳಲ್ಲಿ ಪರಿಣಿತಿಯನ್ನು ಹೊಂದಿದವರಲ್ಲ. ಆರ್ಥಿಕತೆಯ ಬಲ ಸಂವರ್ಧನೆ ಪೂರಕವಾದ ಕೃಷಿ ಶಿಕ್ಷಣ ವಾಣಿಜ್ಯ ವ್ಯಾಪಾರ ಉದ್ಯೋಗ

ಮುಂತಾದವುಗಳಲ್ಲಿ ಬೇಡ ಸಮುದಾಯ ಹಿಂದುಳಿದಿದೆ. ಆದ್ದರಿಂದ ಸಗರನಾಡಿನ ಗ್ರಾಮಗಳಲ್ಲಿ ವಾಸಿಸುವ ಬೇಡರು ಆಹಾರ ವಸತಿ ಶಿಕ್ಷಣ ಆರೋಗ್ಯ ಮುಂತಾದ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.ಸಗರನಾಡಿನಲ್ಲಿ ಬೆರಳಣಿಕೆಯಷ್ಟು ಬೇಡರು ಮಾತ್ರ ಆರ್ಥಿಕವಾಗಿ ಸದೃಢರಾದರೆ ಬಹುತೇಕ ಬೇಡರು ಬಡವರಿಗೆ ಇನ್ನು ಗುಡಿಸಲು ಟಿನ್ ಮನೆಗಳಲ್ಲಿ ವಾಸವಾಗಿರುವುದನ್ನು ಕಾಣಬಹುದು. ಸರ್ಕಾರ ಎಷ್ಟೇ ಆರ್ಥಿಕ ಸೌಲಭ್ಯಗಳನ್ನು ನೀಡಿದರೂ ಅವುಗಳನ್ನು ಸದುಪಯೋಗ ಪಡಿಸಿಕೊಳ್ಳಲಾಗದೇ ವಂಚಿತರಾಗುತ್ತಿದ್ದಾರೆ. ಬೇಡರ ಸಾಮಾಜಿಕ ಜೀವನ ಕ್ರಮ ಆರ್ಥಿಕವಾಗಿ ಇವರು ಅನುಭವಿಸುತ್ತಿರುವ ನೋವುಗಳನ್ನು ಅವಲೋಕಿಸಿದಾಗ ಸಗರನಾಡಿನ ಸುರಪುರ ಶಹಾಪೂರ ಜೇವರ್ಗಿ ಮತ್ತು ಗ್ರಾಮಗಳಲ್ಲಿನ ಆರ್ಥಿಕ ಸ್ಥಿತಿಗತಿಯನ್ನು ಸ್ಪಷ್ಟವಾಗಿ ತಿಳಿಯಬಹುದು.

**೬.೧ ಸಗರನಾಡಿನ ಸುರಪುರ, ಶಹಾಪುರ, ಜೇವರ್ಗಿ ತಾಲೂಕುಗಳ ಬೇಡ ಸಮುದಾಯದ ಆರ್ಥಿಕ ಜೀವನ:**

**ಸುರಪುರ ತಾಲೂಕಿನ ಬೇಡರ ಆರ್ಥಿಕ ಜೀವನ**

ಸುರಪುರ ತಾಲೂಕಿನ ಬೇಡರು ಆರ್ಥಿಕವಾಗಿ ಹಿಂದುಳಿದಿರುವುದನ್ನು ನೋಡಬಹುದು. ಕೆಲವು ರಾಜ ವಂಶಕ್ಕೆ ಸೇರಿದ ಮನೆತನಗಳು ಮತ್ತು ಜಾಗಿರದಾರ ಮನೆತನಗಳ ಗೌಡರ ಮನೆತನಗಳು ಮಾತ್ರ ಆರ್ಥಿಕವಾಗಿ ಸುಸ್ಥಿತಿಯಲ್ಲಿರುವುದನ್ನು ಕಾಣುತ್ತೇವೆ. ಆದರೆ ಗ್ರಾಮಗಳಲ್ಲಿ ವಾಸಿಸುವ ಬೇಡರು ಇವತ್ತಿಗೂ ಗುಡಿಸಲುಗಳಲ್ಲಿ ಜಂತಿಮನೆಗಳಲ್ಲಿ ವಾಸವಾಗಿದ್ದು ಒಂದು ಒಪ್ಪತ್ತಿನ ಊಟಕ್ಕಾಗಿ ಕೂಲಿ-ನಾಲಿ ಮಾಡುವ ಪರಿಸ್ಥಿತಿ ಇದೆ. ಸುರಪುರದಲ್ಲಿ ಬಹುತೇಕ ಬೇಡರು ತಮ್ಮ ಉಪಜೀವನಕ್ಕಾಗಿ ವಿವಿಧ ಆರ್ಥಿಕ ಚಟುವಟಿಕೆಗಳಲ್ಲಿ, ವೃತ್ತಿಗಳಲ್ಲಿ ತೊಡಗಿದ್ದಾರೆ.

**ಕೃಷಿ ಅಥವಾ ವ್ಯವಸಾಯ:**

'ಸಗರನಾಡಿನ ಸುರಪುರ ತಾಲೂಕಿನಲ್ಲಿ ಪ್ರಧಾನವಾಗಿ ಕೃಷಿಯು ಆರ್ಥಿಕತೆಯಿಂದ ಕೂಡಿದೆ. ಈ ಮೊದಲು ೨೦೦೫ರ ಹಿಂದೆ ಬಹಳಷ್ಟು ಒಣಭೂಮಿ ಬೇಸಾಯದಿಂದ ಕೂಡಿತ್ತು. ಆದರೆ ಈಗ ಅಂದರೆ ೨೦೦೫-೦೬ರಿಂದೀಚೆಗೆ ಶೇ. ೭೦%ರಷ್ಟು ಕೃಷಿಭೂಮಿ ನೀರಾವರಿಯಿಂದ ಕೂಡಿದೆ. ನೀರಾವರಿ ಪ್ರದೇಶವು ವಿಸ್ತರಣೆಗೊಳ್ಳಲು ಕಾರಣವಾದ ಸಂಗತಿ ಎಂದರೆ ಕೃಷಿ ಮೇಲ್ದಂಡೆ ಯೋಜನೆ ಇದು ಸುರಪುರ ತಾಲೂಕಿಗೆ ಅನುಕೂಲ ಮಾಡಿಕೊಟ್ಟಿದೆ. ಬಾವಿಗಳಿಂದ ಸುಮಾರು ಶೇ. ೧೫% ರಷ್ಟು ಭೂಮಿಗೆ ನೀರಾವರಿ ಒದಗಿದರೆ ಹಳ್ಳಕೊಳ್ಳಗಳಿಂದ ಶೇ. ೧೫%ರಷ್ಟು ನೀರಾವರಿ ಒದಗಿದೆ. ಆದರೆ ಬೇಸಿಗೆಯಲ್ಲಿ ಬಾವಿಗಳು, ಹಳ್ಳಗಳು, ನದಿಗಳು ಬತ್ತಿ ಹೋಗುವುದರಿಂದ ಕೃಷಿಯ ಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗುತ್ತವೆ. ಇದು ಸುರಪುರ ತಾಲೂಕಿನ ಕೃಷಿಗೆ ಸಂಬಂಧಿಸಿದ

ವಿವರಣೆಯಾಗಿದೆ. ಈ ತಾಲೂಕಿನಲ್ಲಿ ಬಡ ಬೇಡರಿಗೆ ಕೇವಲ ೧ ರಿಂದ ೩ ಎಕರೆ ಕೃಷಿ ಭೂಮಿ ಇದ್ದರೆ ಶ್ರೀಮಂತ ಬೇಡರಿಗೆ ೧೦ ರಿಂದ ೨೦೦ ಎಕರೆಯಷ್ಟು ಕೃಷಿ ಭೂಮಿಗಳಿವೆ. ಇನ್ನು ಕೆಲವರಿಗೆ ಕೃಷಿ ಭೂಮಿಗಳೇ ಇಲ್ಲ. ಇಂಥವರು ಅನಿವಾರ್ಯವಾಗಿ ಬೇರೆಯವರ ಹೊಲ ಗದ್ದೆಗಳಿಗೆ ಭತ್ತ ನಾಟಿ ಮಾಡಲು ಶೇಂಗಾ ಹರಿಯಲು ಹತ್ತಿ ಬಿಡಿಸಲು ಕೂಲಿ ಆಳುಗಳಾಗಿ ಹೋಗುತ್ತಾರೆ.'[೧] ಇಂದು ಬೇಡ ಮಹಿಳೆ ದಿನಕ್ಕೆ ರೂ. ೧೦೦/- ಸಂಪಾದಿಸಿದರೆ ಬೇಡ ಪುರುಷರಾದವರು ದಿನಕ್ಕೆ ೩೦೦/- ರೂಪಾಯಿಗಳನ್ನು ಸಂಪಾದಿಸುತ್ತಾರೆ. ಇವತ್ತಿನ ಬೆಲೆ ಏರಿಕೆ ಪರಿಸ್ಥಿತಿಯಲ್ಲಿ ಇವರ ಸಂಪಾದನೆ ಯಾವುದಕ್ಕೂ ಸಾಲುವುದಿಲ್ಲ. ಇನ್ನು ಕೃಷಿ ಭೂಮಿವುಳ್ಳವರ ಸ್ಥಿತಿಗತಿಯನ್ನು ನೋಡಿದಾಗ ರೈತರು ಭೂ ಮಾಲಿಕರು ಬೆಳೆದಂತಹ ಬೆಳೆಗಳಿಗೆ ಕೆಲವು ಸಲ ಸೂಕ್ತ ಬೆಲೆ ಸಿಕ್ಕರೆ ಇನ್ನೂ ಕೆಲವು ಸಲ ಸೂಕ್ತ ಮಾರುಕಟ್ಟೆಯ ಬೆಲೆ ಸಿಗುವುದಿಲ್ಲ. ಆಗ ಅತಂತ್ರ ಆರ್ಥಿಕ ಪರಿಸ್ಥಿತಿ ನಿರ್ಮಾಣವಾಗುತ್ತದೆ. ೧೦ ರಿಂದ ನೂರಾರು ಎಕರೆ ಕೃಷಿ ಭೂಮಿ ಉಳ್ಳವರು ಆರ್ಥಿಕವಾಗಿ ಸದೃಢರಾಗುತ್ತಿರುವುದನ್ನು ನಾವು ಕಾಣಬಹುದು.

'ಗುಲ್ಬರ್ಗಾ ಗೆಜೇಟಿಯರ್‌ನಲ್ಲಿ ೧೭ನೇಯ ಶತಮಾನದಲ್ಲಿ ಸಗರ ನಾಡಿನ ಸುರಪುರ ತಾಲೂಕು ಎದುರಿಸಿದ ಬರಗಾಲ ಪಟ್ಟಿಯನ್ನು ನೀಡಿದೆ. ಸುರಪುರ ತಾಲೂಕು ಉಗ್ರ ಬರಗಾಲಗಳೆಂದರೆ ೧೬೩೦, ೧೬೫೦, ೧೬೫೯, ೧೬೮೧, ೧೬೮೫, ೧೭೧೩, ೧೭೪೩, ೧೭೪೭, ೧೭೪೯, ೧೭೮೭, ೧೭೯೨, ೧೭೯೩, ೧೮೦೪, ೧೮೧೯, ೧೮೩೩, ೧೮೫೪, ೧೮೭೩, ೧೮೭೭, ೧೮೭೮, ೧೮೯೭, ೧೮೯೯, ೧೯೦೦, ೧೯೦೯, ೧೯೨೨, ೧೯೨೩, ೧೯೩೪, ೧೯೪೫, ೧೯೭೧, ೧೯೮೦ ಈ ಇಸ್ವಿಗಳಲ್ಲಿ ಸುರಪುರ ಪ್ರದೇಶ ಬರಗಾಲವನ್ನು ಎದುರಿಸಿದೆ.'[೨] ಮುಖ್ಯವಾಗಿ ೧೭೯೧ರಲ್ಲಿ ಸಂಭವಿಸಿದ ಬರವನ್ನು ತಲೆ ಬುರುಡೆ ಬರಗಾಲ ಎಂದು ಕರೆಯಲಾಗಿದೆ. ಯಾಕೆಂದರೆ ಆ ಬರಗಾಲದಲ್ಲಿ ಅಪಾರ ಸಂಖ್ಯೆಯಲ್ಲಿ ಬೇಡರನ್ನು ಒಳಗೊಂಡಂತೆ ಎಲ್ಲಾ ಜನರು ಬರಗಾಲಕ್ಕೆ ಬಲಿಯಾದರು. ಪ್ರಸ್ತುತ ೨೦೧೧-೧೨ ಮತ್ತು ೨೦೧೨-೧೩ ಸಾಲಿನಲ್ಲಿಯ ಮಳೆಯ ಕೊರತೆಯಿಂದ ಕೃಷಿ ಚಟುವಟಿಕೆಗಳು ನಿಂತು ಹೋಯಿತು. ಅಲ್ಲದೆ ೨೦೧೫-೧೬ ಬೇಸಿಗೆಯ ಕೊನೆಯಲ್ಲಿ ವಿಪರೀತ ಮಳೆಯ ಜೊತೆಗೆ ಆಣೆಕಲ್ಲುಗಳು ಅಪಾರವಾಗಿ ಬಿದ್ದ ಪರಿಣಾಮವಾಗಿ ಭತ್ತ ಮತ್ತು ಸಜ್ಜೆ ನೆಲಕಚ್ಚಿದವು. ಇದರಿಂದ ಸುಮಾರು ಸಾವಿರರು ಎಕರೆ ಕೃಷಿ ಭೂಮಿ ನಾಶವಾಯಿತು. ಸುರಪುರ ತಾಲೂಕಿನ ಕೃಷಿ ಉತ್ಪಾದನೆ ರಾಜ್ಯ ಮಟ್ಟದಲ್ಲಿನ ಸರಾಸರಿ ಪ್ರಮಾಣಕ್ಕಿಂತ ಕೆಳಮಟ್ಟದಲ್ಲಿದೆ. ಸಾಗುವಳಿ ಪ್ರದೇಶದಲ್ಲಿ ಶೇ. ೭೮.೦೬% ರಷ್ಟು ಆಹಾರ ಬೆಳೆಯುವ ಪ್ರದೇಶವಾಗಿದೆ. ಉದಾ: ಭತ್ತ, ಜೋಳ, ಸೂರ್ಯಪಾನ, ತೊಗರಿ, ಹತ್ತಿ ಮುಖ್ಯ ಬೆಳೆಗಳಾಗಿವೆ. ನೀರಾವರಿಯಿಂದ ಈ ಎಲ್ಲಾ ವಾಣಿಜ್ಯ ಬೆಳೆಗಳನ್ನು ಬೆಳೆದರೂ ಕೃಷಿ ಮಾರುಕಟ್ಟೆಯಲ್ಲಿ ಸೂಕ್ತ ಬೆಲೆ ಸಿಗದ ಕಾರಣ ಬೇಡ ರೈತರನ್ನು ಒಳಗೊಂಡಂತೆ

ಎಲ್ಲಾ ರೈತರು ನಷ್ಟವನ್ನು ಅನುಭವಿಸುತ್ತಾರೆ. ಸುರಪುರ ತಾಲೂಕಿನ ಕೃಷಿಯ ಸ್ಥಿತಿಗತಿಯನ್ನು ಪರಿಶೀಲಿಸಿದರೆ ಇಲ್ಲಿನ ಬೇಡ ಜನರ ಬದುಕು ದುಸ್ಥಿತಿಯಲ್ಲಿರುವುದನ್ನು ಕಾಣಬಹುದು.

**ಸುರಪುರ ತಾಲೂಕಿನ ಬೇಡರು ಕೃಷಿಯಲ್ಲಿ ಆರ್ಥಿಕವಾಗಿ ಹಿಂದುಳಿದಿರುವುದಕ್ಕೆ ಪ್ರಮುಖ ಕಾರಣಗಳು:**

೧. ಬಹುತೇಕ ಬೇಡರು ಭೂ ರಹಿತ ಕೂಲಿಕಾರ್ಮಿಕರಾಗಿದ್ದಾರೆ.

೨. ಬೇಡರು ತಮ್ಮ ಹೊಲ ಗದ್ದೆಗಳನ್ನು ಆಂಧ್ರ ಪ್ರದೇಶದವರಿಗೆ ಮಾರಿ ಕೊಳ್ಳುತ್ತಿರುವುದು.

೩. ಬೇಡ ರೈತರಿಗೆ ಕೃಷಿ ಮಾರುಕಟ್ಟೆಯಲ್ಲಿ ಸೂಕ್ತ ಬೆಲೆ ಸಿಗದೆ ಇರುವುದು.

೪. ಬೇಡರಿಗೆ ಕೃಷಿ ವ್ಯವಸಾಯದಲ್ಲಿ ನಿರಾಸಕ್ತಿ.

**ವ್ಯಾಪಾರ:**

ಸುರಪುರ ತಾಲೂಕಿನ ಬೇಡರು ಶಿಕ್ಷಣದ ಕೊರತೆ ಮತ್ತು ಬಂಡವಾಳದ ಕೊರತೆಯಿಂದಾಗಿ ದೊಡ್ಡ ಪ್ರಮಾಣದಲ್ಲಿ ವಹಿವಾಟು ನಡೆಸುವಂತಹ ವ್ಯಾಪಾರಗಾರರ ಸಂಖ್ಯೆ ಅತ್ಯಂತ ಕಡಿಮೆ ತಮ್ಮ ದಿನ ನಿತ್ಯದ ಜೀವನೋಪಾಯಕ್ಕಾಗಿ ಸುರಪುರದ ಬೆಟ್ಟಗಳಲ್ಲಿ ಸಿಗುವ ಸೀತಾಫಲ ಹಣ್ಣು ಮಾರಾಟ ಮಾಡುವುದು ಮತ್ತು ಹೊರ ರಾಜ್ಯಗಳಿಂದ ಸೇಬು, ಮೋಸಂಬಿ ಹಣ್ಣುಗಳನ್ನು ಮಾರಾಟ ಮಾಡುವುದು ಹೀಗೆ ಕೆಲವು ಜನ ಬೇಡರು ಹಣ್ಣು ಹಂಪಲುಗಳನ್ನು ಮಾರಾಟ ಮಾಡಿದರೆ ಇನ್ನು ಕೆಲವರು ಹುಣಸೆ ಕಾಯಿ ಗಿಡಗಳನ್ನು ಗುತ್ತಿಗೆ ಹಿಡಿದು ಹುಣಸೆ ಹಣ್ಣು ಸಂಗ್ರಹಿಸಿ ದೂರದ ಹೈದ್ರಾಬಾದ ನಗರಕ್ಕೆ ಹೋಗಿ ಮಾರಾಟ ಮಾಡಿಕೊಂಡು ಬರುತ್ತಾರೆ. ಅಲ್ಲದೆ ಪಾನ-ಬೀಡಾ ಶಾಪ್, ಅಥವಾ ಕಿರಾಣಿ ಅಂಗಡಿ ಮುಂತಾದ ಚಿಕ್ಕಪುಟ್ಟ ವ್ಯಾಪಾರದಲ್ಲಿ ನಿರತರಾಗಿದ್ದಾರೆ. ಇತ್ತೀಚಿಗೆ ಕೆಲವು ಬೇಡ ಯುವಕರು ವ್ಯವಹಾರ ಜ್ಞಾನವುಳ್ಳವರಾಗಿದ್ದು ದೊಡ್ಡ ಪ್ರಮಾಣದ ವ್ಯಾಪಾರ ಮಾಡಲು ಉತ್ಸಾಹಕರಾಗಿದ್ದರು. ಅವರೆಲ್ಲ ಹಣವಿಲ್ಲದ ಕಾರಣ ಚಿಂತಾಕ್ರಾಂತರಾಗಿದ್ದಾರೆ. ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ಪ್ರತಿಯೊಂದು ಬೇಡ ಕುಟುಂಬಗಳಲ್ಲಿ ಎಮ್ಮೆ-ಆಕಳುಗಳು ಇರುವುದರಿಂದ ಅವುಗಳು ನೀಡುವ ಹಾಲನ್ನು ಪೇಟೆಗೆ ತೆಗೆದುಕೊಂಡು ಹೋಗಿ ೧ ಲೀಟರ್‌ಗೆ ೨೦ ರೂಪಾಯಿಯಂತೆ ಮಾರಾಟ ಮಾಡಿಕೊಂಡು ಬರುತ್ತಾರೆ. ಇದರಂತೆ ದಿನಕ್ಕೆ ೧೦೦ ರಿಂದ ೨೦೦ ರೂಪಾಯಿ ಸಂಪಾದನೆ ಮಾಡಿ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ.

**ಗುತ್ತಿಗೆ ಕೆಲಸ:**

ಸುರಪುರದಲ್ಲಿ ಇಂದು ಕೆಲವು ಜನ ಬೇಡರು ಆರ್ಥಿಕವಾಗಿ ಸದೃಢರಾಗಿದ್ದಾರೆ ಎಂದರೆ ಗುತ್ತಿಗೆ ಕೆಲಸದಿಂದ ಎಂದು ಹೇಳಬಹುದು. ಸುರಪುರ ಮತ್ತು ಸುತ್ತಮುತ್ತಲಿನ

ಗ್ರಾಮಗಳಲ್ಲಿ ಇವರ ಪ್ರಭಾವ ಹೆಚ್ಚಾಗಿರುವುದರಿಂದ ಕೆಲವು ಜನ ಬೇಡರು ಪ್ರಥಮ ದರ್ಜೆ, ದ್ವಿತೀಯ ದರ್ಜೆ ಗುತ್ತಿಗೆದಾರರಾಗಿ ರಸ್ತೆ ಸುಧಾರಣೆ, ಸಿಮೆಂಟ್ ರಸ್ತೆ ನಿರ್ಮಾಣ, ಡಾಂಬರ್ ರಸ್ತೆ ನಿರ್ಮಾಣ, ಒಳಚರಂಡಿ ನಿರ್ಮಾಣ ಮುಂತಾದ ಕೆಲಸ ಕಾರ್ಯಗಳನ್ನು ಗುತ್ತಿಗೆ ಆಧಾರದ ಮೇಲೆ ಹಿಡಿದು ಕೆಲಸವನ್ನು ಅಚ್ಚು ಕಟ್ಟಾಗಿ ಮಾಡಿ ಹಣವನ್ನು ಸಂಪಾದಿಸುತ್ತಿದ್ದಾರೆ. ಉದಾ: ಎಸ್. ಗೋಪಾಲನಾಯಕ, ಪ್ರಕಾಶ ಗುತ್ತೇದಾರ, ಹನುಮಪ್ಪ ನಾಯಕ, ರಾಮಪ್ಪ ನಾಯಕ, ಸೋಮನಾಥ ನಾಯಕ, ಶಂಕರ ನಾಯಕ, ಸುರಪುರ ಪಾಮನಾಯಕ, ರಾಜಾ ವಾಸುದೇವ ನಾಯಕ, ರಾಜಾ ಲಚಮಪ್ಪನಾಯಕ, ಪಿಡ್ಡನಾಯಕ, ರಂಗಪ್ಪನಾಯಕ ಇನ್ನಿತರ ಪ್ರಭಾವೀ ಬೇಡರು ಗುತ್ತಿಗೆದಾರರಾಗಿ ಹೆಸರು ಮಾಡಿ ಆರ್ಥಿಕವಾಗಿ ಸದೃಢರಾಗಿದ್ದಾರೆ. ಇದರಂತೆಯೇ ಇಂದು ಈ ತಾಲೂಕಿನಲ್ಲಿ ಕೆಲ ಬೇಡ ಯುವಕರು ಕೂಡ ಚಿಕ್ಕಪುಟ್ಟ ಗುತ್ತಿಗೆ ಕೆಲಸ ಕಾರ್ಯಗಳನ್ನು ಮಾಡು ತ್ತಿದ್ದಾರೆ. ಅಲ್ಲದೆ ಕೆಲವು ಜನ ಬೇಡರು ಖಾಸಗಿ ವ್ಯಕ್ತಿಗಳ ಹೊಸ ಮನೆಗಳನ್ನು ಗುತ್ತಿಗೆ ಹಿಡಿದು ಮನೆಗಳನ್ನು ಕಟ್ಟುತ್ತಿದ್ದಾರೆ. ಹಾಗೂ ಒಳಚರಂಡಿಗಳನ್ನು ನಿರ್ಮಾಣ ಮಾಡುತ್ತಿದ್ದಾರೆ. ಇದರಿಂದ ಬಂದಿರುವ ಆದಾಯದಿಂದ ಇಂದು ಬೇಡರು ಆರ್ಥಿಕವಾಗಿ ಬಲವಾಗಿದ್ದಾರೆ.

**ಕಟ್ಟಡ ಕೂಲಿ ಕಾರ್ಮಿಕರು:**

ಬೇಡರು ಇಂದು ಕೃಷಿಯನ್ನೇ ಹೆಚ್ಚಿಗೆ ಅವಲಂಬಿತರಾಗದೇ ಕಟ್ಟಡ ಕೆಲಸಗಳಿಗೆ ಕೂಲಿ ಕಾರ್ಮಿಕರಾಗಿ ಹೋಗುತ್ತಿದ್ದಾರೆ. ಇಲ್ಲಿ ಗೌಂಡಿಗಳು ಮನೆಗಳನ್ನು ನಿರ್ಮಾಣ ಮಾಡುವುದರಲ್ಲಿ ನಿರತರಾಗಿದ್ದಾರೆ. ಇಂದು ಪ್ರತಿಯೊಬ್ಬ ಗೌಂಡಿಗೆ ೪೦೦/- ರೂಪಾಯಿ ಕೂಲಿ ಇದ್ದರೆ, ದುಂಡಾಳಿಗೆ ೩೫೦ ರೂಪಾಯಿ ಕೂಲಿ ಇದೆ. ಮತ್ತು ಇವರ ಕೈಕೆಳಗೆ ದುಡಿಯುವವರಿಗೆ ೨೦೦ ರಿಂದ ೨೫೦ ರೂಪಾಯಿ ಕೂಲಿ ಇದೆ. ಮಹಿಳೆಯರಿಗೆ ೧೫೦ ರೂಪಾಯಿ ಕೂಲಿ ನೀಡಲಾಗುತ್ತದೆ. ಹೀಗೆ ಕಟ್ಟಡ ನಿರ್ಮಾಣ ಕೆಲಸದಲ್ಲಿ ತೊಡಗಿ ದಿನನಿತ್ಯ ಬಂದಂತಹ ಅಲ್ಪ ಸ್ವಲ್ಪ ಹಣದಿಂದ ಜೀವನವನ್ನು ಸಾಗಿಸುತ್ತಿದ್ದಾರೆ.

**ಆಟೋ ಮತ್ತು ವಾಹನಗಳ ಚಾಲಕರಾಗಿ ಬೇಡರು:**

ಇಂದು ಪ್ರಸ್ತುತ ದಿನಮಾನಗಳಲ್ಲಿ ಸಮಾಜದ ಬದಲಾವಣೆಯನ್ನು ಕಂಡಂತಹ ಬೇಡ ಯುವಕರು ಸೋಮಾರಿಗಳಾಗಿ ಅಲೆದಾಡದೇ ತಮ್ಮ ಆರ್ಥಿಕ ಸ್ಥಿತಿಗೆ ತಕ್ಕಂತೆ ಆಟೋಗಳನ್ನು ಮತ್ತು ಇಂಡಿಕಾ ಕಾರುಗಳನ್ನು, ಟಾಟಾ ಸುಮೊ ವಾಹನಗಳನ್ನು ಖರೀದಿ ಮಾಡಿಕೊಂಡು ಬಾಡಿಗೆಗೆ ಹೊಡೆಯುತ್ತಿದ್ದಾರೆ. ಪರಿಶಿಷ್ಟ ಪಂಗಡ ಅಭಿವೃದ್ಧಿ ನಿಗಮದಿಂದ ಸಾಲವನ್ನು ಪಡೆದುಕೊಂಡು ವಾಹನಗಳನ್ನು ಖರೀದಿ ಮಾಡುತ್ತಿದ್ದಾರೆ. ದಿನನಿತ್ಯ ಬಾಡಿಗೆಯಿಂದ ಬಂದಂತಹ ಹಣವನ್ನು ಸ್ವಲ್ಪ ಸಾಲಕ್ಕೆ ಕಟ್ಟಿ ಉಳಿದಿದ್ದನ್ನು ತಮ್ಮ

ಜೀವನೋಪಾಯಕ್ಕಾಗಿ ಮೀಸಲಾಗಿಡುತ್ತಿದ್ದಾರೆ. ಇಂದು ಬೇಡ ಯುವಕರು ವಾಹನಗಳ ಹಿಂದೆ ಜನಪ್ರೀಯ ವ್ಯಕ್ತಿಗಳಾದ ರಾಜಾ ವೆಂಕಟಪ್ಪ ನಾಯಕ, ವೀರ ಮದಕರಿ ನಾಯಕ, ವಾಲ್ಮೀಕಿ, ಏಕಲವ್ಯ, ಸಿಂಧೂರ ಲಕ್ಷ್ಮಣ ಇನ್ನಿತರ ಹೆಸರುಗಳ ಬರಹಗಳನ್ನು ಕಾಣಬಹುದು. ಈ ರೀತಿಯಾಗಿ ತಮ್ಮ ಉದ್ಯೋಗದ ಜೊತೆಗೆ ಅಭಿಮಾನವನ್ನು ವ್ಯಕ್ತಪಡಿಸುತ್ತಾರೆ.

**ಹಂದಿ ಸಾಗಾಣಿಕೆ ಮತ್ತು ಕೋಳಿ ಸಾಗಾಣಿಕೆ:**

ವಿಶೇಷವಾಗಿ ಸುರಪುರದ ಡೊಣ್ಣಿಗೇರೆಯ ಬೇಡರಲ್ಲಿ ಹಂದಿ ಸಾಗಾಣಿಕೆಯು ಇಂದಿಗೂ ನಡೆಯುತ್ತಿದೆ. ಹಂದಿ ಮರಿಗಳನ್ನು ಸಾಕಿ ಅವು ದೊಡ್ಡದಾದಾಗ ಅವುಗಳನ್ನು ಕುಂಚಿಕೋರುವ ಜನಾಂಗಕ್ಕೆ ಮಾರಿ ಇದರಿಂದ ಬಂದಿರುವ ಹಣದಿಂದ ತಮ್ಮ ಜೀವನವನ್ನು ಸಾಗಿಸುತ್ತಾರೆ. ಇದು ಇವರಿಗೆ ಒಂದು ಉಪ ಕಸುಬು ಎಂದರೆ ತಪ್ಪಾಗಲಾರದು. ಅದೇ ರೀತಿಯಾಗಿ ಈ ಭಾಗದಲ್ಲಿ ಹುಂಜದ ಪಂದ್ಯಾಟಗಳು ನಡೆಯುವುದರಿಂದ ಹುಂಜದ (ಕೋಳಿ) ವ್ಯಾಪಾರವು ನಡೆಯುತ್ತದೆ. ಸಗರನಾಡಿನ ಸುರಪುರದ ಡೊಣ್ಣಿಗೇರಿ, ಬಿಚ್ಚುಗತ್ತಿಗೇರಿ, ಕಬಾಡಗೇರಿಗಳಲ್ಲಿ ಹಾಗೂ ಬೇಡರು ಹೆಚ್ಚಾಗಿ ವಾಸಿಸುವ ಗ್ರಾಮಗಳಲ್ಲಿ ಬೇಡರು ಕೋಳಿ, ಹುಂಜಗಳನ್ನು ಸಾಕಿ ಒಂದು ಹುಂಜಕ್ಕೆ ೨ ಮತ್ತು ೩ ಸಾವಿರಕ್ಕೆ ಮಾರುತ್ತಾರೆ. ಬೆಳೆದ ಕೊರೆ ಬಂದ ಹುಂಜಗಳಿಗೆ ಈ ಭಾಗದಲ್ಲಿ ಹೆಚ್ಚಿನ ಬೇಡಿಕೆ ಇದೆ. ಹುಂಜಗಳ ಸಂಖ್ಯೆ ಕಡಿಮೆಯಾಗುತ್ತಿರುವುದರಿಂದ ಇದರ ಬೇಡಿಕೆ ಹೆಚ್ಚಾಗುತ್ತಿದೆ. ಇದರಿಂದ ಬಂದಂತಹ ಹಣದಿಂದ ಬೇಡರು ತಮ್ಮ ಉಪಜೀವನಕ್ಕೆ ಉಳಿಸಿಕೊಳ್ಳುತ್ತಾರೆ.

**ಬೇವಿನ ಬೀಜ ಮಾರಾಟ:**

ಸುರಪುರ ತಾಲೂಕಿನ ತೀರಾ ಕಡು ಬಡತನದಲ್ಲಿ ಕೂಡಿದ ಬೇಡರು ಅನಿವಾರ್ಯವಾಗಿ ತಮ್ಮ ಹೊಟ್ಟೆ ಪಾಡಿಗಾಗಿ ಬೆಟ್ಟ, ಗುಡ್ಡ, ಹೊಲ, ಗದ್ದೆ, ಅರಣ್ಯ ಪ್ರದೇಶಗಳಿಗೆ ಬೇವಿನ ಬೀಜ ಆರಿಸಲು ಹೋಗುತ್ತಾರೆ. ಕಾರಣ ಬೇವಿನ ಬೀಜದಿಂದ ಕಾರ್ಖಾನೆಯಲ್ಲಿ ಸಾಬೂನು ತಯಾರು ಅಗುವುದರಿಂದ ಈ ಬೀಜ-ಹಣ್ಣುಗಳಿಗೆ ಬೇಡಿಕೆ ಇದೆ. ಬೆಂಗಳೂರು, ಹೈದ್ರಾಬಾದನಿಂದ ಲಾರಿಗಳು ಬಂದು ಇವರು ಸಂಗ್ರಹಿಸಿದ ಬೀಜಗಳನ್ನು ತೆಗೆದುಕೊಂಡು ಹೋಗುತ್ತಾರೆ. ಇಂದಿಗೂ ಕೂಡಾ ಕೆಲವು ಗ್ರಾಮಗಳಲ್ಲಿ ಬೇವಿನ ಬೀಜದ ಗುಂಪುಗಳನ್ನು ಕಾಣಬಹುದು. ಒಂದು ಸೇರು ಬೇವಿನ ಬೀಜಕ್ಕೆ ಇಂದು ೩ ಮತ್ತು ೫ ರೂಪಾಯಿ ಬೆಲೆ ಇರುವುದರಿಂದ ಬೇವಿನ ಬೀಜ ಆಯುವವರು (ಆರಿಸುವವರು) ದಿನಕ್ಕೆ ೩೦ ರಿಂದ ೪೦ ಸೇರು ಬೇವಿನ ಬೀಜವನ್ನು ಆರಿಸುತ್ತಾರೆ. ಅಂದರೆ ದಿನಕ್ಕೆ ಇದರಿಂದ ೧೦೦ ರಿಂದ ೧೫೦ರೂ. ಸಂಪಾದಿಸುತ್ತಾರೆ. ಹೀಗೆ ತಮ್ಮ ಉಪಜೀವನಕ್ಕಾಗಿ ಹೊಟ್ಟೆ ಪಾಡಿಗಾಗಿ ಬಡ ಬೇಡರು ಬೇವಿನ ಬೀಜ ಮಾರಾಟ ಮಾಡುತ್ತಾರೆ.

**ಹಮಾಲಿ ಕೆಲಸ:**

ಸುರಪುರ ತಾಲೂಕು ಇಂದೂ ಕೃಷಿಯಲ್ಲಿ ಪ್ರಗತಿಯನ್ನು ಸಾಧಿಸುತ್ತಿದೆ. ಈ ಪ್ರದೇಶದ ಕೃಷಿ ಭೂಮಿಗಳಲ್ಲಿ ನಾನಾತರಹದ ಧವಸ ಧಾನ್ಯಗಳನ್ನು ಬೆಳೆಯುತ್ತಿರುವುದರಿಂದ ಒಂದೇ ತಾಲೂಕಿನ ಎರಡು ಎ.ಪಿ.ಎಮ್.ಸಿ. ಮರುಕಟ್ಟೆ ವ್ಯವಸ್ಥೆಯನ್ನು ಮಾಡಲಾಗಿದೆ. ಕರ್ನಾಟಕದಲ್ಲಿ ಅತಿ ಹೆಚ್ಚು ಆದಾಯವನ್ನು ತಂದುಕೊಡುವ ೨ನೇ ಮಾರುಕಟ್ಟೆ ಸುರಪುರ ಎಂದರೆ ತಪ್ಪಾಗಲಾರದು. ಸುರಪುರದ ಸರಕಾರಿ ಕೃಷಿ ಮಾರುಕಟ್ಟೆಯಲ್ಲಿ ಬೇಡರು ಹೆಚ್ಚಾಗಿ ಹಮಾಲಿಗಳಾಗಿ ದುಡಿಯುತ್ತಿದ್ದಾರೆ. ಹಮಾಲಿ ಕೆಲಸ ಅಂದರೆ ಧವಸ ಧಾನ್ಯಗಳ ಚೀಲಗಳನ್ನು ತುಂಬಿಸುವುದು, ಲಾರಿಗಳಿಗೆ ಸಾಗಿಸುವುದು, ಗೋದಾಮುಗಳಲ್ಲಿ ಧಾನ್ಯಗಳನ್ನು ಸಂಗ್ರಹಿಸಿ ಕೆಡದಂತೆ ಇಡುವುದು ಇದು ಇವರ ಕೆಲಸವಾಗಿದೆ. ಸುರಪುರದ ಹಮಾಲಿಗಳಿಗೆ ವಸತಿ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಆದರೆ ಅವರಿಗೆ ಕಡಿಮೆ ದಿನಗೂಲಿ ನೀಡುತ್ತಿರುವದರಿಂದ ದೌರ್ಜನ್ಯಕ್ಕೆ ಒಳಗಾಗಿದ್ದಾರೆ. ಇದರಿಂದ ಬಂದಂತಹ ಅಲ್ಪ ಕೂಲಿಯಿಂದ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ಕುಂಬಾರಪೇಟೆಯ ಬಡ ಬೇಡರು, ಸತ್ಯಂಪೇಟೆಯ ಬಡ ಬೇಡರು, ಡೊಣ್ಣಿಗೇರಿಯ ಬಡ ಬೇಡರು, ವಾಗಣಗೇರಿ ಬಡ ಬೇಡರು, ವೆಂಕಟಾಪುರದ ಬಡ ಬೇಡರು ಹಮಾಲಿ ವೃತ್ತಿಯನ್ನು ಇಂದಿಗೂ ಮುಂದುವರೆಸಿಕೊಂಡು ಬರುತ್ತಿದ್ದಾರೆ.

**ಬೇಟೆ ವೃತ್ತಿ:**

ಅಂದಿನ ದಿನಮಾನಗಳಲ್ಲಿ ಬೇಡರು ತಮ್ಮ ಹಸಿವನ್ನು ನೀಗಿಸಿಕೊಳ್ಳಲು ಪ್ರಾಣಿ ಪಕ್ಷಿಗಳ ಬೇಟೆಯನ್ನು ಆಡುತ್ತಿದ್ದರು. ಆದರೆ ಇಂದು ಈ ಬೇಟೆಗಾರಿಕೆ ವ್ಯಾಪಾರವಾಗಿ ಮಾರ್ಪಟ್ಟಿದೆ. ಅಂದರೆ ಇಂದು ಕೆಲ ಬೇಡರು ಮೊಲದ ಬೇಟೆಯನ್ನು, ಕೌಜುಗ, ಬುರಲಿ ಬೇಟೆಯನ್ನು, ಚಿಗರಿ ಬೇಟೆ, ಏದಿನ ಬೇಟೆ, ಕಾಡುಹಂದಿ ಬೇಟೆ, ಉಡುವಿನ ಬೇಟೆಯಾಡಿ ಪಟ್ಟಣಕ್ಕೆ ತಂದು ಅವುಗಳ ಮಾಂಸವನ್ನು ಮಾರಾಟಮಾಡುತ್ತಿದ್ದರು. ಅರಣ್ಯ ಬೇಟೆ ಕಾಯ್ದೆ ಜಾರಿಗೆ ಬಂದಾಗಿನಿಂದ ಬೇಟೆಯಾಡುವುದನ್ನು ಬಿಟ್ಟಿದ್ದಾರೆ. ಉದಾ: ಏದಿನ (ಮುಳ್ಳುಹಂದಿ) ಬೇಟೆಯಾಡಿ ಇದರ ಮೇಲಿನ ಚಿಪ್ಪನ್ನು ಉಂಗುರವನ್ನಾಗಿ ಮಾಡಿ (ಅದನ್ನು ಆಲಿ ಉಂಗುರ ಎಂದು ಕರೆಯುತ್ತಾರೆ.) ೩೦೦-೪೦೦ ರೂಪಾಯಿಗೆ ಮಾರಾಟ ಮಾಡುತ್ತಾರೆ. ಇತ್ತೀಚಿನ ದಿನಮಾನಗಳಲ್ಲಿ ಪಕ್ಕದ ಆಂಧ್ರಪ್ರದೇಶ, ತಮಿಳುನಾಡು, ಮಹಾರಾಷ್ಟ್ರ ರಾಜ್ಯಗಳಿಂದ ಕೆಲವು ವ್ಯಕ್ತಿಗಳು ಬಂದು ಈ ಏದಿನ ಉಂಗುರಗಳನ್ನು ೩-೪ ಸಾವಿರ ರೂಪಾಯಿ ಕೊಟ್ಟು ತೆಗೆದುಕೊಂಡು ಹೋಗುತ್ತಿದ್ದರು. ಇದು ಕಾನೂನು ಬಾಹಿರವಾಗಿದ್ದರೂ ಜನರಿಗೆ ತಿಳುವಳಿಕೆ ಇಲ್ಲದಂತಾಗಿದೆ. ಇದೇ ರೀತಿ ಹಣದ ಸಂಪಾದನೆಗಾಗಿ ಡೊಣ್ಣಿಗೇರಿಯ ಕೆಲ ಬೇಡ ಯುವಕರು ಶಹಾಪೂರಿನ ಬೆಟ್ಟಕ್ಕೆ ಬೇಟೆಯಾಡಲು ಹೋಗಿರುವಾಗ ಮಾರ್ಗ ಮಧ್ಯದಲ್ಲಿ ರಸ್ತೆ ಅಪಘಾತಕ್ಕೆ ಈಡಾಗಿ ಮೃತಪಟ್ಟಿದ್ದಾರೆ.

ಅಂದಿನಿಂದ ಈ ಬೇಟೆಗೆ ಹೋಗುವುದಕ್ಕೆ ಸ್ವಲ್ಪ ಕಡಿಮೆಯಾಗಿದೆ ಎಂದು ಹೇಳಬಹುದಾಗಿದೆ. ಮತ್ತು ಕೌಜುಗ ಬುರಲಿ ಬೇಟೆಯಾಡಿ ೬೦ ರಿಂದ ೮೦ ರೂಪಾಯಿ ಮಾರಾಟ ಮಾಡುತ್ತಾರೆ. ಇದರಿಂದ ಬಂದಂತಹ ಹಣವನ್ನು ತಮ್ಮ ಸಂಸಾರಕ್ಕಾಗಿ ಬಳಸುತ್ತಾರೆ.

**ಖಾಸಗಿ ಬ್ಯಾಂಕು ನಿರ್ವಹಣೆ (ಹಣಕಾಸು ಸಂಸ್ಥೆ)**

ಪ್ರಸ್ತುತ ದಿನಮಾನಗಳಲ್ಲಿ ಶಿಕ್ಷಣವನ್ನು ಕಲಿತಿರುವ ವ್ಯವಹಾರದ ಜ್ಞಾನದಿಂದ ಕೆಲವು ಬೇಡ ಯುವಕರು ಮತ್ತು ಹಿರಿಯರು ಸರಕಾರದ ಮಾನ್ಯತೆಯನ್ನು ಪಡೆದು ಸುರಪುರ, ಹುಣಸಗಿ, ಕೆಂಭಾವಿ, ಕಕ್ಕೇರಿಗಳಲ್ಲಿ ಖಾಸಗಿ ಬ್ಯಾಂಕುಗಳನ್ನು (ಹಣಕಾಸು ಸಂಸ್ಥೆ) ಸ್ಥಾಪಿಸಿ ವ್ಯಾಪಾರಸ್ಥರಿಗೆ, ನೌಕರಿದಾರರಿಗೆ ಬಡ್ಡಿಯ ರೂಪದಲ್ಲಿ ಸಾಲವನ್ನು ನೀಡುತ್ತಾರೆ. ಇಂತಹ ಅನೇಕ ಬ್ಯಾಂಕುಗಳು ಇಂದು ಲಾಭವನ್ನು ಕಾಣುತ್ತಿವೆ. ಉದಾ: ಸುರಪುರದಲ್ಲಿರುವ ತುಳಸಿ ಫೈನಾನ್ಸ್, ವೆಂಕಟೇಶ್ವರ ಫೈನಾನ್ಸ್ ಇತ್ಯಾದಿ. ಈ ಬ್ಯಾಂಕುಗಳ ಬಡ್ಡಿ ವ್ಯವಹಾರದಿಂದ ಬಂದಿರುವ ಹಣದ ಲಾಭದಿಂದ ಇಂದು ಕೆಲವು ಬೇಡರು ಆರ್ಥಿಕವಾಗಿ ಸದೃಢರಾಗುತ್ತಿದ್ದಾರೆ. ಇಂತಹ ವ್ಯವಹಾರ, ಚತುರತೆ ಬೇಡರಲ್ಲಿ ಬಂದದ್ದು ಆಶ್ಚರ್ಯವೇ ಎಂದು ಹೇಳಬಹುದು.

**ಉದ್ಯೋಗ ಖಾತರಿ ಯೋಜನೆ:**

'ಇಂದು ಮಹಾತ್ಮಾ ಗಾಂಧಿ ಉದ್ಯೋಗ ಖಾತರಿ ಯೋಜನೆ ನಿರುದ್ಯೋಗಿಗಳಿಗೆ ವರದಾನವಾಗಿ ಪರಿಣಮಿಸಿದೆ. ಈ ಯೋಜನೆಯಲ್ಲಿ ಪರಿಶಿಷ್ಟ ಜಾತಿ – ಪರಿಶಿಷ್ಟ ಪಂಗಡದವರಿಗೆ ಉದ್ಯೋಗ ಮೀಸಲಾತಿ ಇರುವುದರಿಂದ ಸುರಪುರ ಭಾಗದ ಹಲವಾರು ಜನ ನಿರುದ್ಯೋಗಿ ಬೇಡರು ಇದರ ಅಡಿಯಲ್ಲಿ ಉದ್ಯೋಗವನ್ನು ಮಾಡುತ್ತಿದ್ದಾರೆ. ಕೆಲವು ಜನ ಬೇಡರು ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದರೆ, ಇನ್ನೂ ಕೆಲ ಜನ ಬೇಡ ನಾಯಕರು ಈ ಯೋಜನೆಯಲ್ಲಿರುವ ಕಾಮಗಾರಿಗಳನ್ನು ಗುತ್ತಿಗೆ ಪಡೆದುಕೊಂಡು ಕೆಲಸ ಕಾರ್ಯಗಳನ್ನು ಮಾಡಿಸಿ ಲಾಭವನ್ನು ಪಡೆಯುತ್ತಿದ್ದಾರೆ. ಈ ಯೋಜನೆಯಿಂದ ಎಷ್ಟೋ ಜನ ಬೇಡ ನಾಯಕರು ಆರ್ಥಿಕವಾಗಿ ಸಬಲರಾಗಿರುವುದನ್ನು ಕಾಣಬಹುದು. ಇಂದು ಇದರಿಂದ ಲಕ್ಷಾಧೀಶ್ವರರು, ಕೋಟ್ಯಾಧೀಶ್ವರರು ಆಗಿದ್ದಾರೆ. ಆದರೆ ಈ ಯೋಜನೆಯ ಬಗ್ಗೆ ತಿಳುವಳಿಕೆ ಇಲ್ಲದವರು ಇದನ್ನು ಸದುಪಯೋಗ ಪಡಿಸಿಕೊಳ್ಳುತ್ತಿಲ್ಲ.'[೨]

**ಖಾಸಗಿ ಉದ್ಯೋಗ:**

ಈ ಹಿಂದೆ ಬೇಡ ಯುವಕರು ಸೋಮಾರಿಗಳಾಗಿ ಕಾಲ ಕಳೆಯುತ್ತಿದ್ದರು. ಆದರೆ ಇಂದು ಸಮಾಜದ ಬದಲಾವಣೆಗೆ ಹೊಂದಿಕೊಂಡಿರುವ ಯುವಕರು ಬಟ್ಟೆ ಅಂಗಡಿ, ಕಿರಾಣಿ ಅಂಗಡಿ, ಕಾಲೇಜುಗಳಲ್ಲಿ ಪ್ಯೂನ್‌ಗಳಾಗಿ, ವಾಚಮನ್‌ಗಳಾಗಿ, ವಿವಿಧ ಖಾಸಗಿ ಬ್ಯಾಂಕುಗಳಲ್ಲಿ ಗುಮಾಸ್ತರಾಗಿ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಾರೆ. ನಾಯಕರು

ಎಂಬ ಅಹಂಭಾವ ಇಂದು ಇವರಲ್ಲಿ ಕಾಣುವುದಿಲ್ಲ. ದುಡಿದರೆ ಮಾತ್ರ ನಮಗೆ ಹೊಟ್ಟೆ ತುಂಬುತ್ತದೆ ಎಂಬ ಪ್ರಜ್ಞೆ ಇವರಲ್ಲಿ ಮೂಡಿದೆ. ಇಂದು ಕೆಲ ಯುವಕರು ಕೆಲಸದಲ್ಲಿ ಕೀಳರಿಮೆಯನ್ನು ಕಾಣದೇ ಸ್ವಾಭಿಮಾನವನ್ನು ಬೆಳೆಸಿಕೊಂಡು ತಮ್ಮ ಕೆಲಸದಲ್ಲಿ ನಿರತರಾಗಿರುವುದು ಮನೆಯ ತಂದೆ-ತಾಯಿಗಳಿಗೆ ಸಂತೋಷವನ್ನು ಮೂಡಿಸಿದೆ.

**ಜೀತಪದ್ಧತಿ ವೃತ್ತಿ:**

ಭಾರತೀಯ ಸಮಾಜದಲ್ಲಿ ಅನಾದಿಕಾಲದಿಂದಲೂ ಹಲವಾರು ಸಾಂಪ್ರದಾಯಿಕ ವೃತ್ತಿಗಳು ಇದ್ದವು. ಈ ವೃತ್ತಿ ಅಥವಾ ಪದ್ಧತಿಗಳಲ್ಲಿ ಜೀತ ಪದ್ಧತಿಯು ಪ್ರಮುಖವಾದದ್ದು. ಸಾಮಾನ್ಯವಾಗಿ ಒಬ್ಬ ವ್ಯಕ್ತಿಯು ಒಬ್ಬ ಯಜಮಾನನಿಗೆ ಕೆಲವಾರು ನಿರ್ಧಿಷ್ಠ ನಿಯಮಗಳಿಗೆ ಬದ್ಧನಾಗಿ ಹಗಲು ರಾತ್ರಿ ಎನ್ನದೆ ಸತತವಾಗಿ ಸೇವೆ ಸಲ್ಲಿಸುವುದನ್ನು ಜೀತ ಎನ್ನುತ್ತೇವೆ. ಮತ್ತು ಗ್ರಾಮದ ಕಡು ಬಡವರು ತಮ್ಮ ಯಜಮಾನನ ಹಂಗಿನಲ್ಲಿ ಗುಲಾಮನಂತೆ ದುಡಿಯುವುದನ್ನು ಜೀತ ಪದ್ಧತಿ ಎನ್ನುವರು. ಅಲ್ಲದೇ ತಾನು ತನ್ನ ಪೂರ್ವಿಕರು ಪಡೆದಿದ್ದು ಆರ್ಥಿಕ ನೆರವಿನ ಪ್ರತಿಯಾಗಿ ಜೀತದಾಳಾಗಿ ದುಡಿಯುವುದು ಕೂಡಾ ಜೀತ ಪದ್ಧತಿಯಾಗಿದೆ. ಈ ಜೀತ ಪದ್ಧತಿ ಇಂದು ಸಗರನಾಡಿನ ಸುರಪುರ ತಾಲೂಕಿನಲ್ಲಿ ವೃತ್ತಿಯಾಗಿ ಮಾರ್ಪಟ್ಟಿದೆ. ಅಂದರೆ ಬಡ ಬೇಡ ಕುಟುಂಬದ ತಂದೆ-ತಾಯಿಗಳು ತಮ್ಮ ಮಕ್ಕಳನ್ನು ಮಾರವಾಡಿ, ಸಾಹುಕಾರ, ಜಮೀನದಾರ, ರಾಜಕಾರಣಿಗಳ ಮನೆಗಳಲ್ಲಿ ಜೀತಕ್ಕಾಗಿ ಬಿಡುತ್ತಿದ್ದಾರೆ. ವರ್ಷಕ್ಕೆ ೪೦ ಸಾವಿರದಿಂದ ೬೦ ಸಾವಿರ ರೂಪಾಯಿಗಳಂತೆ ತಮ್ಮ ಮಕ್ಕಳನ್ನು ಜೀತಕ್ಕಾಗಿ ಇಟ್ಟು ಆ ಹಣದಿಂದ ತಮ್ಮ ಉಪಜೀವನವನ್ನು ಸಾಗಿಸುತ್ತಾರೆ. ಈ ತರಹದ ವೃತ್ತಿಗಳು ಸುರಪುರದಾದ್ಯಂತ ಶ್ರೀಮಂತರ ಮನೆಗಳಲ್ಲಿ ಕಾಣಬಹುದು. ಈ ವೃತ್ತಿ ಬೇಡರ ಆರ್ಥಿಕ ಜೀವನಕ್ಕೆ ಅನುಕೂಲ ಮಾಡಿಕೊಟ್ಟಿದೆ.

**ಸರ್ಕಾರಿ ನೌಕರಿ (ಉದ್ಯೋಗ):**

ಇಂದು ಸುರಪುರ ತಾಲೂಕಿನ ಬೇಡರು ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಟ್ಟು ತಮ್ಮ ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳಿಸುವುದರ ಜೊತೆಗೆ ಉನ್ನತ ಶಿಕ್ಷಣವನ್ನು ಕೊಡಿಸುತ್ತಿದ್ದಾರೆ. ಹೆಚ್ಚಿನ ಶಿಕ್ಷಣವನ್ನು (ವಿದ್ಯಾಭ್ಯಾಸ) ಕಲಿತ ಬೇಡ ಯುವಕರು ಇಂದು ಸರ್ಕಾರದ ವಿವಿಧ ಇಲಾಖೆಗಳಲ್ಲಿ ಉದ್ಯೋಗವನ್ನು ಮಾಡುತ್ತಿದ್ದಾರೆ. ಇಂದು ಸರ್ಕಾರಿ ಉದ್ಯೋಗ ಇವರ ಆರ್ಥಿಕ ಜೀವನವನ್ನು ಸುಧಾರಿಸಿದೆ. ರಾಜಾ ವೆಂಕಟಪ್ಪ ನಾಯಕ ಇವರು ಎಂ.ಬಿ.ಬಿ.ಎಸ್. ಮುಗಿಸಿ ಸುರಪುರದ ಸರಕಾರಿ ದವಾಖಾನೆಯಲ್ಲಿ ವೈದ್ಯಾಧಿಕಾರಿಯಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಮತ್ತು ದೇವರಗೋನಾಲದ ಬೇಡ ಯುವಕ ಮಹಾಂತಗೌಡ ಇವರು ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಎಂ.ಎ. ಪದವಿಯನ್ನು ಪಡೆದು ರಾಷ್ಟ್ರೀಯ ಅರ್ಹತಾ ಪರೀಕ್ಷೆಯಲ್ಲಿ ಪಾಸಾಗಿ ಪ್ರಸ್ತುತ ಲಿಂಗಸೂರಿನಲ್ಲಿ

ಉಪನ್ಯಾಸಕರಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇದೇ ಗ್ರಾಮದ ಕೆಲವು ಬೇಡ ಯುವಕರು ಸರ್ಕಾರಿ ವಿವಿಧ ಉದ್ಯೋಗದಲ್ಲಿದ್ದಾರೆ ಮತ್ತು ಸುರಪುರ ಪಟ್ಟಣದ ಡೊಣ್ಣೆಗೇರಿ ಓಣಿಯ ರಾಮಕೃಷ್ಣ ಕಲಬುರ್ಗಿ ಇವರು ಪ್ರೌಢಶಾಲೆಯಲ್ಲಿ ದೈಹಿಕ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅದೇ ರೀತಿಯಾಗಿ ಇದೇ ಓಣಿಯ ಮತ್ತೊಬ್ಬ ಯುವಕ ಆದಿಶೇಷ ನಾಯಕ ಇವರು ಸಿಂದಗಿಯಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅದೇ ರೀತಿಯಾಗಿ ಕಬಾಡಗೇರಾ ಓಣಿಯ ಬೇಡ ಯುವಕ ಸುಭಾಶ ಇವರು ಸರ್ಕಾರದ ಮುರಾರ್ಜಿ ದೇಸಾಯಿ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಸುರಪುರ ತಾಲೂಕಿನ ಹುಣಸಗಿ ಗ್ರಾಮದ ಬೇಡ ಯುವಕ ಗುರುನಾಥ ಎಂಬುವವರು ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಸುರಪುರದ ಗುಡಾಳಕೇರಿ ಓಣಿಯ ಯುವಕರಾದ ಯಲ್ಲಪ್ಪ ನಾಯಕ ಶಾಂತಪ್ಪ ನಾಯಕ ಮರೆಪ್ಪ ತಿರುಪತಿ ನಾಯ್ಕೋಡಿ ಎಂಬುವವರು ವಿವಿಧ ಕಾಲೇಜುಗಳಲ್ಲಿ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಹೀಗೆ ಸರ್ಕಾರದ ಮೀಸಲಾತಿಯನ್ನು ಪಡೆದು ಸುರಪುರ ತಾಲೂಕಿನಾದ್ಯಂತ ಕೆಲವು ಯುವಕರು ಅನೇಕ ಸರ್ಕಾರಿ ಉದ್ಯೋಗಗಳಲ್ಲಿ ತೊಡಗಿರುವುದು ಅವರು ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಅನುಕೂಲವಾದಂತಾಗಿದೆ ಎಂದು ಹೇಳಬಹುದು.

**ಶಹಾಪೂರ ತಾಲೂಕಿನ ಬೇಡರ ಆರ್ಥಿಕ ಜೀವನ:**

ಶಹಾಪೂರ ತಾಲೂಕು ಕಿರಿದಾದ ಬೆಟ್ಟ ಗುಡ್ಡ ಮತ್ತು ಫಲವತ್ತಾದ ಭೂ ಪ್ರದೇಶವನ್ನು ಹೊಂದಿದೆ. ಸುಮಾರು ೧೫೦ ರಿಂದ ೧೭೦ ಗ್ರಾಮಗಳನ್ನು ಒಳಗೊಂಡಿರುವ ಈ ತಾಲೂಕು ಕೃಷ್ಣಾ ಮೇಲ್ದಂಡೆ ಯೋಜನೆಯ ನೀರಾವರಿ ಸೌಲಭ್ಯವನ್ನು ಹೊಂದಿದ್ದರೂ ಇಂದು ಇಲ್ಲಿಯ ಜನರು ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಹಿಂದುಳಿದಿದ್ದಾರೆ. ಇಂದಿಗೂ ಸಹ ಗ್ರಾಮಗಳಲ್ಲಿ ಅನಕ್ಷರತೆ, ಅಜ್ಞಾನ ತಾಂಡವಾಡುತ್ತಿದೆ. ಕೆಲವು ಗ್ರಾಮಗಳಿಗೆ ಸರ್ಕಾರಿ ಬಸ್ಸಿನ ಸೌಕರ್ಯವಿಲ್ಲ. ಸರಿಯಾಗಿ ರಸ್ತೆ ಸಂಚಾರದ ವ್ಯವಸ್ಥೆ ಇಲ್ಲ. ದೇಶ ೨೧ನೇ ಶತಮಾನಕ್ಕೆ ಕಾಲಿಟ್ಟರೂ ಜಾಗತೀಕರಣ, ಆಧುನೀಕರಣದ ಪ್ರಭಾವ ಭಾರತ ದೇಶದ ಮೇಲೆ ಆದರೂ ಇಲ್ಲಿನ ಜನರು ಮಾತ್ರ ಮಂದಗತಿಯಲ್ಲಿ ಬದಲಾವಣೆಯನ್ನು ಹೊಂದುತ್ತಿದ್ದಾರೆ. ಮೊದಲೇ ಆರ್ಥಿಕ ಸಂಕಷ್ಟಕ್ಕೆ ಸಿಲುಕಿರುವ ಇಲ್ಲಿಯ ಜನ ಗೋಗಿ ಗ್ರಾಮದಲ್ಲಿ ನಡೆಯುತ್ತಿರುವ ಯುರೇನಿಯಂ ಉತ್ಪಾದನೆಯಿಂದ ಈ ಗ್ರಾಮ ಒಳಗೊಂಡಂತೆ ಸುತ್ತಮುತ್ತಲ ಗ್ರಾಮಗಳು ಚರ್ಮರೋಗಕ್ಕೆ ತುತ್ತಾಗಿವೆ. ಯುರೇನಿಯಂ ಘಟಕ ಸ್ಥಾಪನೆಯಾದಂದಿನಿಂದ ಫಲವತ್ತಾದ ಕೃಷಿ ಭೂಮಿಗಳು ತಮ್ಮ ಫಲವತ್ತತೆಯನ್ನು ಕಳೆದುಕೊಳ್ಳುತ್ತಿವೆ. ನಾಗನಟಗಿ, ದೋರನಹಳ್ಳಿ, ಖಾನಾಪುರ, ವಡಗೇರ, ಹಯ್ಯಾಳ, ಸಗರ, ಚಂದಲಾಪುರ, ಬೆಂಡೆಗುಂಬಳ, ರಸ್ತಾಪುರ, ಅಬ್ಬೆತುಮಕೂರ, ಐಕೂರ, ಇನ್ನಿತರ ಗ್ರಾಮಗಳಲ್ಲಿ ವಾಸಿಸುವ ಬೇಡರ ಆರ್ಥಿಕ ಪರಿಸ್ಥಿತಿ ಚಿಂತಾಜನಕವಾಗಿದೆ. ಮೇಲ್ವರ್ಗದವರಿಂದ

ತುಳಿತಕ್ಕೆ ಒಳಗಾಗಿರುವ ಈ ಜನರು ಇಂದಿಗೂ ಆರ್ಥಿಕವಾಗಿ ಚೇತರಿಸಿಕೊಂಡಿಲ್ಲ. ಬಿದ್ದ ಹಳೆಯ ಜಂತಿ ಮನೆಗಳಲ್ಲಿ ಟಿನ್ ಮನೆಗಳಲ್ಲಿ ಗುಡಿಸಲುಗಳಲ್ಲಿ ವಾಸವಾಗಿದ್ದಾರೆ. ಇಂದಿನ ಆಧುನಿಕ ದಿನಮಾನಗಳಲ್ಲಿ ಇವರು ಆರ್ಥಿಕವಾಗಿ ಹಿಂದುಳಿದಿರುವುದು ಆಶ್ಚರ್ಯವೆನಿಸುತ್ತದೆ.

**ವ್ಯವಸಾಯ ಅಥವಾ ಕೃಷಿ:** 'ಬೇಡ ಜನಾಂಗದ ಮೂಲ ಕಸುಬು ವ್ಯವಸಾಯ ಅಥವಾ ಕೃಷಿ ಎಂದು ಹೇಳಬಹುದು. ಅನಾದಿಕಾಲದಿಂದಲೂ ಕೃಷಿಯನ್ನೇ ಅವಲಂಬಿಸಿದ ಈ ಜನ ಇಂದು ಹತ್ತಿ, ಕಬ್ಬು ಮತ್ತು ಶೇಂಗಾ ಇನ್ನಿತರ ವಾಣಿಜ್ಯ ಬೆಳೆಗಳನ್ನು ಬೆಳೆದು ಸ್ವಲ್ಪ ಮಟ್ಟಿಗೆ ಆರ್ಥಿಕವಾಗಿ ಚೇತರಿಸಿಕೊಳ್ಳುತ್ತಿದ್ದಾರೆ. ಈ ತಾಲೂಕಿನ ಬೇಡರು ೧ ರಿಂದ ೫ ಎಕರೆ ಕೃಷಿ ಭೂಮಿಯನ್ನು ಹೊಂದಿದ್ದಾರೆ. ಇನ್ನೂ ಕೆಲವು ಬೆಡರು ೧೦ ರಿಂದ ೧೫ ಎಕರೆ ಕೃಷಿ ಭೂಮಿಯನ್ನು ಹೊಂದಿದ್ದಾರೆ. ಆದರೆ ಬೆರಳಣಿಕೆಯಷ್ಟು ಬೇಡರು ಮಾತ್ರ ೨೦ ರಿಂದ ೬೦ ಎಕರೆವರೆಗೆ ಕೃಷಿ ಭೂಮಿಯನ್ನು ಹೊಂದಿದ್ದಾರೆ. ಕೃಷಿ ಭೂಮಿಯುಳ್ಳವರು ಸ್ವತಃ ಸಾಗುವಳಿ ಅಥವಾ ಪಾಲುದಾರರಿಗೆ ಸಾಗುವಳಿ ಮಾಡಿಸಿದರೆ ಭೂರಹಿತ ಬೇಡರು ಬೇರೆಯವರ ಹೊಲ, ಗದ್ದೆ, ತೋಟಗಳಿಗೆ ಹೋಗಿ ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಇಂದು ಸ್ತ್ರೀಯರಿಗೆ ೧೦೦/- ರಿಂದ ೧೫೦/- ರೂಪಾಯಿ ಕೂಲಿ ಇದ್ದರೆ ಪುರುಷರಿಗೆ ೩೫೦/- ರಿಂದ ೪೦೦/- ರೂಪಾಯಿ ಕೂಲಿ ಇದೆ. ಇಂದಿನ ಬೆಲೆ ಏರಿಕೆಯ ದಿನಮಾನಗಳಲ್ಲಿ ಇವರು ಪಡೆಯುವ ಕೂಲಿ ಒಂದು ಒಪ್ಪತ್ತಿನ ಊಟಕ್ಕೆ ಮಾತ್ರ ಸೀಮಿತವಾಗುತ್ತದೆ. ಕೃಷಿ ಭೂಮಿಗಳನ್ನು ಹೊಂದಿರುವ ಕೆಲವು ಜನ ಬೇಡರು ಮಾತ್ರ ಆರ್ಥಿಕವಾಗಿ ಸದೃಢರಾಗಿದ್ದಾರೆ. ತಮ್ಮ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳಲು ೧೨, ೧೩ ಮತ್ತು ೧೪ನೇ ವಯಸ್ಸಿನ ಮಕ್ಕಳನ್ನು ಸಹ ಕೃಷಿ ಕೆಲಸಕ್ಕಾಗಿ ಕರೆದುಕೊಂಡು ಹೋಗುತ್ತಿರುವುದು ವಿಷಾದನೀಯ ಸಂಗತಿ. ದಿನ ನಿತ್ಯ ಕೂಲಿ ಮಾಡಿದ ಹಣದಿಂದ ಮಾತ್ರ ಇವರು ಜೀವನವನ್ನು ಸಾಗಿಸುತ್ತಾರೆ. ಒಂದು ವೇಳೆ ಕೂಲಿಗೇ ಹೋಗದಿದ್ದರೆ ಅಂದು ಇವರು ಉಪವಾಸ ಮಾಡಬೇಕಾಗುತ್ತದೆ. ೨೦೧೧-೧೨ನೇ ಸಾಲಿನಲ್ಲಿ ಈ ಸಗರನಾಡು ಮಳೆ ಇಲ್ಲದೇ ಬರಗಾಲವನ್ನು ಎದುರಿಸಿತು. ಈ ತಾಲೂಕಿಗೂ ಕೂಡ ಬರಗಾಲದ ಬಿಸಿ ತಟ್ಟಿದೆ. ಆಗ ಇಲ್ಲಿರುವ ಬಹುತೇಕ ಬಡ ಬೇಡರು ಬೆಂಗಳೂರು, ಮುಂಬಯಿ ಮಹಾನಗರಗಳಿಗೆ ವಲಸೆಹೋಗಿದ್ದಾರೆ. ಆದರೆ ೨೦೧೨ ಜೂನ, ಜುಲೈ ತಿಂಗಳಿನಲ್ಲಿ ಮಳೆ ಚೆನ್ನಾಗಿ ಬಂದಿರುವುದರಿಂದ ವಲಸೆ ಹೋಗಿದ್ದ ಜನರು ಮರಳಿ ತಮ್ಮ ಗ್ರಾಮಗಳಿಗೆ ಬಂದು ಕೃಷಿ ಚಟುವಟಿಕೆಯಲ್ಲಿ ನಿರತರಾದರು.

**ಪಶು ಸಂಗೋಪನೆ:**

'ಬೇಡರು ಮೂಲತಃ ಪಶುಪಾಲಕರು. ಎಮ್ಮೆ, ಆಕಳು, ಕುರಿ, ಮೇಕೆಗಳನ್ನು ಇಂದಿಗೂ ಇವರ ಮನೆಗಳಲ್ಲಿ ಕಾಣುತ್ತೇವೆ. ಶಹಾಪುರದ ಬೇಡರು ಕೆಲವು ಮನೆಗಳಲ್ಲಿ

ಇಂದಿಗೂ ಒಂದು ಅಥವಾ ಎರಡು ಎಮ್ಮೆ, ಆಕಳುಗಳು ಇವೆ. ಇನ್ನು ಕೆಲವು ಬೇಡರ ಮನೆಗಳಲ್ಲಿ ೧೦೦ ರಿಂದ ೨೦೦ ಕುರಿಗಳನ್ನು ನೋಡಬಹುದು. ಇವರು ಬೆಳಗಿನ ಜಾವದಲ್ಲಿ ಎಮ್ಮೆ ಅಥವಾ ಆಕಳು ಹಾಲು ಕರೆದು ಪಟ್ಟಣ ಪ್ರದೇಶಕ್ಕೆ ಮಾರಲು ಹೋಗುತ್ತಾರೆ. ಇದರಂತೆ ಇವರು ದಿನನಿತ್ಯ ೧೫೦ ರಿಂದ ೨೦೦ ರೂಪಾಯಿ ಸಂಪಾದಿಸುತ್ತಾರೆ. ಹಾಗೂ ಕುರಿ ಮೇಕೆಗಳನ್ನು ಸಾಕಿರುವ ಬೇಡರು ಮೊಹರಂ, ಬಕ್ರೀದ್ ಮತ್ತು ಸಗರದ ಎಲ್ಲಮ್ಮನ ಜಾತ್ರೆಯಲ್ಲಿ ಶಹಾಪುರದ ಸಂತೆಗಳಲ್ಲಿ ಕುರಿಗಳನ್ನು ಹೆಚ್ಚಿನ ಬೆಲೆಗೆ ಮಾರಿ ಹಣವನ್ನು ಸಂಪಾದಿಸುತ್ತಾರೆ. ಪಶುಪಾಲನೆಯ ಜೊತೆಗೆ ಪಶು ವ್ಯಾಪಾರವನ್ನು ಮಾಡಿ ತಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳುತ್ತಿದ್ದಾರೆ.'[೪]

**ವ್ಯಾಪಾರ:**

ಈ ತಾಲೂಕಿನ ಬೇಡ ಮಹಿಳೆಯರು ಮತ್ತು ಪುರುಷರು ವಿವಿಧ ರೀತಿಯ ವ್ಯಾಪಾರ ವ್ಯವಹಾರದಲ್ಲಿ ತೊಡಗಿದ್ದಾರೆ. ಶಹಾಪುರ ಬೆಟ್ಟದಲ್ಲಿ ಸಿಗುವ ಸೀತಾಫಲ ಹಣ್ಣಿನ ವ್ಯಾಪಾರ ಹಾಗೂ ಸೇಬು, ಮಾವಿನ ಹಣ್ಣಿನ ವ್ಯಾಪಾರವನ್ನು ಮಾಡುತ್ತಾರೆ. ಸಂತೆ ಮತ್ತು ಎಲ್ಲಮ್ಮನ ಜಾತ್ರೆಯಲ್ಲಿ ಹಾಗೂ ಬಲಭೀಮೇಶ್ವರನ ಜಾತ್ರೆಯಲ್ಲಿ ಕಬ್ಬನ್ನು ಕಟಾವು ಮಾಡಿಕೊಂಡು ಹೋಗಿ ವ್ಯಾಪಾರ ಮಾಡುತ್ತಾರೆ. ಹೀಗೆ ಒಂದಲ್ಲ ಒಂದು ರೀತಿಯ ವ್ಯಾಪಾರವನ್ನು ಮಾಡಿ ಹಣವನ್ನು ಸಂಪಾದಿಸಿ ಜೀವನೋಪಾಯವನ್ನು ನೋಡಿಕೊಳ್ಳುತ್ತಾರೆ.

**ಖಾಸಗಿ ಉದ್ಯೋಗ:**

ಶಹಾಪುರ ತಾಲೂಕಿನ ಬೇಡ ಸಮುದಾಯ ತೀರ ಕಡುಬಡವರಾದ ಕಾರಣ ತಮ್ಮ ಮಕ್ಕಳನ್ನು ಬಟ್ಟೆ ಅಂಗಡಿಗಳಲ್ಲಿ, ಕಿರಾಣಿ ಅಂಗಡಿಗಳಲ್ಲಿ, ಲಾಡ್ಜಗಳಲ್ಲಿ ದುಡಿಯುವುದಕ್ಕೆ ಹಚ್ಚುತ್ತಿದ್ದಾರೆ. ಹೀಗೆ ಬೇಡ ಯುವಕರು ಇಂತಹ ಅನೇಕ ವೃತ್ತಿಯಲ್ಲಿ ತೊಡಗಿರುವುದನ್ನು ನೋಡಬಹುದು. ಇವರು ತಿಂಗಳಿಗೆ ೨ ಸಾವಿರದಿಂದ ೩ ಸಾವಿರ ಸಂಬಳ ಪಡೆದು ಮನೆಯ ಹಿರಿಯರಿಗೆ ಅರ್ಧದಷ್ಟು ಹಣವನ್ನು ಕೊಟ್ಟು ಉಳಿದದ್ದನ್ನು ತಮ್ಮ ಖರ್ಚಿಗೆ ಇಟ್ಟುಕೊಳ್ಳುತ್ತಾರೆ. ಇಂದು ನೂರಾರು ಜನ ಬೇಡ ಯುವಕರು ಇಂತಹ ಉದ್ಯೋಗ ಮಾಡಿ ತಮ್ಮ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದಾರೆ.

**ಕಟ್ಟಡ ನಿರ್ಮಾಣ ಕೆಲಸ:**

ಆರ್ಥಿಕವಾಗಿ ಹಿಂದುಳಿದಿರುವ ಬೇಡ ಜನಾಂಗದವರು ತಮ್ಮ ದಿನನಿತ್ಯದ ಉಪಜೀವನಕ್ಕಾಗಿ ಹೊಸ ಕಟ್ಟಡ ನಿರ್ಮಾಣ ಕೆಲಸ ಕಾರ್ಯಗಳಿಗೆ ಗೌಂಡಿಗಳಾಗಿ, ದುಂಡಾಳುಗಳಾಗಿ ಕೂಲಿ ಮಾಡಲು ಹೋಗುತ್ತಾರೆ. ಇಂದಿನ ಕಾಂಕರೇಟ್ ಯುಗದಲ್ಲಿ ಕಟ್ಟಡಗಳ ನಿರ್ಮಾಣ ಹೆಚ್ಚಾಗುತ್ತಿದೆ. ಇದರ ಜೊತೆಗೆ ಕಾರ್ಮಿಕರ ಬೇಡಿಕೆಯೂ ಹೆಚ್ಚಾಗುತ್ತಿದೆ. ಪ್ರಸ್ತುತ ಗೌಂಡಿಗಳಿಗೆ ರೂ. ೪೦೦/- ಕೂಲಿ ಇದ್ದರೆ ದುಂಡಾಳುಗಳಿಗೆ ರೂ. ೩೫೦-

ಕೂಲಿ ಇದೆ. ಅದೇ ರೀತಿಯಾಗಿ ಹೆಣ್ಣಾಳುಗಳಿಗೆ ರೂ. ೧೦೦- ರಿಂದ ೧೫೦- ರೂಪಾಯಿ ದಿನಗೂಲಿ ಇದೆ. ಅಲ್ಲದೆ ಸರ್ಕಾರದಿಂದ ಸಿಸಿ ರಸ್ತೆ ನಿರ್ಮಾಣ, ಕೆನಾಲು (ಕಾಲುವೆ) ನಿರ್ಮಾಣ, ಜನತಾ ಮನೆ ನಿರ್ಮಾಣ ಕೆಲಸ ಕಾರ್ಯಗಳಿಗೆ ಹೋಗುತ್ತಿದ್ದಾರೆ. ಇದರಿಂದ ಸಂಪಾದಿಸಿದ ಹಣವನ್ನು ತಮ್ಮ ಜೀವನೋಪಾಯಕ್ಕೆ ಮತ್ತು ದಿನಬಳಕೆ ವಸ್ತುಗಳಿಗೆ ಬಳಸಿ ಕೊಳ್ಳುತ್ತಾರೆ. ಅಲ್ಲದೆ ತಾವು ಸಂಪಾದಿಸಿದ ಹಣದಲ್ಲಿ ೫೦ ರಿಂದ ೬೦ ರೂಪಾಯಿಯನ್ನು ಖಾಸಗಿ ಬ್ಯಾಂಕುಗಳಿಗೆ ಮತ್ತು ಸರ್ಕಾರಿ ಬ್ಯಾಂಕುಗಳಿಗೆ ತುಂಬಿ ಉಳಿತಾಯವನ್ನು ಮಾಡುತ್ತಾರೆ.

**ವಿವಿಧ ವಾಹನ ಚಾಲನಾ ಕೆಲಸ:**

ಬೇಡ ಯುವಕರು ಇಂದು ವಿವಿಧ ಚಾಲಕರಾಗಿ (ಡ್ರೈವರ್) ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಗ್ರಾಮಗಳಲ್ಲಿ ದೊಡ್ಡ ರೈತರ, ಶ್ರೀಮಂತರ, ಗೌಡರ ಮನೆಗಳಲ್ಲಿ ಇರುವ ಟ್ರ್ಯಾಕ್ಟರ್‌ಗಳ ಡ್ರೈವರ್‌ಗಳಾಗಿ ಕೆಲಸವನ್ನು ಮಾಡುತ್ತಿದ್ದಾರೆ. ಕೃಷಿ ಭೂಮಿಗಳಲ್ಲಿ ಟಿಲ್ಲರ್ ಹೊಡೆಯುವುದು, ಕುಂಟಿ ಹೊಡೆಯುವುದು, ಗದ್ದೆಗಳಲ್ಲಿ ಪಟ್ಲರ್ ಹೊಡೆಯುವುದು, ಟ್ರ್ಯಾಕ್ಟರ್ ವಾಹನದಿಂದ ಬೆಳೆದ ಬೆಳೆಗಳನ್ನು ಮಾರುಕಟ್ಟೆಗೆ ಸಾಗಿಸುವುದು ಮತ್ತು ಹಳ್ಳ, ನದಿ, ಹೊಳೆಗಳಿಂದ ಮರಳನ್ನು (ಉಸುಗು) ತಂದು ಪಟ್ಟಣ ಪ್ರದೇಶಗಳಲ್ಲಿ ನಡೆಯುವ ಕಟ್ಟಡ ಕೆಲಸಗಳಿಗೆ ನೀಡುವುದು. ಈ ರೀತಿಯಾಗಿ ಕೆಲವು ಅನಕ್ಷರಸ್ಥ ಬೇಡರು ಟ್ರ್ಯಾಕ್ಟರ್ ವಾಹನ ಚಾಲಕರಾಗಿ ಯಜಮಾನರಿಂದ ತಿಂಗಳಿಗೆ ೨ ಸಾವಿರದಿಂದ ೩ ಸಾವಿರ ಸಂಬಳವನ್ನು ಪಡೆದು ಸ್ವಾಭಿಮಾನದ ಬದುಕನ್ನು ಸಾಗಿಸುತ್ತಿದ್ದಾರೆ. ಅಲ್ಲದೆ ಟಾಟಾಸುಮೊ, ಇಂಡಿಕಾ ವಾಹನಗಳ ಚಾಲಕರಾಗಿಯೂ ಕಾರ್ಯ ನಿರ್ವಹಿಸುತ್ತಿದ್ದಾರೆ. ಇದರಿಂದ ಬಂದಂತಹ ಹಣದಿಂದ ತಮ್ಮ ಕುಟುಂಬದ ಜೀವನವನ್ನು ಸಾಗಿಸುತ್ತಿದ್ದಾರೆ.

**ಸರ್ಕಾರಿ ಉದ್ಯೋಗ:**

ಶಹಾಪುರ ತಾಲೂಕು ಅತೀ ಹೆಚ್ಚಿನ ಬೇಡ ಜನಸಂಖ್ಯೆಯನ್ನು ಹೊಂದಿರುವ ಪ್ರದೇಶ. ಆರ್ಥಿಕವಾಗಿ ಇಲ್ಲಿನ ಬೇಡರು ಹಿಂದೆ ಉಳಿದರೂ ಕೆಲವು ಜನ ಬೇಡರು ಅನೇಕ ಸರ್ಕಾರಿ ಉದ್ಯೋಗದಲ್ಲಿ ತೊಡಗಿದ್ದಾರೆ. ಶಿಕ್ಷಕರಾಗಿ, ಉಪನ್ಯಾಸಕರಾಗಿ, ಆರ್.ಎಮ್.ಪಿ. ವೈದ್ಯರಾಗಿ ವಿಶ್ವವಿದ್ಯಾಲಯಗಳ ರಿಜಿಸ್ಟರ್‌ಗಳಾಗಿ, ನೀರಾವರಿ ಇಲಾಖೆಯ ಅಧಿಕಾರಿಗಳಾಗಿ, ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇಂತಹ ನೂರಾರು ಜನ ಬೇಡ ಯುವಕರು ಸರ್ಕಾರಿ ನೌಕರಿಯಲ್ಲಿ ಇದ್ದುದ್ದನ್ನು ನೋಡಬಹುದು.

**ಉರುವಲು ಕಟ್ಟಿಗೆ ವ್ಯಾಪಾರ:** ಶಹಾಪೂರ ತಾಲೂಕಿನ ಗ್ರಾಮಗಳಲ್ಲಿ ಬೇಡರು ತೀರಾ ಕಡುಬಡತನದಿಂದ ನರಳುತ್ತಿದ್ದಾರೆ. ಉದಾ: ನಾಗನಟಗಿ, ಸಗರ, ವನದುರ್ಗ, ಮುಡಬೂಳ, ಬಾಣತಿಹಾಳ ಇನ್ನಿತರ ಗ್ರಾಮಗಳಲ್ಲಿ ಬೇಡ ಮಹಿಳೆಯರು ಮತ್ತು ಪುರುಷರು

ಬೆಟ್ಟ ಗುಡ್ಡಗಳಿಗೆ ಹೋಗಿ ಜಾಲಿ ಮರ, ಒಣಗಿದ ಮರಗಳನ್ನು ಕಡೆದು ಪಟ್ಟಣ ಪ್ರದೇಶಕ್ಕೆ ಮಾರಲು ಹೋಗುತ್ತಾರೆ. ಒಂದು ಮಣ ಕಟ್ಟಿಗೆಗೆ ರೂ. ೫೦ ರಿಂದ ೬೦/– ರೂಪಾಯಿ ಬೆಲೆ ಇದೆ. ಒಂದು ದಿನಕ್ಕೆ ೩–೪ ಮಣ ಕಟ್ಟಿಗೆಯನ್ನು ಮಾರಾಟ ಮಾಡಿ ದಿನಕ್ಕೆ ರೂ. ೧೫೦/– ರಿಂದ ೩೦೦/– ರೂಪಾಯಿಗಳ ವರೆಗೆ ಹಣವನ್ನು ಸಂಪಾದಿಸಿ ಪೇಟೆಯಿಂದ ಬರುವಾಗ ತಮ್ಮ ದಿನನಿತ್ಯದ ಆಹಾರ ಧಾನ್ಯಗಳನ್ನು ಕೊಂಡು ಕೊಂಡು ಬರುತ್ತಾರೆ. ಹೀಗೆ ಮಳೆಯೆನ್ನದೆ, ಗಾಳಿ, ಬಿಸಿಲೆನ್ನದೇ ಬೆಟ್ಟ ಗುಡ್ಡಕ್ಕೆ ಹೋಗಿ ಕಟ್ಟಿಗೆಯನ್ನು ಸಂಗ್ರಹಿಸುವುದು ಈ ಪ್ರದೇಶದಲ್ಲಿ ಸರ್ವೇ ಸಾಮಾನ್ಯವಾಗಿದೆ ಎಂದು ಹೇಳಬಹುದು.'[೩]

**ಜೇವರ್ಗಿ ಬೇಡರ ಆರ್ಥಿಕ ಜೀವನ:**

'ಫಲವತ್ತಾದ ಕೃಷಿ ಭೂಮಿ ಬಯಲು ಪ್ರದೇಶವನ್ನು ಹೊಂದಿರುವ ಈ ತಾಲೂಕು ಆರ್ಥಿಕವಾಗಿ ತೀರಾ ಹಿಂದುಳಿದಿರುವ ಪ್ರದೇಶವಾಗಿದೆ. ಸಂಪೂರ್ಣವಾಗಿ ನೀರಾವರಿ ಸೌಲಭ್ಯವನ್ನು ಹೊಂದಿರದ ಈ ತಾಲೂಕು ಮಳೆಯನ್ನು ಅವಲಂಬಿಸಿದೆ. ೨೦೧೦–೧೧ ಮತ್ತು ೨೦೧೨ನೇ ಇಸ್ವಿಯಲ್ಲಿ ಈ ಪ್ರದೇಶ ತೀವ್ರ ಬರಗಾಲವನ್ನು ಅನುಭವಿಸಿದೆ. ೧೪೫ ಗ್ರಾಮಗಳನ್ನು ಒಳಗೊಂಡಿರುವ ಈ ತಾಲೂಕು ಅನಕ್ಷರತೆ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿದೆ.'[೪] ಕೆಲವು ಗ್ರಾಮಗಳು ಮಾತ್ರ ಸೌಲಭ್ಯಗಳನ್ನು ಒಳಗೊಂಡಿದೆ. ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಧರ್ಮಸಿಂಗ್ ಅವರು ಇದೇ ಕ್ಷೇತ್ರದಿಂದಲೇ ಸುಮಾರು ೬ ಸಲ ಶಾಸಕರಾಗಿ ಸಚಿವರಾಗಿ ಆಯ್ಕೆಯಾಗಿದ್ದಾರೆ. ಹಾಗೂ ಬೀದರ್ ಜಿಲ್ಲೆಯ ಲೋಕಸಭೆ ಸದಸ್ಯರಾಗಿ ಮಂತ್ರಿಗಳಾಗಿದ್ದರು. ಅಲ್ಪ ಸ್ವಲ್ಪ ಅಭಿವೃಧಿ ಕೆಲಸ ಕಾರ್ಯಗಳನ್ನು ಮಾಡಿದ್ದು ಬಿಟ್ಟರೆ ಹೇಳಿಕೊಳ್ಳುವಂತಹ ಅಭಿವೃದ್ಧಿ ಕಾರ್ಯಗಳು ಆಗಿಲ್ಲ. ಅಲ್ಲದೆ ನರಬೋಳಿ ಗ್ರಾಮದ ದೊಡ್ಡಪ್ಪ ಗೌಡ ನರಬೋಳಿ ಈ ಕ್ಷೇತ್ರದ ಶಾಸಕರಾಗಿದ್ದರು. ಇವರ ಅವಧಿಯಲ್ಲಿಯೂ ಕೂಡ ಅಭಿವೃದ್ಧಿಯಾಗಲಿಲ್ಲ. ಇವರ ಸ್ವಗ್ರಾಮವಾದ ನರಬೋಳಿಯು ಸಂಪೂರ್ಣ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿದೆ. ಈ ಗ್ರಾಮದಲ್ಲಿ ನೀರಿನ ಸೌಕರ್ಯವನ್ನು ಒದಗಿಸಿದ್ದು ಬಿಟ್ಟರೆ ಗ್ರಾಮದ ಪರಿಸರ ನೈರ್ಮಲ್ಯದಿಂದ ಕೂಡಿದೆ. ಪ್ರಸ್ತುತ ಈಗ ಮಾಜಿ ಮುಖ್ಯಮಂತ್ರಿಗಳಾದ ಧರ್ಮಸಿಂಗ್ ಅವರ ಪುತ್ರ ಅಜಯಸಿಂಗ್ ಈ ಕ್ಷೇತ್ರದ ಶಾಸಕರಾಗಿದ್ದು ಈಗಲೂ ಕೂಡಾ ಜೇವರ್ಗಿ ತಾಲೂಕು ಹೇಳಿಕೊಳ್ಳುವಂತಹ ಅಭಿವೃದ್ಧಿ ಹೊಂದಿಲ್ಲ. ಇದೇ ತಾಲೂಕಿನಲ್ಲಿ ಬರುವ ಗೂಡುರು ಗ್ರಾಮ, ಬಿರಾಳ ಗ್ರಾಮಗಳು ಆರ್ಥಿಕ ಸಂಕಷ್ಟಕ್ಕೆ ಸಿಲುಕಿವೆ. ಈ ಗ್ರಾಮಗಳು ಮಾತ್ರವಲ್ಲದೇ ಇಲ್ಲಿ ವಾಸಿಸುವ ಬಹುತೇಕ ಜನರು ಆರ್ಥಿಕ ಸಂಕಷ್ಟಕ್ಕೆ ಸಿಲುಕಿ ನರಳುವಂತಾಗಿದೆ.

**ಕೃಷಿ ಅಥವಾ ಬೇಸಾಯ:**

ಈ ಪ್ರದೇಶದ ಬೇಡ ಸಮುದಾಯದವರು ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಸರಿದೂಗಿಸಿಕೊಳ್ಳಲು ಕೃಷಿ ಅಥವಾ ವ್ಯವಸಾಯವನ್ನು ಅವಲಂಜಿಸಿದ್ದಾರೆ. ಬಹುತೇಕ

ಜನ ಬೇಡರು ೩ ರಿಂದ ೬ ಎಕರೆ ಕೃಷಿ ಭೂಮಿಯನ್ನು ಹೊಂದಿದ್ದರೆ, ಬೆರಳಣಿಕೆಯಷ್ಟು ಶ್ರೀಮಂತ ಬೇಡರು ೯ ರಿಂದ ೧೦ ಎಕರೆವರೆಗೆ ಫಲವತ್ತಾದ ಕೃಷಿ ಭೂಮಿಯನ್ನು ಹೊಂದಿದ್ದಾರೆ. ಆದರೆ ಕೆಲವು ಜನ ಬೇಡರಿಗೆ ಕೃಷಿ ಭೂಮಿಗಳೇ ಇಲ್ಲ. ಬೇಡರು ತಮ್ಮ ಭೂಮಿಗಳಲ್ಲಿ ತೊಗರಿ, ಹತ್ತಿ, ಕಬ್ಬು, ಜೋಳ ಇನ್ನಿತರ ಧವಸ ಧಾನ್ಯಗಳನ್ನು ಬೆಳೆದರೆ ತೊಗರಿ ಬೇಳೆಯನ್ನು ಮಾತ್ರ ಹೆಚ್ಚಾಗಿ ಬೆಳೆಯುತ್ತಾರೆ. ಒಂದು ಎಕರೆ ಕೃಷಿ ಭೂಮಿಯಲ್ಲಿ ೮ ರಿಂದ ೧೦ ಚೀಲ ತೊಗರಿಯನ್ನು ಬೆಳೆಯುತ್ತಾರೆ. ಆದ್ದರಿಂದ ಈ ಜೇವರ್ಗಿ ತಾಲೂಕನ್ನು ತೊಗರಿಯ ಕಣಜ ಎಂದು ಕರೆಯುತ್ತಾರೆ. ಮಾರುಕಟ್ಟೆಯಲ್ಲಿ ಈಗ ಒಂದು ಕ್ವಿಂಟಲ್ ತೊಗರಿ ೩ ಸಾವಿರದಿಂದ ೪ ಸಾವಿರ ರೂಪಾಯಿ ಬೆಲೆಯಿರುವುದರಿಂದ ಪ್ರತಿ ಅವಧಿಗೆ ೪೦ ಸಾವಿರದಿಂದ ೬೦ ಸಾವಿರ ಹಣವನ್ನು ಈ ಬೆಳೆಯಿಂದ ಪಡೆಯುತ್ತಾರೆ. ಹೀಗೆ ಮಳೆಗಾಲದಲ್ಲಿ ಇವರಿಗೆ ಸುಗ್ಗಿಯ ಕಾಲ ಎಂದು ಕರೆಯಬಹುದು. ಒಂದು ವೇಳೆ ಮಳೆ ಕಡಿಮೆಯಾದರೆ ಬರಗಾಲ ಆವರಿಸಿದಾಗ ಸಂಕಷ್ಟಕ್ಕೆ ಸಿಲುಕುತ್ತಾರೆ. ಬೇಡರು ಕೃಷಿಯಿಂದ ಗಳಿಸಿದ ಹಣದಲ್ಲಿ ಮದುವೆ ಮತ್ತು ಹಬ್ಬ ಹರಿದಿನಗಳಿಗಾಗಿ ಮಾಡುವ ಖರ್ಚಿನ ಪ್ರಮಾಣ ಅತ್ಯಂತ ಅಧಿಕವಾಗಿರುವುದರಿಂದ ಆರ್ಥಿಕ ಸಂಕಷ್ಟಕ್ಕೆ ಸಿಲುಕುತ್ತಾರೆ. ಆದ್ದರಿಂದ ಈ ತಾಲೂಕಿನ ಆರ್ಥಿಕತೆಯು ಪ್ರಧಾನವಾಗಿ ಕೃಷಿ ಸ್ವರೂಪದ್ದಾಗಿದೆ ಎಂದು ಹೇಳಬಹುದು.

**ಗಣಿಗಾರಿಕೆ ಕೆಲಸ:**

ಜೇವರ್ಗಿ ತಾಲೂಕಿನ ಸೀಮೆಯ ಒಳಗಡೆ ಅಲ್ಲಲ್ಲಿ ಪಾಟಿ ಕಲ್ಲಿನ ಗಣಿಗಾರಿಕೆ ನಡೆಯುತ್ತದೆ. ಅಂದರೆ ಭೂಮಿಯ ೨ ಅಡಿಯ ಆಳದಲ್ಲಿ ಫರ್ಸಿ ಕಲ್ಲು (ಪಾಟಿ ಕಲ್ಲು) ದೊರೆಯುತ್ತದೆ. ಇದರಿಂದ ಕೆಲವು ಕಡೆ ಫಲವತ್ತಾದ ಕೃಷಿ ಭೂಮಿಗಳು ಹಾಳಾಗಿದ್ದು ಸರ್ವೇಸಾಮಾನ್ಯವಾಗಿದೆ. ಈ ಫರ್ಸಿಕಲ್ಲು ಮನೆಯ ಕಟ್ಟಡಗಳಿಗೆ ಮತ್ತು ಸಿಮೆಂಟ್ ತಯಾರಿಕೆಗೆ ಬಳಕೆಯಾಗುತ್ತದೆ. ಜೇವರ್ಗಿಯ ಸಮೀಪದಲ್ಲಿ ಅಂದರೆ ವಾಡಿಯಲ್ಲಿ ಎ.ಸಿ.ಸಿ. ಸಿಮೆಂಟ್ ಕಾರ್ಖಾನೆ ಇದೆ. ಈ ಕಾರ್ಖಾನೆಗೆ ಈ ಕಲ್ಲುಗಳಿಗೆ ಬೇಡಿಕೆ ಹೆಚ್ಚಾಗಿದೆ. ಅಲ್ಲದೆ ಗಣಿಗಾರಿಕೆಯಿಂದ ತೆಗೆದ ಈ ಪಾಟಿಕಲ್ಲುಗಳನ್ನು ದೂರದ ಗುಲ್ಬರ್ಗಾ, ಬೀದರ್, ಶಹಾಪೂರ, ಸುರಪುರ, ಲಿಂಗಸೂರು ಇನ್ನಿತರ ನಗರಗಳಿಗೆ ಸಾಗಿಸುತ್ತಾರೆ. ಆದ್ದರಿಂದ ಇದು ಲಾಭದ ಉದ್ಯಮವಾಗಿದೆ ಎಂದು ಹೇಳಬಹುದು. ಈ ಗಣಿಗಾರಿಕೆಯಲ್ಲಿ ಎಲ್ಲಾ ಜಾತಿ ಜನಾಂಗದವರಂತೆ ಬೇಡರು ಕೂಡಾ ಕೂಲಿ ಕೆಲಸ ಮಾಡಲು ಮತ್ತು ಫರ್ಸಿ ಕಲ್ಲುಗಳನ್ನು ತೆರೆಯಲು ಹೋಗುತ್ತಾರೆ. ಗಣಿಗಾರಿಕೆ ನಡೆಸುವ ಮಾಲಿಕರು ಅಥವಾ ಗುತ್ತಿಗೆದಾರರು ಬೇಡ ಕೂಲಿಕಾರರಿಗೆ ಮಹಿಳೆಯರಿಗೆ ೧೦೦ ರೂಪಾಯಿಯಂತೆ ಪುರುಷರಿಗೆ ೨೫೦ ರೂಪಾಯಿಯಂತೆ ಕೂಲಿ ನೀಡುತ್ತಾರೆ. ನೂರಾರು ವರ್ಷದಿಂದ ಈ ರೀತಿಯ ಗಣಿಗಾರಿಕೆಯಲ್ಲಿ ಕೆಲಸ ಕಾರ್ಯವನ್ನು ಮಾಡುತ್ತಾ ಬಂದಿರುವ ಈ ಜನ ಇದನ್ನೇ

ನಂಬಿದ್ದಾರೆ. ಇದು ಅವರಿಗೆ ಜೀವನಾಧಾರವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಈ ಗಣಿಗಾರಿಕೆ ಬಡ ಬೇಡರು ಆರ್ಥಿಕ ಜೀವನಕ್ಕೆ ಸಹಕಾರಿಯಾಗಿದೆ.

**ಗುತ್ತಿಗೆದಾರರ ವೃತ್ತಿ (ಕಂಟ್ರ್ಯಾಕ್ಟರ್)**

ಜೇವರ್ಗಿ ತಾಲೂಕಿನ ಕೆಲವು ಜನ ಅಕ್ಷರಸ್ಥ ಬೇಡ ನಾಯಕರು ಗುತ್ತಿಗೆ ಕೆಲಸವನ್ನು ಮಾಡುತ್ತಿದ್ದಾರೆ. ಪ್ರಥಮ ದರ್ಜೆ ಮತ್ತು ದ್ವಿತೀಯ ದರ್ಜೆ ಕಂಟ್ರ್ಯಾಕ್ಟರ್ ಲೈಸೆನ್ಸ್ ಹೊಂದಿರುವ ನಾಯಕರು ಸರ್ಕಾರದ ಯೋಜನೆಗಳಿರುವ ಸಿಮೆಂಟ್ ರೋಡ್, ಕಾಲುವೆ ನಿರ್ಮಾಣ, ನೀರಿನ ಟ್ಯಾಂಕ್ ನಿರ್ಮಾಣ, ಅಂಗನವಾಡಿ ಕೇಂದ್ರ ಕಟ್ಟಡಗಳ ನಿರ್ಮಾಣ ಇನ್ನಿತರ ಸರಕಾರಿ ಕಾಮಗಾರಿಗಳನ್ನು ಗುತ್ತಿಗೆ ಪಡೆದು ಕಾಮಗಾರಿ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿಸುತ್ತಿದ್ದಾರೆ. ಸುಮಾರು ೨೫ ಲಕ್ಷದಿಂದ ೧ ಕೋಟಿಯ ಕಾಮಗಾರಿ ಕೆಲಸ ಮಾಡಿರುವರು. ಉದಾ: ನರಬೋಳಿ ಗ್ರಾಮದ ಗುರುರಾಜ ಸುಬೇದಾರ, ಬಿರಾಳ ಗ್ರಾಮದ ಪರಮೇಸಿ ನಾಯಕ ಇನ್ನಿತರ ವಾಲ್ಮೀಕಿ ನಾಯಕ ಮುಖಂಡರು ಅನೇಕ ಗುತ್ತಿಗೆ ಕೆಲಸವನ್ನು ಮಾಡಿಸಿ ಒಳ್ಳೆ ಹೆಸರನ್ನು ಗಳಿಸಿದ್ದಾರೆ. ಹೀಗೆ ಈ ಸರಕಾರದ ಗುತ್ತಿಗೆ ಕೆಲಸದಿಂದ ಉಳಿತಾಯವಾದ ಹಣದಿಂದ ಆರ್ಥಿಕವಾಗಿ ಸಫಲರಾಗಿದ್ದಾರೆ.

**ಚಿಕ್ಕ ಹೋಟೆಲ್ ಉದ್ಯಮ:**

ಜೇವರ್ಗಿಯ ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ಬೇಡರು ತಕ್ಕ ಮಟ್ಟಿಗೆ ಚಿಕ್ಕ ಹೋಟೇಲುಗಳನ್ನು ಇಟ್ಟುಕೊಂಡು ವ್ಯಾಪಾರ ಮಾಡುತ್ತಿದ್ದಾರೆ. ಅಂತಹ ಹೇಳಿಕೊಳ್ಳುವಂತಹ ಲಾಭವಿಲ್ಲದಿದ್ದರೂ ತಮ್ಮ ಉಪಜೀವನಕ್ಕೆ ಆಗುವಷ್ಟು ಅಲ್ಪ ಪ್ರಮಾಣದ ಲಾಭವನ್ನು ಪಡೆದು ಜೀವನವನ್ನು ಸಾಗಿಸುತ್ತಿದ್ದಾರೆ. ಹೀಗೆ ಜೇವರ್ಗಿ ಭೀಮಾನದಿಯ ದಡದ ಹತ್ತಿರ ಬೇಡರ ಹೋಟೇಲುಗಳನ್ನು ಇಂದಿಗೂ ಕಾಣಬಹುದು. ಆ ಚಿಕ್ಕ ಹೋಟೇಲಗಳಲ್ಲಿ ಮಂಡಾಳ ವಗ್ಗರಣೆ ಮತ್ತು ಚಹಾ ಚೂಡಾ ಬಿಟ್ಟರೆ ಮತ್ತೇನೂ ದೊರೆಯುವುದಿಲ್ಲಾ. ಕೇವಲ ತಮ್ಮ ಜೀವನ ನಿರ್ವಹಣೆಗಾಗಿ ಈ ಹೋಟೇಲುಗಳನ್ನು ಇಟ್ಟುಕೊಂಡಿದ್ದಾರೆ. ಇದರಿಂದ ಇವರು ದಿನ ನಿತ್ಯ ರೂ. ೫೦೦ ರಿಂದ ೬೦೦/- ರೂಪಾಯಿ ಸಂಪಾದಿಸುತ್ತಾರೆ. ಇದರಲ್ಲಿ ೫೦ ರಿಂದ ೧೦೦/- ರೂಪಾಯಿ ಉಳಿತಾಯ ಖಾತೆಗೆ ತುಂಬಿದರೆ ಉಳಿದಿದ್ದನ್ನು ದಿನ ಬಳಿಕೆ ವಸ್ತುಗಳಿಗೆ ಮತ್ತು ತಮ್ಮ ಜೀವನಕ್ಕೆ ಬಳಸಿಕೊಳ್ಳುತ್ತಾರೆ.

**ಆರ್ಥಿಕ ಜೀವನಾಧಾರಕ್ಕಾಗಿ ವಲಸೆ**

ಸಗರ ನಾಡಿನ ಕೊನೆಯ ಭಾಗ ಜೇವರ್ಗಿ ತಾಲೂಕಿನಲ್ಲಿ ಬೇಡ ಸಮುದಾಯದಲ್ಲಿ ವಲಸೆ ಅಧಿಕ ಪ್ರಮಾಣದಲ್ಲಿದೆ. ಇಲ್ಲಿ ಗಮನಿಸಿದಂತೆ ಬಡ ಬೇಡ ಕುಟುಂಬಗಳು ಅನಾರೋಗ್ಯ ಮತ್ತು ಬೆಳೆ ವಿಫಲತೆಯಿಂದಾಗಿ ಅಧಿಕ ಅನಿರೀಕ್ಷಿತ ವೆಚ್ಚಕ್ಕೆ ಗುರಿಯಾಗುತ್ತದೆ. ಬಹುತೇಕವಾಗಿ ಸಾಲಗಳ ಮೂಲಕ ಈ ವೆಚ್ಚಗಳನ್ನು ಭರಿಸಲಾಗುತ್ತದೆ. ಸಾಲದ ಬಾಧೆಯಿಂದ

ಕುಟುಂಬದ ಸದಸ್ಯರು ನಗರ ಪ್ರದೇಶಗಳಿಗೆ ವಲಸೆ ಹೋಗಿ ಹೆಚ್ಚು ವರಮಾನ ತರುವಂತಹ ಉದ್ಯೋಗಗಳನ್ನು ಪಡೆದು ಮಾಡಿದ ಸಾಲವನ್ನು ತೀರಿಸುವ ಅನಿವಾರ್ಯತೆಗೆ ಅವರು ಸಿಲುಕಿಕೊಳ್ಳುತ್ತಾರೆ. ಸಾಲವನ್ನು ಹಿಂದುರಿಗಿಸಲು ಒತ್ತಾಯ ಉಂಟಾಗುತ್ತದೆ. ಬೇಡ ಕುಟುಂಬದ ಯುವಕರು ವಯಸ್ಸಾದ ಪಾಲಕರನ್ನು ಬಿಟ್ಟು ಬೆಂಗಳೂರು ಹೈದ್ರಾಬಾದ ಮುಂಬಯಿಗಳ ಕಡೆಗೆ ಸಾಗುತ್ತಾರೆ. ಇನ್ನು ಕೆಲವು ಪ್ರಕರಣಗಳಲ್ಲಿ ಕೇವಲ ಬೇಡ ಪುರುಷ ಸದಸ್ಯರು ತಮ್ಮ ಹೆಂಡತಿ ಮಕ್ಕಳನ್ನು ಬಿಟ್ಟು ಹೊರ ಹೋಗುತ್ತಾರೆ. ದುಡಿಮೆ ಮತ್ತು ಕುಟುಂಬವನ್ನು ನೋಡಿಕೊಳ್ಳುವ ೨ ಹೊರೆಗಳು ಮಹಿಳೆಯ ಮೇಲೆ ಬೀಳುತ್ತದೆ.

**ಸರ್ಕಾರಿ ಉದ್ಯೋಗ:**

ಜೇವರ್ಗಿ ತಾಲೂಕಿನಲ್ಲಿ ಬೇಡ ಜನಾಂಗದವರು ಕೇವಲ ೧೮ ರಿಂದ ೨೦ ಸಾವಿರ ಜನಸಂಖ್ಯೆ ಇದೆ. ಆದ್ದರಿಂದ ಈ ತಾಲೂಕಿನಲ್ಲಿ ಇವರ ಪ್ರಭಾವ ಕಡಿಮೆ ಎಂದು ಹೇಳಬಹುದು. ಕೆಲವು ಗ್ರಾಮಗಳಲ್ಲಿ ಮಾತ್ರ ಇವರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿದ್ದು ಇಂತಹ ಗ್ರಾಮಗಳಲ್ಲಿ ಮಾತ್ರ ಇವರ ಪ್ರಭಾವವಿದೆ. ಶಿಕ್ಷಣದ ಅರಿವನ್ನು ಮೂಡಿಸಿಕೊಂಡಿರುವ ಇಂದಿನ ಆಧುನಿಕ ಯುಗದ ಬೇಡರು ತಮ್ಮ ಮಕ್ಕಳಿಗೆ ಹೆಚ್ಚಿನ ಶಿಕ್ಷಣವನ್ನು ಕೊಡಿಸಿ ಸರ್ಕಾರಿ ಉದ್ಯೋಗ ಮಾಡಲು ಅನುಕೂಲ ಮಾಡಿಕೊಟ್ಟಿದ್ದಾರೆ. ಈ ಮೊದಲು ಕೂಲಿ ಕೆಲಸಗಾರರು ಗಾರೆ ಕೆಲಸ, ಸಿಮೆಂಟ್ ಕಾರ್ಖಾನೆಯಲ್ಲಿ ಕಾರ್ಮಿಕರಾಗಿ ಪಾಟಿಕಲ್ಲನ್ನು ಗಣಿಗಾರಿಕೆಯಲ್ಲಿ ತಮ್ಮ ಆರ್ಥಿಕ ಜೀವನವನ್ನು ನಿಭಾಯಿಸಿಕೊಳ್ಳುತ್ತಿದ್ದರು. ಆದರೆ ಪ್ರಸ್ತುತ ದಿನಮಾನಗಳಲ್ಲಿ ಶಿಕ್ಷಣವನ್ನು ಕಲಿತವರು ಇಂದು ನೂರಾರು ಸಂಖ್ಯೆಯಲ್ಲಿ ಸರಕಾರಿ ಉದ್ಯೋಗದಲ್ಲಿದ್ದಾರೆ. ಉದಾಹರಣೆ ಆಂದೋಲದ ಹಣಮಂತ್ರಾಯ ಹವಾಲ್ದಾರ, ದೊಡ್ಡಪ್ಪ ಸುಬೇದಾರ ನರಬೊಳಿ ಇವರು ಶಿಕ್ಷಕರಾಗಿ ಸೇವೆಯಲ್ಲಿ ನಿರತಾಗಿದ್ದಾರೆ. ಅಲ್ಲದೆ ಶಿವಪ್ಪ ತಂ/ ಪಿಡ್ಡಪ್ಪ ರಾವೂರ, ಕೃಷ್ಣ ಸುಬೇದಾರ ಜೇವರ್ಗಿ ಇವರು ಪೋಲೀಸ್ ಇಲಾಖೆಯಲ್ಲಿ ಎ.ಎಸ್.ಐ. ಆಗಿ ಸೇವೆ ಸಲ್ಲಿಸುತ್ತಿದ್ದಾರೆ. ಹಾಗೆಯೇ ರಾಜು ವಿ. ಸುಬೇದಾರ ಜೇವರ್ಗಿ, ಮಲ್ಲಿಕಾರ್ಜುನ ಇವರು ವಾಡಿ ರೈಲ್ವೇ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಸಿದ್ದಣ್ಣ ಇವರು ಕೋಡಚಿ ಗ್ರಾಮದವರು. ಇವರು ಕೂಡಾ ಪೋಲೀಸ್ ಇಲಾಖೆಯಲ್ಲಿ ಇದ್ದಾರೆ. ಹಾಗೆಯೇ ಇಜೇರಿ ಗ್ರಾಮದ ಸೈದಪ್ಪ ಇವರು ಶಿಕ್ಷಕರಾಗಿದ್ದಾರೆ. ಹಾಗೂ ನರಬೋಳಿ ಗ್ರಾಮದ ಶರಣಪ್ಪ ಸುಬೇದಾರ ಇವರು ಪೋಲೀಸ್ ಇಲಾಖೆಯಲ್ಲಿ ಸಿ.ಪಿ.ಐ. ಅಧಿಕಾರಿಗಳಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇಂತಹ ನೂರಾರು ಜನರು ಬೇಡರು ಇಂದೂ ಸರಕಾರದ ವಿವಿಧ ಇಲಾಖೆಗಳಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇಂತಹ ಸರಕಾರಿ ಉದ್ಯೋಗಗಳು ಬೇಡರ ಆರ್ಥಿಕ ಜೀವನಕ್ಕೆ ಭದ್ರ ಬುನಾದಿಯಾಗಿದೆ ಎಂದು ಹೇಳಬಹುದು. ಸರಕಾರಿ ಉದ್ಯೋಗದಲ್ಲಿರುವ ಇಂದಿನ ಕೆಲವು ಜನ ಬೇಡರು ತಮ್ಮ ಆರ್ಥಿಕ ಸ್ಥಿತಿಗತಿಯನ್ನು ಉತ್ತಮ ಪಡೆಸಿಕೊಂಡಿದ್ದಾರೆ. ಸರಕಾರದ ಉದ್ಯೋಗದ ಮೀಸಲಾತಿಯನ್ನು ಸದುಪಯೋಗ

ಪಡಿಸಿಕೊಂಡು ಎಲ್ಲಾ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವುದು ಇವರ ಜಾಣತನವನ್ನು ತೋರಿಸುತ್ತದೆ.

**೬.೨ ಸಗರನಾಡಿನ ಬೇಡರು ಆರ್ಥಿಕವಾಗಿ ಹಿಂದುಳಿದಿರುವಿಕೆಗೆ ಪ್ರಮುಖ ಕಾರಣಗಳು:**

- 'ಅನಕ್ಷರತೆ ಮತ್ತು ಶಿಕ್ಷಣದ ಕೊರತೆ
- ಸಾಂಪ್ರದಾಯಿಕ ಕೃಷಿ ಪದ್ಧತಿ
- ಬೇಡರಲ್ಲಿರುವ ಸೋಮಾರಿತನ ಮತ್ತು ಅಲಕ್ಷತೆ
- ತಮ್ಮ ಅನುಭೋಗಕ್ಕಾಗಿ (ಉತ್ಪಾದನಾ ಉದ್ದೇಶಕ್ಕಲ್ಲ) ಸಾಲಮಾಡಿಕೊಳ್ಳುವುದು
- ಜೀವನೋಪಾಯಕ್ಕಾಗಿ ದೈಹಿಕ ಶ್ರಮವನ್ನು ಆಶ್ರಯಿಸಿಕೊಂಡಿರಬೇಕಾದ ಸ್ಥಿತಿ
- ಬೇಡರಲ್ಲಿರುವ ಅತಿಯಾದ ಸಂತಾನ
- ಇವರ ಮೇಲೆ ನಡೆದಿರುವ ಶೋಷಣೆಗಳು
- ಬ್ಯಾಂಕು ಮತ್ತಿತರ ಆಧುನಿಕ ಆರ್ಥಿಕ ಸೌಲಭ್ಯಗಳ ಕೊರತೆ
- ನಿರುದ್ಯೋಗ ಸಮಸ್ಯೆ
- ಸರ್ಕಾರದ ಮೀಸಲಾತಿಯನ್ನು ಸದುಪಯೋಗ ಪಡೆಯದೇ ಇರುವುದು
- ಕಾನೂನಿನ ಅರಿವು ಇನ್ನೂ ಇಲ್ಲದೇ ಇರುವುದು'[೬]

ಈ ಮೇಲಿನ ಎಲ್ಲಾ ಅಂಶಗಳು ಬೇಡರು ಆರ್ಥಿಕವಾಗಿ ಹಿಂದುಳಿದಿರುವುದಕ್ಕೆ ಪ್ರಮುಖ ಕಾರಣವಾಗಿದೆ ಎಂದು ಹೇಳಬಹುದು.

**೬.೩ ಸಗರನಾಡಿನ ಬೇಡರು ಆರ್ಥಿಕವಾಗಿ ಸಬಲರಾಗಿರುವುದಕ್ಕೆ ಪ್ರಮುಖ ಕಾರಣಗಳು:**

- ಬೇಡರಲ್ಲಿ ಮೂಡಿರುವ ಶಿಕ್ಷಣದ ಅರಿವು
- ಆಧುನಿಕ ಬೇಸಾಯ ಪದ್ಧತಿಯನ್ನು ಅಳವಡಿಸಿಕೊಂಡಿರುವುದು
- ತಮ್ಮ ದಿನನಿತ್ಯದ ಉಪಜೀವನಕ್ಕಾಗಿ ಕೂಲಿ ಕೆಲಸ ಮಾಡಿಕೊಂಡಿರುವುದು
- ಬೇಡರು ಇಂದು ಎಣ್ಣೆ ಮಿಲ್‌ಗಳಲ್ಲಿ ಕಂಕರ್ ಕಾರ್ಖಾನೆಗಳಲ್ಲಿ ವಿವಿಧ ಅಂಗಡಿಗಳಲ್ಲಿ ಗಣಿಗಾರಿಕೆಯಲ್ಲಿ ಸಿಮೆಂಟ್ ಕಾರ್ಖಾನೆಗಳಲ್ಲಿ ಕಾರ್ಮಿಕರಾಗಿ ದುಡಿಯುತ್ತಿರುವುದು
- ಸರಕಾರಿ ಉದ್ಯೋಗವನ್ನು ಮಾಡುತ್ತಿರುವುದು
- ಬೇಟೆ ಪದ್ಧತಿ ನಶಿಸಿ ಹೋಗುತ್ತಿರುವುದು
- ಇವರಲ್ಲಿ ಅಹಂಭಾವ ಮತ್ತು ಸೋಮಾರಿತನ ಕಡಿಮೆಯಾಗುತ್ತಿರುವುದು

•ಸರ್ಕಾರದ ಮಹಾತ್ಮಾ ಗಾಂಧಿ ಉದ್ಯೋಗ ಖಾತರಿ ಯೋಜನೆಯಲ್ಲಿ ವಿವಿಧ ಕಾಮಗಾರಿಗಳನ್ನು ಮಾಡುತ್ತಿರುವುದು

•ಗುತ್ತಿಗೆ ಕೆಲಸ ಮಾಡುತ್ತಿರುವುದು

•ತಮ್ಮದೇ ಆದ ಖಾಸಗಿ ಹಣಕಾಸು ಬೇಡರ ಆರ್ಥಿಕ ಅಭಿವೃದ್ಧಿಗೆ ಕಾರಣಗಳಾಗಿವೆ ಎಂದು ಹೇಳಬಹುದು.

ಈ ಮೇಲಿನ ಎಲ್ಲಾ ಅಂಶಗಳು ಬೇಡರ ಆರ್ಥಿಕ ಅಭಿವೃದ್ಧಿಗೆ ಕಾರಣಗಳಾಗಿವೆ ಎಂದು ಹೇಳಬಹುದು.

**೬.೪ ಬೇಡ ಸಮುದಾಯದವರ ಆರ್ಥಿಕ ಅಭಿವೃದ್ಧಿಗಾಗಿ ಸರ್ಕಾರದ ವಿವಿಧ ಸೌಲಭ್ಯಗಳು ಮತ್ತು ಯೋಜನೆಗಳು:**

೧) 'ಸಂವಿಧಾನದ ೧೬(೪) ಮತ್ತು ೩೨೦(೪) ವಿಧಿಗಳ ಪ್ರಕಾರ ಉದ್ಯೋಗದಲ್ಲಿ ಬೇಡರಿಗೆ (ಎಸ್.ಟಿ.) ಸ್ಥಳವನ್ನು ಕಲ್ಪಿಸಲಾಗುತ್ತಿತ್ತು.

೨) ೧೫ನೇ ವಿಧಿ ಪ್ರಕಾರ ದೇಶದ ಯಾವುದೇ ಭಾಗದಲ್ಲಿ ಆಸ್ತಿ ಮಾಡುವ ಹಕ್ಕನ್ನು ನೀಡಲಾಗಿದೆ.

೩) ೨೭೫ನೇ ವಿಧಿಯ ಪ್ರಕಾರ "ಭಾರತದ ಸಂಚಿತ ನಿಧಿ"ಯಿಂದ ಬೇಡ ಸಮುದಾಯ (ಎಸ್.ಟಿ.) ಅಭಿವೃದ್ಧಿಗಾಗಿ ರಾಜ್ಯಗಳಿಗೆ ಆರ್ಥಿಕ ನೆರವನ್ನು ಕೇಂದ್ರವು ನೀಡುತ್ತದೆ.

೪) ೪೬ನೇ ವಿಧಿಯ ಪ್ರಕಾರ ಬೇಡ ಸಮುದಾಯ ಅಥವಾ ಆದಿವಾಸಿಗಳ ಆರ್ಥಿಕ ಮತ್ತು ಶೈಕ್ಷಣಿಕ ಆಸಕ್ತಿಗಳನ್ನು ಸಂರಕ್ಷಿಸುತ್ತದೆ.

೫) ಕೇಂದ್ರ ಸರ್ಕಾರದ ಸುಮಾರು ೬೫ ವರ್ಷಗಳಿಂದ ಪಂಚವಾರ್ಷಿಕ ಯೋಜನೆಗಳಲ್ಲಿ ಬೇಡ ಸಮುದಾಯ ಆರ್ಥಿಕ ಸ್ಥರವನ್ನು ಎತ್ತರಿಸಲು ಸಾವಿರಾರು ಕೋಟಿ ರೂಪಾಯಿಗಳನ್ನು ಖರ್ಚು ಮಾಡುತ್ತಿದೆ.'[೬]

೬) ಪರಿಶಿಷ್ಟ ಪಂಗಡ ನಿಗಮ ಮಂಡಳಿಯನ್ನು ಸ್ಥಾಪನೆ ಮಾಡಿ ಆ ಮೂಲಕ ಈ ಭಾಗದ ಬೇಡರಿಗೆ ಸಾಲ ಸೌಲಭ್ಯಗಳನ್ನು ನೀಡಲಾಗುತ್ತದೆ.

೭) 'ಕೃಷಿ ಇಲಾಖೆ: ಪರಿಶಿಷ್ಟ ಪಂಗಡ (ಬೇಡರು) ರೈತರಿಗೆ ಕೃಷಿ ಅಭಿವೃದ್ಧಿಗಾಗಿ ಕೃಷಿ ಇಲಾಖೆಯಿಂದ ಶೇ. ೧೦೦% ಸಹಾಯ ಧನದಲ್ಲಿ ೨೮,೦೦೦/- ರೂಪಾಯಿ ಬೆಲೆಯ ಕೃಷಿ ಉಪಕರಣಗಳು ರೂ. ೨೦೦೦/- ಬೆಲೆಯ ಕೃಷಿ ಸಂಸ್ಕರಣ ಅಲ್ಲದೆ ಪಾವರ್ ಟಿಲ್ಲರ್ ಖರೀದಿಗೆ ಶೇ. ೭೫% ರ ಸಹಾಯ ಧನ ಗರಿಷ್ಠ ರೂ. ೨೫,೦೦೦-

ಕ್ಕೆ ಮಿತಗೊಳಿಸಿ ನೀಡಲಾಗುತ್ತದೆ. ಹಾಗೂ ನೀರಾವರಿ ಸೌಲಭ್ಯಕ್ಕಾಗಿ ತುಂತುರು ನೀರಾವರಿ ಸೆಟ್ಟುಗಳನ್ನು ಒದಗಿಸಲಾಗುತ್ತದೆ. ಇದಲ್ಲದೆ ಬೀಜಗಳನ್ನು ಸಹ ರಿಯಾಯಿತಿ ದರದಲ್ಲಿ ಕೊಡಲಾಗುತ್ತದೆ.

೮) ತೋಟಗಾರಿಕೆ ಇಲಾಖೆ: ಈ ಇಲಾಖೆಯವತಿಯಿಂದ ಪರಿಶಿಷ್ಟ ಪಂಗಡದ ರೈತರಿಗೆ ಅರ್ಧ ಎಕರೆ ತೆಂಗಿನ ತೋಟ, ಒಂದು ಎಕರೆ ಹಣ್ಣಿನ ತೋಟ, ಅರ್ಧ ವಾಣಿಜ್ಯ ಬೆಳೆಯ ತೋಟ ಅಥವಾ ಕಾಲು ಎಕರೆ ಗುಲಾಬಿ ತೋಟವನ್ನು ನಿರ್ಮಾಣ ಮಾಡಿ ಕೊಡಲಾಗುತ್ತದೆ. ತೋಟಗಳ ಪಾಲನೆಯ ಮೊದಲನೆ ವರ್ಷದಲ್ಲಿ ಪ್ರತಿ ತಿಂಗಳಿಗೆ ೬೫೦ ರೂ. ಮತ್ತು ಎರಡನೇ ವರ್ಷದಲ್ಲಿ ಪ್ರತಿ ತಿಂಗಳಿಗೆ ೩೫೦ ರೂ.ಗಳನ್ನು ಸಹಾಯ ಧನವನ್ನಾಗಿ ಪರಿಶಿಷ್ಟ ಪಂಗಡದ ಬೇಡ ಸಮುದಾಯದ ರೈತರಿಗೆ ನೀಡಲಾಗುತ್ತದೆ.'[೮]

೯) ಮೀನುಗಾರಿಕೆ ಇಲಾಖೆ: ಈ ಇಲಾಖೆಯಲ್ಲಿ ಪರಿಶಿಷ್ಟ ಪಂಗಡದ ರೈತರಿಗೆ ಸ್ವಾವಲಂಬಿ ಜೀವನ ನಡೆಸಲು ಸಹಕಾರಿಯಾಗುವಂತೆ ಮೀನುಗಾರಿಕೆಯಲ್ಲಿ ತರಬೇತಿ ನೀಡಲಾಗುತ್ತದೆ. ಮತ್ತು ಬಲೆ, ಹರಿಗೋಲು ಉಪಕರಣಗಳನ್ನು ರೂ. ೩೦೦೦ ವೆಚ್ಚಗಳಲ್ಲಿ ಉಚಿತವಾಗಿ ವಿತರಿಸಲಾಗುತ್ತದೆ. ಕೃಷಿಯ ಜೊತೆಯಲ್ಲಿ ಮೀನು ಸಾಗಣಿಕೆ ಪರಿಶಿಷ್ಟ ಪಂಗಡ ರೈತರಿಗೆ ಕೆರೆಗಳಲ್ಲಿ ಮೀನು ಸಾಗಣಿಕೆಗೆ ಸಹಾಯ ಧನ ಕೊಡಲಾಗುತ್ತದೆ.

೧೦) 'ಪಶು ಸಂಗೋಪನಾ ಇಲಾಖೆ: ಹೈನುಗಾರಿಕೆಯಲ್ಲಿ ಆಸಕ್ತಿ ಹೊಂದಿರುವ ಪರಿಶಿಷ್ಟ ಪಂಗಡದ ರೈತರಿಗೆ ಇಲಾಖೆ ವತಿಯಿಂದ ಹಾಲು ಕೊಡುವ ಆಕಳು ಅಥವಾ ಎಮ್ಮೆಯ ಘಟಕ, ಕುರಿ ಘಟಕ ಹಾಗೂ ಹಂದಿ ಘಟಕಗಳನ್ನು ಶೇ.೭೫%ರ ಸಹಾಯ ಧನ ಹಾಗೂ ಶೇ. ೨೫%ರ ಸಾಲದ ನೆರವಿನಿಂದ ವಿತರಿಸಲಾಗುತ್ತದೆ.

ಆಕಳು ಘಟಕದ ವೆಚ್ಚ ೧೭೨೦೦ ರೂ. ಸಹಾಯಧನ, ೧೨೯೦೦ ರೂ. ಎಮ್ಮೆ ಘಟಕದ ವೆಚ್ಚ, ೧೨೨೦೦ ರೂ. ಸಹಾಯಧನ ಮತ್ತು ೯೧೫೦ ರೂ. ಕುರಿ ಘಟಕದ ವೆಚ್ಚ, ೧೧೨೦೦ ರೂ. ಸಹಾಯ ಧನ ಮತ್ತು ೮೪೦೦ ರೂ. ಹಂದಿ ಘಟಕದ ವೆಚ್ಚ ೭೩೪೫ ರೂ. ಸಹಾಯಧನ ಮತ್ತು ೫೫೦೮ ರೂ. ಈ ಮೇಲಿನ ಘಟಕದ ಪರಿಶಿಷ್ಟ ಪಂಗಡದ ರೈತರಿಗೆ ನಬಾರ್ಡ್ ಯೋಜನೆ ಪ್ರಕಾರ ದೊರೆಯುವ ಸಹಾಯಧನದಲ್ಲಿ ಮಾರ್ಪಾಡು ಮಾಡಲಾಗುತ್ತದೆ.'[೯]

೧೧) ಅರಣ್ಯ ಇಲಾಖೆ: ಈ ಇಲಾಖೆವತಿಯಿಂದ ಪರಿಶಿಷ್ಟ ಪಂಗಡದ ರೈತರಿಗೆ ಭದ್ರತಾ ನಡು ತೋಪು (ಅರ್ಧ ಎಕರೆ) ನಿರ್ವಹಣೆಗೆ ೨೫೦೦ ರೂ.ಗಳ ನೆರವು ನೀಡಲಾಗುತ್ತದೆ. ಮನೆಗಳ ನಿರ್ಮಾಣಕ್ಕೆ ಬೇಕಾಗುವ ಕಿಟಕಿ ಬಾಗಿಲುಗಳನ್ನು ರೂ. ೧೦ ಸಾವಿರ ಒಳಪಟ್ಟು ಉಚಿತವಾಗಿ ನೀಡಲಾಗುತ್ತದೆ. ಜೇನು ಕೃಷಿ ಕೈಗೊಳ್ಳುವ ರೈತರಿಗೆ ಜೇನು ಪೆಟ್ಟಿಗೆಗಳನ್ನು ಉಚಿತವಾಗಿ ನೀಡಲಾಗುತ್ತದೆ.

೧೨) ರೇಷ್ಮೆ ಇಲಾಖೆ: ರೇಷ್ಮೆ ಕೃಷಿಯು ಒಂದು ಲಾಭದಾಯಕ ಆರ್ಥಿಕ ಚಟುವಟಿಕೆಯಾಗಿದ್ದು ಈ ವೃತ್ತಿ ಕೈಗೊಳ್ಳಲು ಹಿಪ್ಪುನೆರಳೆ ಬೇಸಾಯಕ್ಕೆ ಎರಡು ಸಾವಿರ ರೂಪಾಯಿಗಳ ಸಹಾಯ ಧನ ನೀರಾವರಿ ಭಾವಿಗಳ ನಿರ್ಮಾಣಕ್ಕೆ ಆರ್ಥಿಕ ನೆರವು ಮತ್ತು ರೆರಿಂಗ್ ಹೌಸಗಳ ನಿರ್ಮಾಣಕ್ಕೆ ಶೇ. ೬೦ರ ಸಹಾಯ ಧನ ಗರಿಷ್ಠ ೨೫ ಸಾವಿರ ರೂಪಾಯಿಗಳಿಗೆ ಒಳಪಟ್ಟು ನೀಡಲಾಗುವುದು.

೧೩) ಅಂಬೇಡ್ಕರ್ ವಸತಿ ಯೋಜನೆ ಅಡಿಯಲ್ಲಿ ಎಲ್ಲಾ ಜಾತಿಯವರಿಗೆ ಸೇರಿದಂತೆ ಬೇಡ ಸಮುದಾಯದವರಿಗೆ ೧,೨೦,೦೦೦/- ರೂಪಾಯಿಗಳಂತೆ ಮನೆಗಳನ್ನು ಕಟ್ಟಿಸಿಕೊಡಲಾಗುತ್ತಿದೆ.

೧೪) ಪ್ರಸ್ತುತ ಬಸವ ವಸತಿ ಯೋಜನೆ ಅಡಿಯಲ್ಲಿ ಎಲ್ಲಾ ಜಾತಿಯವರಿಗೆ ಸೇರಿದಂತೆ ಬೇಡ ಸಮುದಾಯದವರಿಗೆ ೧,೨೦,೦೦೦/-ರೂಪಾಯಿಗಳಂತೆ ಮನೆಗಳನ್ನು ಕಟ್ಟಿಸಿಕೊಡಲಾಗುತ್ತಿದೆ.

೧೫) ನಿರ್ಮಲ ಗ್ರಾಮ ಯೋಜನೆ ಅಡಿಯಲ್ಲಿ ಎಲ್ಲಾ ಜಾತಿಯವರಿಗೂ ಸೇರಿದಂತೆ ಬೇಡರಿಗೂ ಸಹ ಪ್ರತ್ಯೇಕ ಶೌಚಾಲಯಗಳನ್ನು ಕಟ್ಟಿಸಿಕೊಡಲಾಗುತ್ತಿದೆ.

ಕರ್ನಾಟಕ ಸರಕಾರ ೧೯೭೫ ರಲ್ಲಿ ಪರಿಶಿಷ್ಟ ಜಾತಿ - ಪಂಗಡಗಳ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಿದ್ದು ನಿಗಮದವತಿಯಿಂದ ಪರಿಶಿಷ್ಟ ಪಂಗಡದ (ಬೇಡರಿಗೆ) ಅಭಿವೃದ್ಧಿಗಾಗಿ ಭೂ ಒಡೆತನ ಯೋಜನೆಯಲ್ಲಿ ಅರ್ಹ ರೈತರಿಗೆ ಒಂದು ಕುಟುಂಬಕ್ಕೆ ಕನಿಷ್ಠ ೨ ಎಕರೆ ಖುಷ್ಕಿ ಅಥವಾ ೧ ಎಕರೆ ನೀರಾವರಿ ಜಮೀನನ್ನು ಒದಗಿಸಲಾಗುತ್ತದೆ. ಸಾಲವನ್ನು ವಾರ್ಷಿಕ ಸಮ ಕಂತುಗಳಲ್ಲಿ ಶೇ ೬% ರ ವಾರ್ಷಿಕ ಬಡ್ಡಿಯೊಂದಿಗೆ ಮರುಪಾವತಿ ಮಾಡಬೇಕಾಗುತ್ತದೆ. ಈ ರೀತಿ ಹಂಚುವ ಭೂಮಿಯನ್ನು ಹೆಣ್ಣುಮಕ್ಕಳು ಹೆಸರಿಗೆ ನೊಂದಣಿ ಮಾಡಿಸಲಾಗುವುದು. ಇದರಿಂದ ಸೌಲಭ್ಯದ ದುರಪಯೋಗವಾಗುವುದನ್ನು ತಡೆಯಬಹುದು. ಅಲ್ಲದೇ ೯೧-೯೨ನೇ ಸಾಲಿನಲ್ಲಿ ವೈಯಕ್ತಿಕ ನೀರಾವರಿ ಕೋಳವೆ ಭಾವಿ ಯೋಜನೆಯನ್ನು ಅನುಷ್ಠಾನಗುಳಿಸಿದೆ. ಈ ಯೋಜನೆಯಲ್ಲಿ ನಿಗಮ ಶೇ ೭೫ ಭಾಗ ಅಥವಾ ಗರಿಷ್ಠ ೩೦ ಸಾವಿರ ರೂ.ಗಳ ಸಹಾಯ ಧನವನ್ನು ನೀಡಲಾಗುತ್ತಿದೆ. ಆದರೆ ೧೨-೨-೯೯ರಿಂದ ಈ ಯೋಜನೆಗೆ ಶೇ. ೧೦೦% ರಷ್ಟು ಸಹಾಯಧನ ಒದಗಿಸಲು ಆದೇಶ ನೀಡಿದೆ.

'ಪರಿಶಿಷ್ಟ ಪಂಗಡ (ಬೇಡರು ಎಸ್.ಟಿ) ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಗಂಗಾಕಲ್ಯಾಣ ಯೋಜನೆಯನ್ನು ಅನುಷ್ಠಾನಗೊಳಿಸಿದೆ. ಈ ಯೋಜನೆ ಅಡಿಯಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಸುಮಾರು ರೈತರು ೮ ರಿಂದ ೧೫ ಎಕರೆ ಇರುವ ಗುಂಪು ಜಮೀನಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಕಾರ್ಯಕ್ರಮ ಇದೆ. ೮ ಎಕರೆ ವಿಸ್ತೀರ್ಣ

ಘಟಕಕ್ಕೆ ರೂ. ೨.೫೩ ಲಕ್ಷ ಹಾಗೂ ೧೫ ಎಕರೆ ವಿಸ್ತೀರ್ಣ ಘಟಕಕ್ಕೆ ರೂ. ೩.೫೮ ಲಕ್ಷ ಎಂದು ನಿಗದಿ ಮಾಡಲಾಗಿದೆ. ಇಂಥ ಘಟಕದಲ್ಲಿ ೨ ಯಶಸ್ವಿ ಕೊಳವೆ ಭಾವಿ ಕೊರೆಯಲು ಪಂಪಸೆಟ್, ಪೈಪ್‌ಲೈನ್, ವಿದ್ಯುತ್ ಕರಣ ಮುಂತಾದ ಎಲ್ಲಾ ಸೌಲಭ್ಯದ ಖರ್ಚುಗಳು ಸೇರಿವೆ. ಈ ಯೋಜನೆ ಅಡಿಯಲ್ಲಿ ನೀಡುವ ಸೌಲಭ್ಯ ಪೂರ್ತಿ ಉಚಿತವಾಗಿದ್ದು ರೈತರು ಯಾವುದೇ ಖರ್ಚು ವೆಚ್ಚವನ್ನು ಭರಿಸಬೇಕಾಗಿಲ್ಲ ಎಂಬುವುದು ಗಮನಿಸಬೇಕಾದ ಅಂಶವಾಗಿದೆ.'[೧೦]

**ಸೌಲಭ್ಯಗಳ ದುರುಪಯೋಗ:** ಈ ಮೇಲಿನ ಸರ್ಕಾರದ ಯೋಜನೆಗಳನ್ನು ತಿಳಿದಿರುವ ಕೆಲವು ಪರಿಶಿಷ್ಟ ಪಂಗಡದವರು (ಬೇಡರು) ಸೌಲಭ್ಯಗಳನ್ನು ದುರುಪಯೋಗ ಮಾಡಿಕೊಳ್ಳುತ್ತಿದ್ದಾರೆ. ನಿಜವಾದ ಕಡುಬಡತನದಲ್ಲಿ ನರಳುತ್ತಿರುವ ಬೇಡರಿಗೆ ಯೋಜನೆಗಳು ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಕೇವಲ ಶ್ರೀಮಂತರು ದೊಡ್ಡ ರೈತರು ಮಾತ್ರ ಈ ಯೋಜನೆಗಳ ಸೌಲಭ್ಯಗಳನ್ನು ಸದ್ಬಳಕೆಮಾಡಿಕೊಂಡು ಇತರರನ್ನು ವಂಚಿಸುತ್ತಿದ್ದಾರೆ. ಬಹುತೇಕ ಬೇಡ ರೈತರು ಅನಕ್ಷರತೆ ಆರ್ಥಿಕ ಸಮಸ್ಯೆ ಮೂಢ ನಂಬಿಕೆ ತಾಂತ್ರಿಕ ಮಾಹಿತಿಯ ಅರಿವು ಇಲ್ಲದೇ ಇರುವುದು ಈ ಎಲ್ಲಾ ಕಾರಣಗಳಿಂದ ಸಗರನಾಡಿನ ಬಹುತೇಕ ಬೇಡರು ಸೌಲಭ್ಯಗಳಿಂದ ವಂಚಿತರಾಗಿದ್ದುದು ದುರಾದೃಷ್ಟಕರ.

**ಸೌಲಭ್ಯಗಳ ಸದುಪಯೋಗ:** 'ಇಂದು ಕಟ್ಟುನಿಟ್ಟಿನ ಕಾನೂನಿನಿಂದ ನೀತಿ-ನಿಯಮಾವಳಿಗಳಿಂದ ಯೋಜನೆಗಳು-ಸೌಲಭ್ಯಗಳು ಸದುಪಯೋಗವಾಗುತ್ತಿರುವುದು ಒಳ್ಳೆಯ ಬೆಳವಣಿಗೆ ಎಂದು ಹೇಳಬಹುದು. ಈ ಹಿಂದೆ ಅಧಿಕಾರಿಗಳ ಜನರ ನಿರೀಕ್ಷತೆಯಿಂದ ಯೋಜನೆಗಳು ಯೋಜನೆಗಳಾಗಿಯೇ ಉಳಿದಿದ್ದವು. ಪರಿಶಿಷ್ಟ ಪಂಗಡ ಅಭಿವೃದ್ಧಿ ನಿಗಮದಲ್ಲಿರುವ ಹಣ (ಬಜೆಟ್) ಮರಳಿ ಸರ್ಕಾರಕ್ಕೆ ಹೋಗುತ್ತಿತ್ತು. ಆದರೆ ಇಂದು ಬಹುಪಾಲು ಯೋಜನೆಗಳು ಸೌಲಭ್ಯಗಳನ್ನು ಪರಿಶಿಷ್ಟ ಪಂಗಡ ಅಂದರೆ ಬೇಡರು ಸದುಪಯೋಗ ಮಾಡಿಕೊಳ್ಳುತ್ತಿದ್ದಾರೆ.'[೧೧] ಇದರಿಂದ ಇವರ ಆರ್ಥಿಕ ಪರಿಸ್ಥಿತಿ ಸಮತೋಲನ ಸ್ಥಿತಿಯಲ್ಲಿದೆ. ಉದ್ಯೋಗದ ಮೀಸಲಾತಿಯನ್ನು ಅರಿತು ಇದನ್ನು ಸದುಪಯೋಗ ಮಾಡಿಕೊಂಡು ಸಾವಿರಾರು ಜನ ಬೇಡರು ಇಂದು ಸರ್ಕಾರಿ ಉಗ್ಯೋಗದಲ್ಲಿದ್ದಾರೆ. ಅಂದು ಶಿಕ್ಷಣದ ಬಗ್ಗೆ, ಅಕ್ಷರ ಜ್ಞಾನದ ಬಗ್ಗೆ ಅರಿವಿಲ್ಲದ ಬೇಡರು ಇಂದು ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಟ್ಟು ಶೈಕ್ಷಣಿಕ ಸೌಲಭ್ಯಗಳಿಂದ ಉನ್ನತ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಸಗರ ನಾಡಿನ ಗ್ರಾಮೀಣ ಪ್ರದೇಶಗಳಲ್ಲಿರುವ ವಿದ್ಯಾವಂತ ಬೇಡ ಯುವಕರು ಇಂದು ನಗರ ಪ್ರದೇಶಗಳಾದ ಬೆಂಗಳೂರು, ಧಾರವಾಡ, ಮುಂಬಯಿಗಳಿಗೆ ಹೋಗಿ ಉಚಿತ I.A.S., K.A.S., I.F.S. ಪಡೆಯುತ್ತಿರುವುದು ಇವರ ಶಿಕ್ಷಣದ ಒಲವಿಗೆ ಉದಾಹರಣೆಗಳಾಗಿವೆ. ಅಲ್ಲದೇ ನಿಗಮ ಮಂಡಳಿಗಳಿಂದ ಸಹಕಾರಿ ಸಂಸ್ಥೆಗಳಿಂದ

ಬ್ಯಾಂಕುಗಳಿಂದ ಸಾಲ ಸೌಲಭ್ಯಗಳನ್ನು ಪಡೆದು ನಿರುದ್ಯೋಗಿ ಬೇಡ ಯುವಕರು ಸ್ವಯಂ ಉದ್ಯೋಗದಲ್ಲಿ ತೊಡಗಿದ್ದಾರೆ. ಬೇಡ ಜನಾಂಗದ ರೈತರು ಕೃಷಿ ಇಲಾಖೆಯಿಂದ, ತೋಟಗಾರಿಕೆ ಇಲಾಖೆಯಿಂದ, ನೀರಾವರಿ ಇಲಾಖೆಯಿಂದ ಎಸ್.ಟಿ. ಜನಾಂಗಕ್ಕೆ ಸಿಗುವ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಉದಾಹರಣೆ ಸುರಪುರ ತಾಲೂಕಿನ ಕವಡಿಮಟ್ಟಿ ಗ್ರಾಮದಲ್ಲಿ ವೆಂಕಟೇಶ ಕೊದಡ್ಡಿ ಎಂಬ ರೈತ ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಕೊಳವೆಬಾವಿಗಳನ್ನು ಹಾಕಿಸಿಕೊಂಡಿದ್ದಾನೆ. ಅದೇ ರೀತಿಯಾಗಿ ದೇವಿಕೇರಿ ಗ್ರಾಮದಲ್ಲಿ ರಾಜಾ ಚನ್ನಪ್ಪನಾಯಕ ಎಂಬ ಯುವ ರೈತ ಈ ಯೋಜನೆ ಯಡಿಯಲ್ಲಿಯೇ ಕೊಳವೆಬಾವಿಯನ್ನು ಹಾಕಿಸಿಕೊಂಡಿದ್ದಾನೆ. ಜೊತೆಗೆ ಕೋಳಿ ಸಾಗಾಣಿಕೆಯಲ್ಲಿ ತೊಡಗಿದ್ದಾನೆ. ಮತ್ತು ಜೇವರ್ಗಿ ತಾಲೂಕಿನಲ್ಲಿರುವ ನರಬೋಳಿ ಗ್ರಾಮದ ಗುರುರಾಜ ಸುಬೇದಾರ ಎಂಬುವವರು ಈ ಯೋಜನೆಯಡಿಯಲ್ಲಿ ಕೊಳವೆ ಬಾವಿಯನ್ನು ಪಡೆದು ಕೃಷಿಯಲ್ಲಿ ಅಭಿವೃದ್ಧಿಯನ್ನು ಸಾಧಿಸಿದ್ದಾರೆ. ಹಾಗೂ ಶಹಾಪೂರ ತಾಲೂಕಿನ ಸಗರ ಗ್ರಾಮದ ಮೈಲಾರಪ್ಪ ನವರು ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಕೊಳವೆ ಬಾವಿಯನ್ನು ಪಡೆದಿದ್ದಾರೆ. ಇದೇ ರೀತಿಯಾಗಿ ಸಗರನಾಡಿನ ನೂರಾರು ಜನ ಬೇಡರು ಸರಕಾರದ ವಿವಿಧ ಯೋಜನೆಗಳ ಸೌಲಭ್ಯಗಳನ್ನು ಪಡೆದಿದ್ದಾರೆ ಹಾಗೂ ಪಡೆಯುತ್ತಿದ್ದಾರೆ. ಆದರೂ ಕೂಡಾ ಯಶಸ್ವಿಯಾಗಿ ಈ ಯೋಜನೆಗಳ ಸದುಪಯೋಗವಾಗುತ್ತಿಲ್ಲ ಎಂಬ ಟೀಕೆಗಳು ಇವೆ. ಈ ರೀತಿಯಾಗಿ ಸಗರನಾಡಿನ ಬೇಡರು ಈ ಹಿಂದೆ ಆರ್ಥಿಕ ಸಂಕಷ್ಟಗಳನ್ನು ಎದುರಿಸುತ್ತಾ ಬಂದಿದ್ದರು. ಪ್ರಸ್ತುತ ಆಧುನಿಕರಣ, ಜಾಗತೀಕರಣ, ಶೈಕ್ಷಣಿಕ ಮತ್ತು ಔದ್ಯೋಗೀಕರಣದಿಂದ ಬೇಡರು ಇಂದು ಆರ್ಥಿಕವಾಗಿ ಸುಧಾರಣೆಗೊಳ್ಳುತ್ತಿದ್ದಾರೆ. ಇಂದು ಪ್ರತಿಯೊಂದು ಕ್ಷೇತ್ರದಲ್ಲಿ ತೊಡಗುತ್ತಿದ್ದಾರೆ. ಒಕ್ಕಲುತನವನ್ನು ನೆಚ್ಚಿಕೊಂಡಿರುವ ಬಡ ಬೇಡರು ಆಕಸ್ಮಿಕವಾಗಿ ಬರಗಾಲ ಸಂಭವಿಸಿದಾಗ ತಮ್ಮ ಆರ್ಥಿಕ ಜೀವನೋಪಾಯಕ್ಕಾಗಿ ದೇಶದ ಮಹಾನಗರಗಳಿಗೆ ದುಡಿಯಲು ಹೋಗುತ್ತಾರೆ. ಬರಗಾಲ ಮುಗಿದ ನಂತರ ಮರಳಿ ತಮ್ಮ ಸ್ವ ಗ್ರಾಮಗಳಿಗೆ ಬಂದು ಕೃಷಿಯ ಚಟುವಟಿಕೆಯಲ್ಲಿ ತೊಡಗುತ್ತಾರೆ. ಮಹಾನಗರಗಳಲ್ಲಿ ದುಡಿದು ಸಂಪಾದಿಸಿದ ಹಣವನ್ನು ತಮ್ಮ ಮುಂದಿನ ಜೀವನೋಪಾಯಕ್ಕೆ ಉಳಿಸಿಕೊಳ್ಳುತ್ತಾರೆ. ಸಗರನಾಡು ನೀರಾವರಿಯಿಂದ ಆವೃತವಾಗಿರುವುದರಿಂದ ವಾಣಿಜ್ಯ ಬೆಳೆಗಳಾದ ಶೇಂಗಾ, ಹತ್ತಿ, ಭತ್ತ ಇವುಗಳನ್ನು ಬೆಳೆದು ಲಾಭ ಮಾಡಿಕೊಳ್ಳುತ್ತಿದ್ದಾರೆ. ಮತ್ತು ಕೆಲವು ಪ್ರಾಪಂಚಿಕ ಜ್ಞಾನವನ್ನು ಹೊಂದಿರುವ ಬೇಡ ನಾಯಕರು ಪ್ರಥಮ ದರ್ಜೆ – ದ್ವಿತೀಯ ದರ್ಜೆ ಗುತ್ತಿಗೆದಾರರಾಗಿ ಲಕ್ಷಾಧೀಶ್ವರ/ಕೋಟ್ಯಾಧೀಶ್ವರರಾಗಿದ್ದಾರೆ. ಗುತ್ತಿಗೆದಾರರ ಮನೆಗಳಲ್ಲಿ ಇಂದು ದ್ವಿಚಕ್ರ ವಾಹನ, ಕಾರು, ಜೀಪು, ಲಾರಿ, ಟ್ರ್ಯಾಕ್ಟರ್‌ಗಳನ್ನು ಕಾಣಬಹುದು. ಇಂತಹ ಬೆರಳಣಿಕೆಯ ಬೇಡರು ಮಾತ್ರ ಈ ಉದ್ಯೋಗದಿಂದ ಆರ್ಥಿಕವಾಗಿ

ಸಬಲರಾಗಿದ್ದಾರೆ. ಹಾಗೂ ಸುರಪುರದಲ್ಲಿ ರಾಜಕೀಯ ಹಿಡಿತವನ್ನು ಸಾಧಿಸುವ ಈ ಬೇಡರು ಸುಮಾರು ೬೦ ವರ್ಷಗಳಿಂದ ಎಮ್.ಎಲ್.ಎ.ಗಳಾಗಿ ಆಯ್ಕೆಯಾಗುತ್ತಾ ಬಂದಿದ್ದಾರೆ. ರಾಜಕೀಯದಲ್ಲಿ ತೊಡಗಿರುವ ಕೆಲವು ಜನ ಬೇಡರು ಇದರ ಮುಖಾಂತರ ಸಾಕಷ್ಟು ಹಣ ಸಂಪಾದಿಸಿ ಐಷಾರಾಮಿ ಜೀವನವನ್ನು ಸಾಗಿಸುತ್ತಿದ್ದಾರೆ. ಹಾಗೂ ರಾಜಕೀಯದಲ್ಲಿ ಈ ಜನಾಂಗ ಒಳ್ಳೆಯ ಹೆಸರನ್ನು ಪಡೆದಿದೆ. ಆದ್ದರಿಂದ ಒಂದೇ ಜನಾಂಗ ಸುರಪುರದಲ್ಲಿ ರಾಜಕೀಯ ಹಿಡಿತವನ್ನು ಸಾಧಿಸಿದ್ದು ಕರ್ನಾಟಕದ ಇತಿಹಾಸದಲ್ಲಿಯೇ ಇನ್ನೆಲ್ಲೂ ಇಲ್ಲಾ ಎಂದು ಹೇಳಬಹುದು. ಇನ್ನುಳಿದ ಕೆಲವು ಜನ ಬೇಡರು ಹೆಚ್ಚಿನ ಶಿಕ್ಷಣವನ್ನು ಕಲಿತು ಸರಕಾರದ ಎಲ್ಲಾ ಇಲಾಖೆಗಳಲ್ಲಿ ಉದ್ಯೋಗವನ್ನು ಮಾಡುತ್ತಿದ್ದಾರೆ. ಉದಾ: ಶಿಕ್ಷಕರಾಗಿ, ಉಪನ್ಯಾಸಕರಾಗಿ, ಗ್ರಾಮಪಂಚಾಯತಿ ಕಾರ್ಯದರ್ಶಿಗಳಾಗಿ, ಗ್ರಾಮೀಣ ಅಭಿವೃದ್ಧಿ ಅಧಿಕಾರಿಗಳಾಗಿ, ವೈದ್ಯಾಧಿಕಾರಿಗಳಾಗಿ, ನ್ಯಾಯಾಧೀಶರಾಗಿ, ಪುರಸಭೆ ಮುಖ್ಯ ಅಧಿಕಾರಿಗಳಾಗಿ, ಬ್ಯಾಂಕ್ ಅಧಿಕಾರಿಗಳಾಗಿ, ರೈಲ್ವೇ ಇಲಾಖೆಯಲ್ಲಿ ಗುಮಾಸ್ತರಾಗಿ, ಪೋಲೀಸ್ ಅಧಿಕಾರಿಗಳಾಗಿ, ಪ್ರಾಚಾರ್ಯರಾಗಿ, ನೀರಾವರಿ ಇಲಾಖೆಯ ಅಧಿಕಾರಿಗಳಾಗಿ, ಬಿ.ಎಸ್.ಎಫ್. ಯೋಧರಾಗಿ ಹೀಗೆ ಅನೇಕ ಸರಕಾರಿ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಇದು ಇವರ ಆರ್ಥಿಕ ಜೀವನವನ್ನು ಸುಧಾರಿಸಲು ಪ್ರಮುಖ ಕಾರಣವಾಗಿದೆ. ಹೀಗೆ ಸಗರನಾಡಿನ ಬಹುತೇಕ ಬೇಡರು ಆರ್ಥಿಕವಾಗಿ ಸಬಲರಾಗುತ್ತಿದ್ದಾರೆ. ಶೇ. ೪೦% ರಷ್ಟು ಜನರು ಮಾತ್ರ ಇಂದಿನ ೨೧ನೇ ಶತಮಾನದಲ್ಲಿಯೂ ಬಡತನದಲ್ಲಿ ಬಳಲುತ್ತಿದ್ದುದ್ದು ಆಶ್ಚರ್ಯಕ್ಕೆ ಕಾರಣವಾಗಿದೆ. ಇದಕ್ಕೆ ಕಾರಣ ಹುಡುಕಲು ಹೊರಟಾಗ ಮೂಢನಂಬಿಕೆ, ಅನಕ್ಷರತೆ, ಮದ್ಯಪಾನ, ಸೋಮಾರಿತನ ಈ ಅಂಶಗಳೇ ಈ ಬೇಡ ಸಮುದಾಯ ಆರ್ಥಿಕವಾಗಿ ಹಿಂದೆ ಉಳಿಯಲು ಪ್ರಮುಖ ಕಾರಣಗಳು ಎಂದು ಹೇಳಬಹುದು.

### ೬.೫ ಸಗರನಾಡಿನ ಬೇಡರ ಆರ್ಥಿಕ ಸ್ಥಿತಿಗತಿಯ ಅಂಕೆ ಸಂಖ್ಯೆಗಳ ಪಟ್ಟಿ ಪರಿಶಿಷ್ಟ ಪಂಗಡ ಜನಸಂಖ್ಯೆ ೧೯೯೧-೨೦೦೧

| ಕ್ರ. ಸಂ. | ತಾಲೂಕು | ೧೯೯೧ ಸ್ತ್ರೀ. ಪು. ಒಟ್ಟು | ಪುರುಷರು | ೨೦೦೧ ಮಹಿಳೆಯರು | ಒಟ್ಟು |
|---|---|---|---|---|---|
| ೧ | ಜೇವರ್ಗಿ | ೧೨೩೭೦ | ೫೬೫೭ | ೫೫೬೪ | ೧೧೨೨೧ |
| ೨ | ಶಹಾಪುರ | ೧೫೯೩೮ | ೧೨೦೪೮ | ೧೨೦೩೪ | ೨೪೦೮೨ |
| ೩ | ಸುರಪುರ | ೨೯೧೫೯ | ೩೦೩೫೭ | ೨೯೯೪೩ | ೬೦೩೦೦ |
| ೪ | ಸಗರನಾಡು | ೫೭೪೬೭ | ೪೮೦೬೨ | ೪೭೫೪೧ | ೯೫೬೦೩ |
| ಮೂಲ ಸೆನ್ಸಸ್ ಆಫ್ ಇಂಡಿಯಾ ೧೯೯೧-೨೦೦೧ | | | | | |

## ಸ್ತ್ರೀಶಕ್ತಿ ಕಾರ್ಯಕ್ರಮದಡಿಯಲ್ಲಿ ಮಹಿಳಾ ಸ್ವಸಹಾಯ ಗುಂಪುಗಳು

| ಕ್ರ. ಸಂ. | ತಾಲೂಕು | ಸ್ವ.ಸ.ಗುಂ.ಗಳ ಸಂಖ್ಯೆ | ಒಟ್ಟು ಮ.ಸ. ಸಂಖ್ಯೆ | ಒಟ್ಟು ಪ.ಪಂ. ಮಹಿಳಾ ಸದಸ್ಯರ ಸಂಖ್ಯೆ |
|---|---|---|---|---|
| ೧ | ಜೇವರ್ಗಿ | ೮೨೦ | ೧೦೯೬೮ | ೪೫೬ (೪.೨) |
| ೨ | ಶಹಾಪುರ | ೭೦೦ | ೧೧೪೭೫ | ೧೦೮೮(೯.೫) |
| ೩ | ಸುರಪುರ | ೭೦೦ | ೧೧೭೮೮ | ೩೧೯೭(೨೭.೧) |
| ೪ | ಸಗರನಾಡು | ೨೨೨೦ | ೩೪೨೨೧ | ೪೭೪೧(೪೦.೮) |

## ಒಟ್ಟು ಜನಸಂಖ್ಯೆಯಲ್ಲಿ ಮುಖ್ಯ ದುಡಿಮೆಗಾರರ ಪ್ರಮಾಣ ೨೦೦೧

| ವಿವರ | ಒಟ್ಟು | ಪ. ಜಾತಿ | ಪ. ಪಂಗಡ |
|---|---|---|---|
| ಒಟ್ಟು | ೩೨.೩ | ೩೨.೯ | ೩೪.೩ |
| ಪುರುಷ | ೪೪.೭ | ೪೨.೨೭ | ೪೫.೬ |
| ಮಹಿಳೆಯರು | ೧೯.೪ | ೨೩.೨೨ | ೨೨.೦೯[೧೨] |

## ಒಟ್ಟು ಜನಸಂಖ್ಯೆಯಲ್ಲಿ ಅಂಚಿನ ದುಡಿಮೆಗಾರರ ಪ್ರಮಾಣ

| ವಿವರ | ಒಟ್ಟು | ಪ.ಜನಾಂಗ | ಪ. ಪಂಗಡ |
|---|---|---|---|
| ಒಟ್ಟು | ೧೦.೮೪ | ೧೨.೫ | ೧೪.೦ |
| ಪುರುಷ | ೬.೩೦ | ೭.೬ | ೭.೭ |
| ಮಹಿಳೆಯರು | ೧೫.೫ | ೧೭.೭ | ೧೯.೭[೧೩] |

## ಸಗರನಾಡಿನಲ್ಲಿ ಬಡತನ ಪ್ರಮಾಣ

| ಕ್ರ.ಸಂ. | ತಾಲೂಕು | ಪ್ರತಿಶತ | ಕೃ.ಕಾ.ಪ್ರ | ದು. ಪ್ರ | ಪ.ಜಾ.ಪ.ಪಂ. ಜನರು | ಬಡತನ ರೀತಿಯ |
|---|---|---|---|---|---|---|
| ೧ | ಜೇವರ್ಗಿ | ೧೨.೮೦ | ೫೨.೪೫ | ೫೩.೭೧ | ೧೯.೯ | ೫.೩೬ |
| ೨ | ಶಹಾಪುರ | ೧೦.೮೦ | ೪೧.೭೬ | ೫೬.೫೭ | ೨೨.೭ | ೩.೯೯ |
| ೩ | ಸುರಪುರ | ೧೦.೯೦ | ೪೩.೨೬ | ೫೬.೫೭ | ೧೮.೨ | ೩೩.೮೯ |

ಮೂಲ ಸೆನ್ಸಸ್ ಆಫ್ ಇಂಡಿಯಾ ೨೦೦೧ ಮತ್ತು ಗುಲ್ಬರ್ಗಾ ಜಿಲ್ಲಾ ಅಂಕಿ ಅಂಶ ನೋಟ ೨೦೦೧ ಬಡತನ ಅಂದಾಜು

## ಪರಿಶಿಷ್ಟ ಪಂಗಡ ದುಡಿಮೆ ಸಹಭಾಗಿತ್ವ ಪ್ರಮಾಣ ೨೦೦೧

| ಕ್ರ ಸಂ | ತಾಲೂಕು | ಒಟ್ಟು | | | ಗ್ರಾಮೀಣ | | | ನಗರ | | |
|---|---|---|---|---|---|---|---|---|---|---|
| | | ಒಟ್ಟು | ಪು | ಮ | ಒಟ್ಟು | ಪು | ಮ | ಒಟ್ಟು | ಪು | ಮ |
| ೧ | ಸುರಪುರ | ೪೬.೭೦ | ೫೨.೫೦ | ೪೦.೭೦ | ೪೮.೨ | ೫೩.೩ | ೪೩.೧ | ೩೩.೭ | ೪೬.೦ | ೨೧.೧ |
| ೨ | ಶಹಾಪುರ | ೪೯.೩೦ | ೫೪.೨೦ | ೪೫.೦೦ | ೫೦.೨ | ೫೪.೯ | ೪೫.೫ | ೩೫.೭ | ೪೩.೫ | ೨೭.೪ |
| ೩ | ಜೇವರ್ಗಿ | ೪೯.೮೦ | ೫೨.೮೦ | ೪೬.೬೦ | ೫೦.೯ | ೫೨.೬ | ೪೮.೨ | ೩೪.೦ | ೪೨.೩ | ೨೫.೩ |

(ಅಧಾರ ಮೂಲ: ಗುಲ್ಬರ್ಗಾ ಜಿಲ್ಲೆ ಮಾನವ ಅಭಿವೃದ್ಧಿ ವರದಿ ಪುಟ ಸಂಖ್ಯೆ ೧೯೦)

## 'ಸಗರನಾಡಿನ ಬೇಡ ಸಮುದಾಯದ ಜನಸಂಖ್ಯೆ ೨೦೧೧ರ ಜನಗಣತಿಯ ಪ್ರಕಾರ

| ಕ್ರ. ಸಂ. | ತಾಲೂಕ | ಪುರುಷರು | ಸ್ತ್ರೀಯರು | ಒಟ್ಟು |
|---|---|---|---|---|
| ೧ | ಸುರಪುರ | ೩೭೪೩೭ | ೩೬೮೮೫ | ೭೪೩೨೨ |
| ೨ | ಶಹಾಪುರ | ೧೪೭೫೨ | ೧೪೮೭೭ | ೨೯೬೨೯ |
| ೩ | ಜೇವರ್ಗಿ | ೮೦೮೦ | ೭೯೨೭ | ೧೬೦೦೭[೧೪] |

**ಅಡಿಟಿಪ್ಪಣಿ**

೧. ಭಾಸ್ಕರರಾವ್ ಮುಡಬೋಳ, ೨೦೧೦, ದಕ್ಷಿಣದ ಗಂಗೆ ಕೃಷ್ಣೆ, ಪು.ಸಂ.೧೮

೨. ಅದೇ, ಪು.ಸಂ. ೬೯

೩. ಕಲಬುರಗಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ, ೨೦೦೧, ಪು.ಸಂ. ೨೮೦.

೪. ಕರ್ನಾಟಕ ಪಂಚಾಯತ್ ರಾಜ್ ವ್ಯವಸ್ಥೆ, ೨೦೧೫, ಪು.ಸಂ. ೧೫

೫. ಕಲಬುರಗಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ, ೨೦೦೧, ಪು.ಸಂ. ೩೯೫.

೬. ಅದೇ, ಪು.ಸಂ. ೩೫೦.

೭. ರಾಮಚಂದ್ರ ಜೋಶಿ, ೨೦೦೭-೦೮, ಭಾರತೀಯ ಸಮಾಜ ಮತ್ತು ಸಾಮಾಜಿಕ ಚಿಂತನೆ, ಪು.ಸಂ. ೮೮.

೮. ಅಮರೇಶ ಯತಗಲ್, ೨೦೦೫, ಏಕಲವ್ಯ ಸ್ಮರಣ ಸಂಚಿಕೆ, ಪು.ಸಂ.೭೭

೯. ಅದೇ, ಪು.ಸಂ. ೭೮

೧೦. ಅದೇ, ಪು.ಸಂ. ೭೯

೧೧. ಅದೇ, ಪು.ಸಂ. ೮೦

೧೨. ಕಲಬುರಗಿ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ, ೨೦೦೧, ಪು.ಸಂ. ೩೦೪.

೧೩. ಅದೇ, ಪು.ಸಂ. ೨೭೨

೧೪. ಯಾದಗಿರಿ ಜಿಲ್ಲಾ ಜನಗಣತಿ ವರದಿ, ೨೦೧೧.

# ಅಧ್ಯಾಯ ೭

## ಸಗರನಾಡಿನ ಬೇಡ ಸಮುದಾಯದ ಶೈಕ್ಷಣಿಕ ಜೀವನ

೧. ಬೇಡ ಸಮುದಾಯದವರ ಶೈಕ್ಷಣಿಕ ಸ್ಥಿತಿ-ಗತಿಗಳು

೨. ಶಿಕ್ಷಣದ ಗುಣಮಟ್ಟ ಉತ್ತಮಗೊಳಿಸುವ ದಿಶೆಯಲ್ಲಿ ಸರಕಾರ ಮತ್ತು ಎನ್.ಜಿ.ಓ.ಗಳ ಸಹಯೋಗ

೩. ಬೇಡ ಸಮುದಾಯದವರಿಗೆ ಸಿಗುವ ಶೈಕ್ಷಣಿಕ ಸೌಲಭ್ಯಗಳು

## ಅಧ್ಯಾಯ ೭

## ಸಗರನಾಡಿನ ಬೇಡ ಸಮುದಾಯದ ಶೈಕ್ಷಣಿಕ ಜೀವನ

ಅನಾದಿ ಕಾಲದಿಂದಲೂ ಮಾನವ ಭೂಮಿಯ ಮೇಲೆ ಇರುವಿಕೆಗೆ ಅವನು ಸಂಪಾದಿಸಿದ ಜ್ಞಾನಸಾಕ್ಷಿಯಾಗಿದೆ. ಈ ಜ್ಞಾನದ ಗಳಿಕೆ ಶಿಕ್ಷಣದ ಮೂಲಕ ಆಗಿದೆ ಎಂಬುದು ಅಕ್ಷರಷಃ ಸತ್ಯ. ಮನುಷ್ಯ ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ಮುಂದುವರೆಯುತ್ತಿದ್ದಾನೆ. ಇದಕ್ಕೆ ಪ್ರಮುಖ ಕಾರಣ ಶಿಕ್ಷಣ ಎಂದು ಹೇಳಿದರೆ ತಪ್ಪಾಗಲಾರದು. ಶಿಕ್ಷಣಕ್ಕೆ ಪುರಾತನ ಇತಿಹಾಸವಿದೆ. ಮಾನವ ಭೂಮಿಯ ಮೇಲೆ ವಾಸಿಸಲು ಎಂದು ಪ್ರಾರಂಭಿಸಿದನೋ ಅಂದು ಶಿಕ್ಷಣ ಉಗಮವಾಗಿದೆ. ಆಗ ಶಿಕ್ಷಣವು ಔಪಚಾರಿಕವಾಗಿಯಾಗಲೀ, ನಿಯಮಬದ್ಧವಾಗಿಯಾಗಲೀ ಅಥವಾ ಲಿಖಿತ ರೂಪದಲ್ಲಿ ಯಾಗಲೀ ಇರಲಿಲ್ಲ. ಕೇವಲ ಸನ್ನೆ ಮುಖ ಭಾವದಿಂದ ನಂತರ ಶಾಬ್ಧಿಕ ರೂಪ ಪಡೆಯಿತು. ಪ್ರತಿಯೊಂದು ಜೀವಿಯು ಒಂದಲ್ಲಾ ಒಂದು ಬಗೆಯ ಶಿಕ್ಷಣವನ್ನು ಪಡೆಯುತ್ತಾ ಹೋಗುತ್ತಾರೆ. ಆದರೆ ಮಾನವನ ಶಿಕ್ಷಣವು ವಿಶಿಷ್ಠವಾದದ್ದು. ಅಥವಾ ವಿಶೇಷವಾದದ್ದು. ಏಕೆಂದರೆ ಮಾನವ ಎಲ್ಲಾ ಜೀವಿಗಿಂತ ಬುದ್ಧಿವಂತನಾಗಿದ್ದಾನೆ. ಅವನಿಗೆ ತಿಳುವಳಿಕೆಯ ಶಕ್ತಿ ಇದೆ.

ಕತ್ತಲೆಯಿಂದ ಬೆಳಕಿನೆಡೆಗೆ ಸಾಗಿಸುವುದೇ ಶಿಕ್ಷಣವೆಂದು ಕೆಲವರ ಅಭಿಪ್ರಾಯ. ಅಂದರೆ ಅಜ್ಞಾನವೆಂಬ ಅಂಧಕಾರದಲ್ಲಿ ತೊಳಲಾಡುವ ಮಕ್ಕಳಿಗೆ ಸುಜ್ಞಾನವೆಂಬ ಬೆಳಕನ್ನು ಚೆಲ್ಲಿ ಪ್ರಪಂಚದ ಆಗು ಹೋಗುಗಳ ವಿಷಯದಲ್ಲಿ ಪಾಲ್ಗೊಳ್ಳುವಂತೆ ಮಾಡಿ ಜೀವನದಲ್ಲಿ ಒಳ್ಳೆಯ ವ್ಯಕ್ತಿಯನ್ನಾಗಿ ಮಾಡುವುದಾಗಿದೆ. ಇದಕ್ಕಾಗಿಯೇ ಉಪನಿಷತ್ತಿನಲ್ಲಿ ತಮಸೋಮಾ ಜ್ಯೋತಿರ್ಗಮಯ ಎಂದು ಪ್ರಸ್ತಾಪಿಸಲಾಗಿದೆ. ವಿದ್ಯೆಯಿಂದ ವಿನಯ. ವಿನಯದಿಂದ ಸಮಾಜದಲ್ಲಿ ಉತ್ತಮ ನಾಗರಿಕನಾಗಿ ಅಧಿಕಾರ ಪಡೆಯುತ್ತಾನೆ. ಅಧಿಕಾರದಿಂದ ಹಣ. ಹಣದಿಂದ ಸುಖ. ಸುಖದಿಂದ ನೆಮ್ಮದಿ ಬರುವುದು. ಆದ್ದರಿಂದ ಸರ್ವಜ್ಞನು "ವಿದ್ಯೆಯುಳ್ಳವನ ಮುಖವು ಮುದ್ದು ಬರುವಂತಿಕ್ಕು, ವಿದ್ಯೆಯಿಲ್ಲದವನ ಬರಿ ಮುಖವು ಹಾಳೂರ ಹದ್ದಿಗೆ

ಸಮಾನ" ಎಂದಿದ್ದಾರೆ. ಜ್ಞಾನಿಗೆ ಕರೆದು ಕೆಲಸ ಗೌರವ ಕೊಡುತ್ತಾರೆ. ಇದಕ್ಕೆಲ್ಲಾ ಕಾರಣ ಶಿಕ್ಷಣದ ಜ್ಯೋತಿಯ ವಿದ್ಯೆ ಬೆಳಕು. ವಿಶಾಲ ಅರ್ಥದಲ್ಲಿ ಶಿಕ್ಷಣವು ಜೀವನದ ಮೇಲೆ ಪ್ರಭಾವ ಬೀರುವ ಪ್ರತಿಯೊಂದನ್ನು ಶಿಕ್ಷಣ ಎನ್ನುವರು. ನಮ್ಮ ಗುಣ, ನಡತೆ, ಮೂಲ ಸಹಜ ಶಕ್ತಿಗಳ ಕೌಟುಂಬಿಕ ಜೀವನ, ಧಾರ್ಮಿಕ ಸಂಸ್ಥೆ, ಸಾಮಾಜಿಕ ಜೀವನ, ಸರಕಾರ ಮತ್ತು ಸಮೂಹ ಮಾಧ್ಯಮಗಳು ಮುಂತಾದವುಗಳ ಮೇಲೆ ಪ್ರಭಾವ ಬೀರುತ್ತದೆ. ಅಂದರೆ ಜೀವನದಲ್ಲಿ ಬರುವ ಪ್ರತಿಯೊಂದು ಅಂಶವು ಶಿಕ್ಷಣದಲ್ಲಿ ಬರುತ್ತದೆ. ಹೀಗಾಗಿ ಶಿಕ್ಷಣವೆಂಬುವುದು ಪ್ರತಿಯೊಬ್ಬರಿಗೂ ಅವಶ್ಯಕತೆ. ಮಗುವಿನ ಸರ್ವತೋಮುಖ ವಿಕಾಸಕ್ಕೆ ಶಿಕ್ಷಣ ಅವಶ್ಯಕವಾಗಿದೆ. ಇದನ್ನು ಕಂಡುಕೊಂಡ ಸಗರನಾಡಿನ ಬೇಡರು ಇಂದು ಶಿಕ್ಷಣಕ್ಕೆ ಹೆಚ್ಚು ಒತ್ತು ತೋರಿಸುತ್ತಿರುವುದು ಒಳ್ಳೆಯದೇ ಎಂದು ಹೇಳಬಹುದು.

**ಶಿಕ್ಷಣದ ಅರ್ಥ:**

'ಶಿಕ್ಷಣ ಎಂಬ ಪದಕ್ಕೆ ಒಂದು ನಿರ್ಧಿಷ್ಟವದ ವ್ಯಾಖ್ಯೆಯನ್ನು ನೀಡಲು ಯಾರಿಂದಲೂ ಸಾಧ್ಯವಾಗಿಲ್ಲ. ಶಿಕ್ಷಣವನ್ನು ಕುರಿತು ಅನೇಕ ಶಿಕ್ಷಣ ತಜ್ಞರು ತತ್ವಜ್ಞಾನಿಗಳು ವಿಚಾರವಾದಿಗಳು ಮೊದಲಾದವರು ತಮ್ಮ ಅಭಿಪ್ರಾಯಗಳನ್ನು ಹೇಳುತ್ತಾ ಬಂದಿದ್ದಾರೆ. ಪ್ರಾಚೀನ ಭಾರತದಲ್ಲಿ ಶಿಕ್ಷಣವನ್ನು ವಿದ್ಯೆ ಎಂದು ಕರೆಯುತ್ತಿದ್ದರು. ವಿದ್ಯೆ ಎಂಬ ಪದವು ಸಂಸ್ಕೃತದಿಂದ ಬಂದಿದೆ. ವಿ ಎಂದರೆ ವಿವೇಕತೆಯುಕ್ತವಾದ ದ್ಯೆ ಎಂದರೆ ಧ್ಯೇಯಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ನೆರವಾಗುವ ಸಾಧನವೇ ವಿದ್ಯೆ. ಇದು ಜ್ಞಾನದ ಸಮೂಹವೇ ಆಗಿದೆ ಎಂದು ಹೇಳಲಾಗಿದೆ.'[೧]

**ಶಿಕ್ಷಣದ ಅರ್ಥವನ್ನು ಮೂರು ದೃಷ್ಟಿಕೋನದಿಂದ ಅರ್ಥಮಾಡಬೇಕಾಗುತ್ತದೆ.**

**ಶಬ್ದೋತ್ಪತ್ತಿಯ ಅರ್ಥ:**

`Educere (ಎಡ್ಯೂಸೆರ್) ಎಂಬುವುದು ಲ್ಯಾಟಿನ್ ಪದ. ಇದರ ಅರ್ಥ To lead out ಅಥವಾ To Draw out. ಅಂದರೆ ಮಾರ್ಗದರ್ಶನ ನೀಡು. ಮುಂದಕ್ಕೆ ತರುವುದು. ಅಂದರೆ ಮಗುವಿನಲ್ಲಿ ಸುಪ್ತವಾಗಿರುವ ಒಳ್ಳೆಯ ಗುಣಗಳನ್ನು ಹೊರತೆಗೆಯುವುದು. Educere (ಎಡ್ಯೂಕೆರ್) ಎಂಬುವುದು ಸಹ ಲ್ಯಾಟಿನ್ ಭಾಷೆ. ಇದರ ಅರ್ಥ To bring up ಎಂದರೆ ಬೆರೆಯಿಸು. ಈ ಶಬ್ದೋತ್ಪತ್ತಿಯ ಮೇರೆಗೆ ಶಿಕ್ಷಣವೆಂದರೆ ಕಲಿಸುವಿಕೆ ತರಬೇತಿ ಬೋಧನೆ ಎಂದಾಗುವುದು.'[೨]

**ಭಾರತೀಯರು ನೀಡಿರುವ ಅರ್ಥ:**

**ಯಾಜ್ಞವಲ್ಕ:** 'ಮಾನವನಲ್ಲಿ ಸಚ್ಚಾರಿತ್ರ್ಯ ಬೆಳೆಸಿ ಸಮಾಜ ಜೀವಿಯಾಗುವಂತೆ ಮಾಡುವುದೇ ಶಿಕ್ಷಣ ಎಂದಿದ್ದಾನೆ.

**ಶಂಕರಾಚಾರ್ಯರು:** ಆತ್ಮ ಸಾಕ್ಷಾತ್ಕಾರವೇ ಶಿಕ್ಷಣ ಎಂದಿದ್ದಾರೆ.

**ಸ್ವಾಮಿ ವಿವೇಕಾನಂದರು:** ಮಾನವನಲ್ಲಿ ಮೊದಲೇ ಇದ್ದ ಪರಿಪೂರ್ಣತೆಯು ವಿಕಾಸವಾಗಿ ಸುತ್ತಲೂ ಇರುವ ವ್ಯಕ್ತಿಗಳಿಗೆ ಅವಕಾಶಮಾಡಿಕೊಡುವುದೇ ಶಿಕ್ಷಣ ಎಂದಿದ್ದಾರೆ.

**ಡಾ. ಎಸ್. ರಾಧಾ ಕೃಷ್ಣರವರು:** ಮಗು ಮತ್ತು ಮನುಷ್ಯ ವರ್ತಮಾನ ಕಾಲದಲ್ಲಿ ನಿಂತು ಭೂತ ಕಾಲವನ್ನು ನೋಡಿ ಭವಿಷತ್ತನ್ನು ಸಂಪದ್ಭರಿತವಾಗಿ ರೂಪಿಸಿಕೊಳ್ಳಲು ಸಹಾಯ ಮಾಡುವುದೇ ಶಿಕ್ಷಣ ಎಂದಿದ್ದಾರೆ.

**ಪಾಶ್ಚಿಮಾತ್ಯರು ನೀಡಿರುವ ಅರ್ಥ:**

**ಸಾಕ್ರಟಿಸ್:** ವ್ಯಕ್ತಿಗೆ ಸತ್ಯವನ್ನು ತಿಳಿಯಪಡಿಸಿ ಅದರಂತೆ ಅವನು ಕೃತಿಯಲ್ಲಿ ತರುವುದನ್ನು ಕಲಿಸುವುದೇ ಶಿಕ್ಷಣ ಎಂದಿದ್ದಾರೆ.

**ಅರಿಸ್ಟಾಟಲ್:** ಉತ್ತಮ ದೇಹದಲ್ಲಿ ಉತ್ತಮ ಜ್ಞಾನವನ್ನುಂಟು ಮಾಡುವುದೇ ಶಿಕ್ಷಣ ಎಂದಿದ್ದಾರೆ.'[೩]

ಈ ಎಲ್ಲಾ ಮೇಲಿನ ವ್ಯಾಖ್ಯೆ ಅಭಿಪ್ರಾಯಗಳನ್ನು ನೋಡಿದಾಗ ಪಾಶ್ಚಿಮಾತ್ಯರಿಗಿಂತ ಭಾರತೀಯರು ಆಧ್ಯಾತ್ಮಿಕತೆಗೆ ಜ್ಞಾನ ಕೃತಿಗೆ ಹೆಚ್ಚಿನ ಒತ್ತು ಕೊಟ್ಟಿದ್ದಾರೆ. ಆದ್ದರಿಂದ ಬೇಡ ಸಮುದಾಯದ ಮಹಾನ್ ಪುರುಷ ಶ್ರೀ ವಾಲ್ಮೀಕಿಗೆ ಅಪಾರ ಜ್ಞಾನ, ದೂರದೃಷ್ಟಿ, ದಿವ್ಯದೃಷ್ಟಿ ಇರುವುದರಿಂದಲೇ ರಾಮಾಯಣವೆಂಬ ಮಹಾಕಾವ್ಯವನ್ನು ರಚಿಸಿದ ಎಂದು ಹೇಳಬಹುದು.

| | | | | |
|---|---|---|---|---|
| `E | = | Energy | – | ಶಕ್ತಿ |
| D | = | Discipline | – | ಶಿಸ್ತು |
| U | = | Unity | – | ಒಗ್ಗಟ್ಟು |
| C | = | Cleanlines | – | ಶುಚಿತ್ವ |
| A | = | Alertaness | – | ಜಾಗರೂಕತೆ |
| I = | | Indipendence – | – | ಸತ್ಯ |
| O | = | Obidiness | – | ಸ್ವಾತಂತ್ರ್ಯ |
| N | = | Notion | – | ವಿಧೇಯತೆ |
| E | = | Energy | – | ಭಾವನೆ'[೪] |

ಈ ಮೇಲಿನ ಪ್ರತಿಯೊಂದು ಅಕ್ಷರದಿಂದ ಶಿಕ್ಷಣ ಪದವನ್ನು ಹೀಗೆ ಅರ್ಥೈಸಲಾಗುವುದು. ವ್ಯಕ್ತಿಯಲ್ಲಿ ಸುಪ್ತವಾಗಿರುವ ಶಕ್ತಿ, ಶಿಸ್ತು, ಒಗ್ಗಟ್ಟು, ಶುಚಿತ್ವ, ಸ್ವಾತಂತ್ರ್ಯ, ವಿಧೇಯತೆ, ಭಾವನೆ ಮುಂತಾದ ಗುಣಗಳನ್ನು ವಿಕಾಸಗೊಳಿಸುವುದಕ್ಕಾಗಿ ಸೂಕ್ತವಾದ ಪರಿಸರವನ್ನು ನಿರ್ಮಿಸುವುದೇ ಶಿಕ್ಷಣ.

## ೭.೧ ಬೇಡ ಸಮುದಾಯದವರ ಶೈಕ್ಷಣಿಕ ಸ್ಥಿತಿಗತಿಗಳು

'ಸಗರನಾಡಿನ ಬೇಡರ ಶೈಕ್ಷಣಿಕ ಜೀವನವನ್ನು ಕುರಿತು ಅಧ್ಯಯನ ಮಾಡಬೇಕಾದರೆ ೧೬ನೇ ಶತಮಾನದಿಂದ ಪ್ರಸ್ತುತ ದಿನಮಾನಗಳವರೆಗೆ ಇವರ ಶೈಕ್ಷಣಿಕ ಏರುಪೇರುಗಳನ್ನು ಕೂಲಂಕುಷವಾಗಿ ಅಧ್ಯಯನ ಮಾಡಬೇಕಾಗುತ್ತದೆ. ಅಂದರೆ ಈ ಮೊದಲು ಸಗರನಾಡಿನಲ್ಲಿ ಬೇಡರಿಗೆ ಸಾಂಪ್ರದಾಯಿಕ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಬಡ ಬೇಡ ಸಮುದಾಯದವರು ಸೈನಿಕ ಶಿಕ್ಷಣವನ್ನು ಪಡೆದರೆ, ಶ್ರೀಮಂತ ರಾಜಮನೆತನಕ್ಕೆ ಸೇರಿದ ಬೇಡ ದೊರೆಗಳು ಮನೆಯಲ್ಲಿಯೇ ಕುಳಿತು ಬ್ರಾಹ್ಮಣರಿಂದ ವೇದ ಅಧ್ಯಯನ, ಸಂಸ್ಕೃತ ಶ್ಲೋಕ, ಯುದ್ಧ ಪ್ರಾವಿಣ್ಯತೆ ಶಿಕ್ಷಣವನ್ನು ಪಡೆಯುತ್ತಿದ್ದರು. ರಾಘವ ಪಾಮನಾಯಕ (೧೭೫೨ ೧೭೭೪) ಭಾರ್ಗವ ಪುರಾಣವನ್ನು ಬರೆದಿದ್ದು ಹಾಗೂ ಮಹಾ ಸ್ವಾತಂತ್ರ್ಯ ಸೇನಾನಿ ನಾಲ್ವಡಿ ರಾಜಾ ವೆಂಕಟಪ್ಪ ನಾಯಕ (೧೮೪೩-೧೮೫೮) ಇಂಗ್ಲೀಷ, ಉರ್ದು, ತೆಲುಗು, ಕನ್ನಡ ಭಾಷೆಗಳನ್ನು ಬಲ್ಲವನಾಗಿದ್ದು ಅಂದಿನ ಅವರ ಕಾಲಕ್ಕೆ ಶೈಕ್ಷಣಿಕ ಸ್ಥಿತಿಗತಿಗಳನ್ನು ತೋರಿಸುತ್ತದೆ.'[೫] 'ಬೇಡ ಮಹಿಳೆಯರಿಗೆ ಘೋಷಾ ಪದ್ಧತಿ ಇದ್ದುದರಿಂದ ಶಿಕ್ಷಣವನ್ನು ಕೊಡಿಸುತ್ತಿರಲಿಲ್ಲ. ಬ್ರಿಟೀಷ್ ಆಳ್ವಿಕೆಯಲ್ಲಿ ಸಾರ್ವತ್ರಿಕ ಶಿಕ್ಷಣ ಪದ್ಧತಿ ಜಾರಿಯಲ್ಲಿ ಇದ್ದುದರಿಂದ ಬೆರಳಣಿಕೆಯಷ್ಟು ಬೇಡರು ಮಾತ್ರ ಪ್ರಾಥಮಿಕ ಮಾನವೀಯತೆ ಪ್ರೌಢ ಶಿಕ್ಷಣವನ್ನು ಕಲಿಯಲು ಪ್ರಾರಂಭಿಸಿದ್ದರು. ಇದರ ಜೊತೆಗೆ ಉರ್ದು, ಇಂಗ್ಲೀಷ ಭಾಷೆ ಪ್ರಚಲಿತದಲ್ಲಿ ಇದೆ ಎಂದು ಈ ಎರಡು ಭಾಷೆಯಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದರು. ಇಂತಹ ಸಂಧಿಗ್ಧ ಪರಿಸ್ಥಿತಿಯಲ್ಲಿ ಬ್ಯಾರಿಸ್ಟರ್ ರಾಜಾ ವೆಂಕಟಪ್ಪ ನಾಯಕ ಇವರು ಹೈದರಾಬಾದನಲ್ಲಿ ತಮ್ಮ ವಿದ್ಯಾಭ್ಯಾಸ ಮುಗಿಸಿ ಉಚ್ಚ ವ್ಯಾಸಂಗಕ್ಕಾಗಿ ಲಂಡನ್ನಿಗೆ ತೆರಳಿ ಅಲ್ಲಿಂದ ಬ್ಯಾರಿಸ್ಟರ್ ಪದವಿ ಪಡೆದು ಹೈದ್ರಾಬಾದ ನಿಜಾಮರ ಶ್ರೇಷ್ಠ ನ್ಯಾಯಾಲಯದಲ್ಲಿ ವಕೀಲ ವೃತ್ತಿಯನ್ನು ಕೈಗೊಂಡಿದ್ದರು.'[೬] ಅಲ್ಲದೇ ತಮ್ಮ ಮಗನಾದ ರಾಜಾ ಸೀತಾರಾಮ ನಾಯಕರಿಗೂ ಇಂಜನೀಯರ್ ಶಿಕ್ಷಣವನ್ನು ಕೊಡಿಸಿದ್ದಾರೆ. ಮತ್ತು ರಾಜ ಮನೆತನ ಸಂಬಂಧಿಕರಾದ ರಾಜಾ ವೆಂಕಟಪ್ಪ ನಾಯಕ ಎಂಬುವವರು ಐ.ಐ.ಬಿ. ಐ.ಐ.ಎಮ್ ಶಿಕ್ಷಣ ಮುಗಿಸಿ ಜಿಲ್ಲಾ ನ್ಯಾಯಾಲಯ ನ್ಯಾಯಾಧೀಶರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಅಲ್ಲದೇ ಇವರ ಮಗನಾದ ರಾಜಾ ವೆಂಕಪ್ಪ ನಾಯಕ ವೈದ್ಯಾಧಿಕಾರಿಯಾಗಿ ಸೇವೆಯಲ್ಲಿ ನಿರತರಾಗಿದ್ದಾರೆ. ಇಂತಹ ಬೆರಳಣಿಕೆಯಷ್ಟು ಬೇಡರು ಮಾತ್ರ ಉನ್ನತ ಶಿಕ್ಷಣವನ್ನು ಪಡೆದಿದ್ದಾರೆ. ಬಹುತೇಕ ಜನ ಬೇಡರು ಅಂದು ೧ನೇ ತರಗತಿಯಿಂದ ೭ನೇ ತರಗತಿಯವರೆಗೆ ಮಾತ್ರ ವಿದ್ಯಾಭ್ಯಾಸ

ಮಾಡಿ ಅಂದು ಶಿಕ್ಷಕರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ದೇವತ್ಕಲ್ ಗ್ರಾಮದ ಮಾನಶಪ್ಪ ಸೇವೆಯು ಅಂದು ೭ನೇ ತರಗತಿಯ ಶಿಕ್ಷಣವನ್ನು ಪಡೆದು ಶಿಕ್ಷಕರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ನಾನು ಸಂಧರ್ಶನ ಮಾಡಿದಾಗ ಇವರು ಶತಾಯುಷಿಯಾಗಿದ್ದರು ಅಂದು ಶಿಕ್ಷಣದಲ್ಲಿ ಪಾರದರ್ಶಕತೆ ಇತ್ತು. ಕಠಿಣತೆ ಇತ್ತು. ಆದ್ದರಿಂದ ಅಲ್ಪ ಶಿಕ್ಷಣವನ್ನು ಪಡೆದರು. ಇಂಗ್ಲೀಷ್ ಭಾಷೆಯಲ್ಲಿ ಪರಿಣಿತಿಯನ್ನು ಹೊಂದಿದ್ದರು.

'ಪ್ರಸ್ತುತ ದಿನಮಾನಗಳಲ್ಲಿ ಶೈಕ್ಷಣಿಕ ಸ್ಥಿತಿಗತಿಯನ್ನು ನೋಡಿದಾಗ ಸಗರ ನಾಡಿನ ಬೇಡರು ಶಿಕ್ಷಣಕ್ಕೆ ಹೆಚ್ಚಿನ ಒಲವನ್ನು ತೋರಿಸುತ್ತಿದ್ದಾರೆ. ಶಾಲಾ ಸೌಲಭ್ಯಗಳ ದೊರೆಯುವಿಕೆ ಶಾಲಾ ಮೂಲಭೂತ ಸೌಲಭ್ಯ ದೊರೆಯುತ್ತಿರುವುದು ಕಾಲೇಜು ಶಿಕ್ಷಣ ದೊರೆಯುತ್ತಿರುವುದು ಇವರ ಶೈಕ್ಷಣಿಕ ಅಭಿವೃದ್ಧಿಗೆ ನಾಂದಿ ಹಾಡಿದಂತಾಗಿದೆ. ೨೦೦೧-೦೨ರಲ್ಲಿ ಸುರಪುರ ಪ್ರಾಥಮಿಕ ಶಾಲಾ ದಾಖಲಾತಿ (೧ ರಿಂದ ೭ನೇ) ಪ್ರಕಾರ ಬಾಲಕರು ೬೪೦ ಇದ್ದರೆ, ಬಾಲಕೀಯರು ೫೩೧ ಇದ್ದರು. ಒಟ್ಟು ೧೧೭೧ ಮಕ್ಕಳು ಪ್ರಾಥಮಿಕ ವಿದ್ಯಾಭ್ಯಾಸವನ್ನು ಮಾಡುತ್ತಿದ್ದರು. ಮತ್ತು ಶಹಾಪುರ ತಾಲೂಕಿನಲ್ಲಿನ ಅಂಕಿ ಅಂಶಗಳ ಪ್ರಕಾರ ಬಾಲಕರು ೫೨೯೧ ಇದ್ದರೆ, ಮಹಿಳೆಯರು ೪೨೩೫ ಇದ್ದರು. ಒಟ್ಟು ೯೫೨೬ ಮಕ್ಕಳು ಶಹಾಪೂರ ತಾಲೂಕಿನಲ್ಲಿ ೧ನೇ ತರಗತಿಯಿಂದ ೭ನೇ ತರಗತಿಯವರೆಗೆ ಶಿಕ್ಷಣವನ್ನು ಪಡೆದಿದ್ದಾರೆ. ಹಾಗೂ ಜೇವರ್ಗಿ ತಾಲೂಕಿನ ಅಂಕಿ ಅಂಶಗಳ ಪ್ರಕಾರ ಬಾಲಕರು ೮೨೧ ಇದ್ದರೆ, ಬಾಲಕೀಯರು ೬೯೨ ಇದ್ದರು. ಒಟ್ಟು ೧೫೧೩ ಜನ ವಿದ್ಯಾರ್ಥಿಗಳು ಶಿಕ್ಷಣ ಪಡೆದಿದ್ದಾರೆ. ಅದೇ ರೀತಿಯಾಗಿ ೨೦೦೫-೦೬ ನೇ ಸಾಲಿನಲ್ಲಿ ಪರಿಶಿಷ್ಟ ಪಂಗಡದ ಮಕ್ಕಳ ಪ್ರಾಥಮಿಕ ಶಾಲಾ ದಾಖಲಾತಿ ಪ್ರಕಾರ ಸುರಪುರ ತಾಲೂಕಿನಲ್ಲಿ ೧೧೩೮೪ ಜನ ವಿದ್ಯಾರ್ಥಿ ವಿದ್ಯಾರ್ಥಿನೀಯರು ೧ ರಿಂದ ೭ನೇ ತರಗತಿಯವರೆಗೆ ಶಿಕ್ಷಣವನ್ನು ಪಡೆದಿದ್ದಾರೆ.'[೬] ಹಾಗೂ ಅದೇ ರೀತಿಯಾಗಿ ಶಹಾಪೂರದಲ್ಲಿ ೪೮೧೭ ಮಕ್ಕಳು ಮತ್ತು ಜೇವರ್ಗಿ ತಾಲೂಕಿನಲ್ಲಿ ೧೪೭೨ ಮಕ್ಕಳು ೧ ರಿಂದ ೭ನೇ ತರಗತಿಯವರೆಗೆ ವಿದ್ಯಾಭ್ಯಾಸವನ್ನು ಮಾಡಿದ್ದಾರೆ. ಒಟ್ಟಿನಲ್ಲಿ ೨೦೦೫-೦೬ನೇ ಸಾಲಿನಲ್ಲಿ ಸಗರನಾಡಿನಲ್ಲಿ ೧೭೬೭೩ ಜನ ಬಾಲಕ ಬಾಲಕೀಯರು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದರು ಎಂಬುವುದು ದಾಖಲಾತಿ ಪ್ರಕಾರ ತಿಳಿಯುತ್ತದೆ. ಅದೇ ರೀತಿಯಾಗಿ ೨೦೦೫-೦೬ರಲ್ಲಿ ಪರಿಶಿಷ್ಟ ಪಂಗಡ ಮಕ್ಕಳ ಪ್ರೌಢಶಾಲಾ ದಾಖಲಾತಿ ಪ್ರಕಾರ ಜೇವರ್ಗಿ ತಾಲೂಕಿನಲ್ಲಿ ೧೦೯ ಜನ ಮಕ್ಕಳು ಶಹಾಪೂರ ತಾಲೂಕಿನಲ್ಲಿ ೩೪೨ ಜನ ಮಕ್ಕಳು ಸುರಪುರ ತಾಲೂಕಿನಲ್ಲಿ ೧೦೩೦ ಜನ ಮಕ್ಕಳು ೮ರಿಂದ ೧೦ನೇ ತರಗತಿಯವರೆಗೆ ಶಿಕ್ಷಣವನ್ನು ಪಡೆದಿದ್ದಾರೆ. ಸಗರನಾಡಿನಲ್ಲಿ ಒಟ್ಟು ೧೪೮೧ ಜನ ಮಕ್ಕಳು ಪ್ರೌಢ ಶಿಕ್ಷಣವನ್ನು ಪಡೆದಿದ್ದರು ಎಂಬುದು ತಿಳಿಯುತ್ತದೆ. ಈ ಅಂಕಿ ಅಂಶಗಳನ್ನು ಗಮನಿಸಿದಾಗ ನಡುವೆ ಶಾಲೆ ಬಿಟ್ಟವರ ಸಂಖ್ಯೆ ಹೆಚ್ಚಾಗಿ ಕಾಣಿಸುತ್ತದೆ.

ಪ್ರಾಥಮಿಕ ಪ್ರೌಢಶಾಲೆಯ ಸ್ಥಿತಿಗತಿಯ ಜೊತೆಗೆ ಬೇಡರು ತಮ್ಮ ಮಕ್ಕಳನ್ನು ಉನ್ನತ ಶಿಕ್ಷಣವನ್ನು ಕೊಡಿಸುತ್ತಿರುವುದು ಒಳ್ಳೆಯ ಬೆಳವಣಿಗೆಯಾಗಿದೆ. ಇಂದು ಆಧುನಿಕ ಯುಗದಲ್ಲಿ ಶಿಕ್ಷಣದ ಅವಶ್ಯಕತೆಯನ್ನು ಬೇಡರು ಅರಿತಿದ್ದಾರೆ. ಕೆಲವು ಯುವಕರು ಎಸ್.ಎಸ್.ಎಲ್.ಸಿ., ಪಿ.ಯು.ಸಿ., ಬಿ.ಎ., ಬಿ.ಎಸ್.ಸಿ. ಪದವಿ ಮುಗಿದ ನಂತರ ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳಿಗೆ ಹೋಗಿ ಸ್ನಾತಕೋತ್ತರ ಶಿಕ್ಷಣವನ್ನು ಕಲಿಯುತ್ತಿದ್ದಾರೆ. ಹೀಗಾಗಿ ಸಗರನಾಡಿನ ನೂರಾರು ಬೇಡ ಯುವಕರು ಸ್ನಾತಕೋತ್ತರ ಪದವಿಯನ್ನು ಪಡೆಯುವುದರ ಜೊತೆಗೆ ವಿವಿಧ ವಿಷಯಗಳಲ್ಲಿ ಪಿ.ಹೆಚ್.ಡಿ. ಸಂಶೋಧನೆಯನ್ನು ಮಾಡುತ್ತಿದ್ದಾರೆ. ಅಂದರೆ ಜೇವರ್ಗಿಯ ನರಬೋಳಿ ಗ್ರಾಮದ ಮಹಾಂತೇಶ ಸುಬೇದಾರ ಎಂಬುವವರು ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಆರ್ಥಶಾಸ್ತ್ರ ವಿಷಯದಲ್ಲಿ ಪಿ.ಹೆಚ್.ಡಿ.ಯನ್ನು ಕೈಗೊಂಡಿದ್ದಾರೆ. ಅಲ್ಲದೇ ಸುರಪುರದ ಯಲ್ಲಪ್ಪ ನಾಯಕ ಗುಡ್ಡಕಾಯಿ ಇವರು ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿ.ಹೆಚ್.ಡಿ. ಸಂಶೋಧನೆಯನ್ನು ಮಾಡುತ್ತಿದ್ದಾರೆ. ಇಂತಹ ನೂರಾರು ಯುವಕರು ಇಂದು ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಮತ್ತು ಶಹಾಪುರ ತಾಲೂಕಿನಲ್ಲಿ ಭೀಮಣ್ಣ ಗೌಡ ಎಂಬುವವರು ರಾಜ್ಯಶಾಸ್ತ್ರದಲ್ಲಿ ಎಂ.ಎ. ಎಂ.ಫಿಲ್. ಪದವಿಯನ್ನು ಪಡೆದು ನೀರಾವರಿ ಇಲಾಖೆಯಲ್ಲಿ ಅಧಿಕಾರಿಯಾಗಿ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಮತ್ತು ಸಗರನಾಡಿನ ಕೇಂದ್ರ ಸ್ಥಳವಾದ ಸುರಪುರ ಪಟ್ಟಣದಲ್ಲಿ ಶಾಂತಕುಮಾರ, ಮರೆಪ್ಪ ನಾಯಕ, ಶರಣು ನಾಯಕ, ಬಿಚುಗತ್ತಿ ಕುಮಾರ ನಾಯಕ ಬಿಚುಗತ್ತಿ, ಸುಭಾಷನಾಯಕ ಕಬಾಡಗೇರಾ, ತಿರುಪತಿ ನಾಯ್ಕೋಡಿ, ಸಂದೀಪ್ ನಾಯಕ ಕುಂಬಾರಪೇಟ ಹೀಗೆ ಈ ಎಲ್ಲಾ ಬೇಡ ಯುವಕರು ಇಂದು ರಾಜ್ಯಶಾಸ್ತ್ರ, ಇತಿಹಾಸ, ಸಮಾಜ ಶಾಸ್ತ್ರ, ಕನ್ನಡ ವಿಷಯಗಳಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು ಇವರ ಶೈಕ್ಷಣಿಕ ಅಭಿವೃದ್ಧಿಗೆ ಸೂಕ್ತ ಉದಾಹರಣೆ ಎಂದು ಹೇಳಬಹುದು. ಅಲ್ಲದೆ ದೇವರಗೋನಾಲದ ಗ್ರಾಮದಲ್ಲಿ ಭೀಮಣ್ಣ ದೇಸಾಯಿ, ಮಹಾಂತಗೌಡ ಕಕ್ಕೇರಾ ಗ್ರಾಮದಲ್ಲಿ ಚಂದ್ರಶೇಖರ ನಾಯಕ, ರಾಮಣ್ಣ ಜುಮ್ಮಾ ಇವರು ಇಂದು ಉನ್ನತ ಶಿಕ್ಷಣ ಕಲಿತು ಶ್ರೇಷ್ಠ ಉದ್ಯೋಗದಲ್ಲಿದ್ದಾರೆ. ಸರಕಾರಿ ಮೀಸಲಾತಿ ಸೌಲಭ್ಯವನ್ನು ಅರಿತ ನೂರಾರು ಯುವಕರು ಇಂದು ಹೆಚ್ಚಿನ ಸಂಖ್ಯೆಯಲ್ಲಿ ವಿಶ್ವವಿದ್ಯಾಲಯದ ಕಡೆ ಮುಖ ಮಾಡಿದ್ದಾರೆ. ಬೇಡ ಯುವಕರಿಗೆ ನೀಡುವ ಹಾಸ್ಟೇಲ್ ವ್ಯವಸ್ಥೆ, ಸ್ಕಾಲರ್‌ಶಿಪ್ ಬೇಡ ವಿದ್ಯಾರ್ಥಿಗಳ ಶಿಕ್ಷಣದ ಪ್ರಗತಿಗೆ ಸಹಾಯಕವಾಗಿದೆ. ಅಂದಿನ ಕಾಲದಲ್ಲಿ ಶಿಕ್ಷಣ ಕೈಗೆ ಎಟುಕದ ವಸ್ತುವಾಗಿತ್ತು. ಆದರೆ ಇಂದು ಶಿಕ್ಷಣ ಕೈಗೆ ಸಿಗುವ ನಕ್ಷತ್ರವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಆದರೆ ಕೆಲವು ಬೆರಳಣಿಕೆಯಷ್ಟು ಬೇಡ ಯುವಕರು ಮಾತ್ರ ಉನ್ನತ ಶಿಕ್ಷಣದತ್ತ ದಾಪುಗಾಲಿಟ್ಟರೆ ಬಹುತೇಕ ಬೇಡರು ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಿಬಿಟ್ಟಿದ್ದಾರೆ. ಇದಕ್ಕೆ ಬಡತನ ಮನೆಯ ವಾತಾವರಣವು ಕಾರಣವಾಗಿದೆ. ಸಗರನಾಡಿನ ಗ್ರಾಮಗಳಲ್ಲಿ

ಸಾಕ್ಷರತಾ ಬೆಳವಣಿಗೆಯ ಪ್ರಮಾಣ ಮಂದಗತಿಯಲ್ಲಿದೆ. ಮಹಿಳೆಯರ ಮತ್ತು ಗ್ರಾಮ ಪ್ರದೇಶದಲ್ಲಿ ಸಾಕ್ಷರತಾ ಪ್ರಮಾಣ ಕೆಳಮಟ್ಟದ್ದಲ್ಲಿರುವುದು ನಾಡಿನಲ್ಲಿರುವ ಲಿಂಗ ಸಂಬಂಧ ಮತ್ತು ಗ್ರಾಮೀಣ ಹಾಗೂ ನಗರ ಪ್ರದೇಶಗಳ ನಡುವಿನ ಅಸಮಾನತೆಯನ್ನು ತೋರಿಸುತ್ತದೆ. ಈ ಬಗ್ಗೆ ತೀವ್ರ ಕಾಳಜಿ ಇಡಬೇಕಾದ ಅಗತ್ಯವಿದೆ. ಸುರಪುರ ಶಹಾಪುರ ಮತ್ತು ಜೇವರ್ಗಿ ತಾಲೂಕಗಳಲ್ಲಿ ಸಾಕ್ಷರತಾ ಪ್ರಮಾಣವು ಅತ್ಯಂತ ಕೆಳಮಟ್ಟದಲ್ಲಿದೆ. ಇದಕ್ಕೆ ಮುಖ್ಯ ಕಾರಣವೇನೆಂದರೆ ಶಾಲಾ ದಾಖಲಾತೆ ಕಡಿಮೆ ಇರುವುದು. ಮತ್ತು ಶಾಲೆಯನ್ನು ಮಕ್ಕಳು ಅಧಿಕ ಪ್ರಮಾಣದಲ್ಲಿ ಮಧ್ಯದಲ್ಲಿಯೇ ಬಿಡುತ್ತಿರುವುದು. ಶಿಕ್ಷಣದ ಮಹತ್ವದ ಬಗ್ಗೆ ಗ್ರಾಮೀಣ ಬೇಡರಿಗೆ ಅರಿವಿಲ್ಲಾ. ಅವರಲ್ಲಿ ಅರಿವನ್ನು ಉಂಟುಮಾಡುವ ಬಗ್ಗೆ ಆಂದೋಲನವನ್ನು ಕೈಗೊಳ್ಳುವ ಅಗತ್ಯವಿದೆ. ಈ ವಿಷಯದಲ್ಲಿ ಸರಕಾರದ ಪಾತ್ರ ಮಹತ್ವದ್ದಾಗಿದೆ. ಸಗರನಾಡಿನ ಕೆಲವು ಹಳ್ಳಿಗಳಲ್ಲಿ ಸಾಕ್ಷರತಾ ಪ್ರಮಾಣವು ಶೇ. ೨೦% ಮೀರಿಲ್ಲ. ಬೇಡ ಮಹಿಳೆಯರ ಸಾಕ್ಷರತೆಯು ಶೇ. ೧೦% ರಷ್ಟಿದೆ. ಶಹಾಪುರದ ತಟೆಲ್ಗೆರೆ, ಹಿಮಾಲಾಪುರ, ಜಿಂಕೆರೆ, ನಾಗಲಾಪುರ, ಹೋಲಿಬೇಟ್ ಮತ್ತು ಚಂದ್ರಾಪುರ, ಸುರಪುರದ ದೇವಿಕೇರಾ, ಸಿದ್ದಾಪುರ, ಬೊಮ್ಮನಹಳ್ಳಿ, ವಾಗನಗೇರಿ, ಕನ್ನೆಳ್ಳಿ, ಕಕ್ಕೇರಾ ಸುತ್ತಮುತ್ತಲಿನ ಬೇಡರ ದೊಡ್ಡಿಗಳು ಈ ಎಲ್ಲಾ ಹಳ್ಳಿಗಳಿಗೆ ವಿಶೇಷ ಗಮನ ನೀಡುವ ಅವಶ್ಯಕತೆವಿದೆ.

**೭.೨ ಶಿಕ್ಷಣದ ಗುಣಮಟ್ಟ ಉತ್ತಮಗೊಳಿಸುವ ದಿಸೆಯಲ್ಲಿ ಸರಕಾರ ನಾಗರೀಕ ಸಮಾಜ ಮತ್ತು ಎನ್.ಜಿ.ಓ.ಗಳ ಸಹಯೋಗ:**

ಸಗರನಾಡಿನ ಸುರಪುರ ಶಹಾಪುರ ಜೇವರ್ಗಿ ತಾಲೂಕುಗಳಲ್ಲಿ ಶಿಕ್ಷಣದ ಗುಣಮಟ್ಟವು ಕಡಿಮೆ ಇರುವುದು ಸರಕಾರಕ್ಕೆ ಮತ್ತು ನಾಗರಿಕ ಸಮಾಜಕ್ಕೆ ಅತ್ಯಂತ ಕಳವಳಕಾರಿ ಸಂಗತಿಯಾಗಿ ಪರಿಣಮಿಸಿಬಿಟ್ಟಿದೆ. ಬೇಡ ಜನಾಂಗದವರ ಮಕ್ಕಳ ಶಾಲಾ ದಾಖಲಾತಿ ಪ್ರಮಾಣವನ್ನು ಉತ್ತಮ ಪಡಿಸಲು ಮತ್ತು ಶಾಲೆಯನ್ನು ಮಕ್ಕಳು ಮಧ್ಯವಲ್ಲಿ ಬಿಡುವುದರ ಪ್ರಮಾಣವನ್ನು ಕಡಿಮೆ ಮಾಡಲು ಅನೇಕ ಸರಕಾರಿ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಗಿದೆ. ಸರಕಾರೇತರ ಸಂಸ್ಥೆಗಳು, ದತ್ತಿ ಸಂಸ್ಥೆಗಳು, ಸ್ವಯಂ ಸೇವಾ ಸಂಸ್ಥೆಗಳು ಅನೇಕ ಬಗೆಯಲ್ಲಿ ಮಕ್ಕಳು ಶಾಲೆಯಲ್ಲಿ ಉಳಿಯುವಂತೆ ಮಾಡಲು ಶಾಲಾ ಶಿಕ್ಷಣದ ಗುಣಮಟ್ಟ ಉತ್ತಮವಾಗುವಂತೆ ಮಾಡಲು ಅನೇಕ ವಿನೂತನ ಕಾರ್ಯಕ್ರಮ ಗಳನ್ನು ಹಮ್ಮಿಕೊಂಡಿದೆ. ಅಕ್ಷರ ಪ್ರತಿಷ್ಠಾನವು ಒಂದು ಸ್ವಯಂ ಸೇವಾ ಸಂಸ್ಥೆ ಕರ್ನಾಟಕದಲ್ಲಿ ಸಾಕ್ಷರತೆ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ವಿನೂತನವಾದ ಕಾರ್ಯಕ್ರಮಗಳ ಮೂಲಕ ಅವು ಕೆಲಸ ಮಾಡುತ್ತಿವೆ. ತಮ್ಮ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅದು ಸ್ಥಳೀಯ ಸನ್ನಿವೇಶದ ಬಗ್ಗೆ ಪರಿಜ್ಞಾನವಿರುವ ಸ್ವಯಂಸೇವಾ ಸಂಸ್ಥೆಯೊಂದನ್ನು ಆಯ್ಕೆ ಮಾಡಿಕೊಳ್ಳುತ್ತದೆ. ಅಕ್ಷರ ಪ್ರತಿಷ್ಠಾನವು ಉತ್ತಮ ಸಾಹಸಿ ದೃಷ್ಟಿಕೋನವನ್ನು ಇಲ್ಲಿ ಅಳವಡಿಸಿಕೊಂಡಿವೆ. ಅಂತಹ ಕಾರ್ಯತಂತ್ರಗಳೆಂದರೆ ಶಾಲಾ ಪೂರ್ವ ಮಕ್ಕಳಿಗೆ ಬಾಲವಾಡಿಗಳು, ಸಂಚಾರಿ

ಗ್ರಂಥಾಲಯಗಳು ಮತ್ತು ಶಾಲಾ ಮಕ್ಕಳಿಗಾಗಿ ವೇಗವರ್ಧಿತ ಓದುವ ಕಾರ್ಯಕ್ರಮಗಳು ಆರಂಭವಾಗುವುದಕ್ಕಿಂತ ಮುಂಚೆ ಓದುವ ಕುಶಲತೆಯು ಬರದಿದ್ದ ಮಕ್ಕಳು ಸದರಿ ಕಾರ್ಯಕ್ರಮದಿಂದಾಗಿ ಶಾಲೆಯಲ್ಲಿನ ಒಟ್ಟು ಮಕ್ಕಳಲ್ಲಿ ಶೇ. ೭೦%ರಷ್ಟು ಮಕ್ಕಳು ಓದುವ ಕುಶಲತೆಯನ್ನು ಪಡೆದುಕೊಂಡಿರುವುದು ಕಂಡುಬಂದಿದೆ. ಈ ಮಕ್ಕಳಿಗೆ ೪೫ ದಿನಗಳ ಕಾಲ ಪ್ರತಿದಿನ ಓದಲು ಆಕರ್ಷಣೆಯಾದ ಕಥೆ ಕಾರ್ಡ ಒಂದನ್ನು ನೀಡಲಾಯಿತು. ಇವು ಮಕ್ಕಳಲ್ಲಿ ಆಸಕ್ತಿಯನ್ನು ಕೆರಳಿಸಿದವು. ಈ ರೀತಿಯಾಗಿ ಬಾಲವಾಡಿಗಳಲ್ಲಿ ತರಬೇತಿ ಪಡೆದ ಮಕ್ಕಳು ಗ್ರಾಮೀಣ ಪ್ರದೇಶದಲ್ಲಿ ಉತ್ತಮ ಯಶಸ್ಸನ್ನು ತೋರಿದರು. ಇದು ಶಾಲಾ ವಾತಾವರಣದ ಮೇಲೆ ಉತ್ತಮ ಪರಿಣಾಮ ಬೀರುವ ಸಾಧ್ಯತೆ ಇದೆ. ಶಾಲೆಯನ್ನು ಮಧ್ಯದಲ್ಲಿ ಬಿಡುವ ಪ್ರವೃತ್ತಿಯು ಕಡಿಮೆಯಾಗುವ ಸಾಧ್ಯತೆ ಇದೆ.

ಇದೇ ರೀತಿಯಾಗಿ ಈ ಭಾಗದಲ್ಲಿ ಅಜೀಂ ಪ್ರೇಮ್‌ಜೀ ಪ್ರತಿಷ್ಠಾನ ಇಂತಹ ವೇಗವರ್ಧಿತ ಓದುವ ಕಾರ್ಯಕ್ರಮ ಮತ್ತು ಕಂಪ್ಯೂಟರ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಅಲ್ಲದೇ ವನವಾಸಿ ಕಲ್ಯಾಣವೆಂಬ ಸ್ವಯಂ ಸೇವಾ ಸಂಸ್ಥೆಯ ಈ ನಾಡಿನ ಬೇಡ ಮಕ್ಕಳಿಗೆ, ವೃದ್ಧರಿಗೆ, ಅಕ್ಷರ ಜ್ಞಾನವನ್ನು ಕೊಡುತ್ತಿದೆ. ಸಗರನಾಡಿನ ತಿಂಥಣಿ, ಕಕ್ಕೇರಾ ಮತ್ತು ಶಹಾಪುರದ ಕೆಲವು ಗ್ರಾಮಗಳಲ್ಲಿ ಶಾಖೆಗಳನ್ನು ತೆರೆದು ಶಿಕ್ಷಣದ ಸಂಸ್ಕಾರಗಳನ್ನು ಕಲಿಸಿಕೊಡುತ್ತಿದೆ. ವನವಾಸಿ ಕಲ್ಯಾಣ ಸಂಸ್ಥೆಯು ತಿಂಥಣಿಯ ಬೇಡ ಯುವಕನಾದ ಅಯ್ಯಪ್ಪ ಎಂಬುವವನನ್ನು ಅಲಹಾಬಾದಿಗೆ ಎಂ.ಬಿ.ಎ. ಶಿಕ್ಷಣ ಪಡೆಯಲು ಕಳಿಸಿಕೊಟ್ಟಿದೆ. ಹೀಗೆ ಸರಕಾರ ಮತ್ತು ಎನ್.ಜಿ.ಓ.ಗಳು ಶೈಕ್ಷಣಿಕ ಪ್ರಜ್ಞೆಯನ್ನು ಮತ್ತು ಅಕ್ಷರಜ್ಞಾನವನ್ನು ಮೂಡಿಸಲು ಶ್ರಮಿಸುತ್ತಿವೆ.

**೭.೩ ಬೇಡ ಸಮುದಾಯದವರಿಗೆ ಸಿಗುವ ಶೈಕ್ಷಣಿಕ ಸೌಲಭ್ಯಗಳು:**

೧. 'ಪರಿಶಿಷ್ಟ ಪಂಗಡ ಅಂದರೆ ಬೇಡ ಸಮುದಾಯದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ.

೨. ಸ್ಥಳೀಯ ಪುರಸಭೆ ಮತ್ತು ನಗರ ಸಭೆಗಳಲ್ಲಿ ಬೇಡ ಸಮುದಾಯದ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಅರ್ಹತೆಗೆ ತಕ್ಕಂತೆ ಪ್ರೋತ್ಸಾಹ ಧನ ನೀಡಲಾಗುತ್ತದೆ.

೩. ಸಗರನಾಡಿನ ಎಲ್ಲಾ ಗ್ರಾಮಗಳ ಗ್ರಾಮ ಪಂಚಾಯತಿಗಳಲ್ಲಿ ಪ್ರೋತ್ಸಾಹ ಧನದ ಜೊತೆಗೆ ೨೦೧೦-೧೧ನೇ ಸಾಲಿನಲ್ಲಿ ಸೌರ ವಿದ್ಯುತ್ ಕಂದಿಲುಗಳನ್ನು ನೀಡಲಾಗಿದೆ.'[೮]

೪. 'ಪರಿಶಿಷ್ಟ ಜನಾಂಗ ಅಥವಾ ಪಂಗಡದವರಿಗೆ ಉನ್ನತ ಶಿಕ್ಷಣದಲ್ಲಿ ಶೇ. ೨೦% ರಷ್ಟು ಸ್ಥಾನಗಳನ್ನು ಕಾಯ್ದಿರಿಸಲಾಗಿದೆ.

೫. ಕೇಂದ್ರ ಸರ್ಕಾರವು ಶಿಕ್ಷಣದ ಪ್ರೋತ್ಸಾಹಕ್ಕಾಗಿ ನೀಡುವ ಒಟ್ಟು ಆರ್ಥಿಕ ಸಹಾಯದಲ್ಲಿ ಸುಮಾರು ಶೇ. ೧೭.೫% ಭಾಗವನ್ನು ಆದಿವಾಸಿಗಳಿಗೆ ಮೀಸಲಿರಿಸಲಾಗಿದೆ.

೬. ಸರ್ಕಾರದಿಂದ ಕೃಷಿ, ಅರಣ್ಯ, ತೋಟಗಾರಿಕೆ, ಪಶುಸಂಗೋಪನೆ, ಮೀನು ಸಾಗಾಣಿಕೆ, ಗೃಹಕೈಗಾರಿಕೆ ಮುಂತಾದವುಗಳ ಬಗ್ಗೆ ಶಿಕ್ಷಣವನ್ನು ನೀಡಲಾಗುತ್ತಿದೆ.

೭. ಐ.ಎ.ಎಸ್., ಐ.ಪಿ.ಎಸ್., ಮತ್ತು ಕೆ.ಎ.ಎಸ್. ಮುಂತಾದ ಪರೀಕ್ಷೆಗಳಿಗೆ ಕುಳಿತು ಕೊಳ್ಳಲು ಈ ಬೇಡ ಸಮುದಾಯದವರಿಗೆ ಗುಲ್ಬರ್ಗಾ ಯಾದಗಿರ ಜಿಲ್ಲೆಗಳಲ್ಲಿ ವಿಶೇಷ ತರಬೇತಿಯನ್ನು ನೀಡಲಾಗುತ್ತದೆ.

೮. ಸರ್ಕಾರದ ಉದ್ಯೋಗಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳ ಸ್ನಾತಕೋತ್ತರ ಪದವಿ ವಿಭಾಗಗಳಲ್ಲಿ ಮೀಸಲಾತಿಯನ್ನು ಕಲ್ಪಿಸಲಾಗಿದೆ.[೯]

**ಅಡಿಟಿಪ್ಪಣಿ**

೧. ವೀಣಾ ಎಸ್. ೨೦೦೭, ಭಾರತ ಸಮಾಜದಲ್ಲಿ ಶಿಕ್ಷಣ ಮತ್ತು ಶಿಕ್ಷಕ, ಪು.ಸಂ. ೧೫

೨. ಚ.ನ.ಶಂಕರರಾವ್, ೨೦೧೨, ಸಮಾಜಶಾಸ್ತ್ರ, ಪು.ಸಂ. ೮೫

೩. ಅದೇ, ಪು.ಸಂ. ೮೬

೪. ವೀಣಾ ಎಸ್. ೨೦೦೭, ಭಾರತ ಸಮಾಜದಲ್ಲಿ ಶಿಕ್ಷಣ ಮತ್ತು ಶಿಕ್ಷಕ, ಪು.ಸಂ. ೧೮

೫. ತಾರಿಹಳ್ಳಿ ಹನುಮಂತಪ್ಪ (ಸಂ), ೨೦೧೨, ನಾಯಕರ ಮಹಾ ಸಂಸ್ಥಾನ ಸುರಪುರ, ಪು.ಸಂ. ೪೩.

೬. ಭಾಸ್ಕರರಾವ್ ಮುಡಬೂಳ, ೨೦೧೫, ಮರೆತುಹೋದ ಸುರಪುರ ಇತಿಹಾಸ, ಪು.ಸಂ. ೫೮.

೭. ತಾರಿಹಳ್ಳಿ ಹನುಮಂತಪ್ಪ (ಸಂ), ೨೦೧೨, ನಾಯಕರ ಮಹಾ ಸಂಸ್ಥಾನ ಸುರಪುರ, ಪು.ಸಂ. ೯೦

೮. ತಾಲ್ಲೂಕು ಪಂಚಾಯತ್ ಕ್ರಿಯಾಯೋಜನೆಯಿಂದ ಪಡೆದ ಮಾಹಿತಿ

೯. ಅಮರೇಶ ಯತಗಲ್, ೨೦೦೫, ಏಕಲವ್ಯ ಸ್ಮರಣ ಸಂಚಿಕೆ, ಪು.ಸಂ. ೭೯

# ಅಧ್ಯಾಯ ೮

## ಸಗರನಾಡಿನ ಬೇಡ ಸಮುದಾಯದ ರಾಜಕೀಯ ಜೀವನ

೧. ಬೇಡ ಸಮುದಾಯದ ರಾಜಕೀಯ ಜೀವನ

೨. ಬೇಡ ಸಮುದಾಯದ ರಾಜಕೀಯ ಮೀಸಲಾತಿ

೩. ಬೇಡ ಸಮುದಾಯದ ರಾಜಕೀಯ ನಾಯಕರು ಮತ್ತು ಅಭಿವೃದ್ಧಿ

೪. ಸಗರನಾಡಿನ ಸುರಪುರ ಬೇಡರ ರಾಜಕೀಯ ಆಸಕ್ತಿ

೫. ಶಹಾಪುರ ಮತ್ತು ಜೇವರ್ಗಿ ಬೇಡರ ರಾಜಕೀಯ ಆಸಕ್ತಿ ಮತ್ತು ಅನಾಸಕ್ತಿ

೬. ರಾಜಕೀಯ ನಾಯಕರುಗಳ ಪ್ರತಿಕ್ರಿಯೆ ಮತ್ತು ಅಭಿಪ್ರಾಯಗಳು

೭. ಬೇಡ ಸಮುದಾಯ ಮತ್ತು ರಾಜಕೀಯ ಮೀಸಲಾತಿಯ ಪ್ರಯೋಜನಗಳು

೮. ಸಗರನಾಡಿನ ಬೇಡ ಸಮುದಾಯದ ಶಾಸಕರು ಮತ್ತು ಲೋಕಸಭಾ ಸದಸ್ಯರ ಪಟ್ಟಿ

೯. ಸಗರನಾಡಿನ ಬೇಡರ ಆಯ್ದ ಗ್ರಾಮ ಪಂಚಾಯತ, ತಾಲೂಕ ಪಂಚಾಯತ ಮತ್ತು ಜಿಲ್ಲಾ ಪಂಚಾಯತ ಸದಸ್ಯರ ಪಟ್ಟಿ

## ಅಧ್ಯಾಯ ೮

## ಸಗರನಾಡಿನ ಬೇಡ ಸಮುದಾಯದ ರಾಜಕೀಯ ಜೀವನ

### ೮.೧ ಬೇಡರ ರಾಜಕೀಯ ಜೀವನ:

ಸಗರನಾಡಿನಲ್ಲಿ ಬೇಡರು ರಾಜಕೀಯ ಮತ್ತು ರಾಜ್ಯಭಾರವನ್ನು ಬಹು ಹಿಂದಿನಿಂದಲೂ ಮಾಡಿಕೊಂಡು ಬಂದಿದ್ದಾರೆ. ಬೇಡರ ರಾಜಕೀಯ ಐತಿಹಾಸಿಕ ಹಿನ್ನೆಲೆಯನ್ನು ನೋಡಿದಾಗ '೧೬೩೬ ರಿಂದ ೧೯೪೭ರವರೆಗೆ ಬೇಡರು ಸುರಪುರ ಸಂಸ್ಥಾನವನ್ನು ಕಟ್ಟಿಕೊಂಡು ಸುರಪುರ, ಶಹಾಪುರ, ಜೇವರ್ಗಿ ತಾಲೂಕುಗಳನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡು ರಾಜ್ಯಭಾರವನ್ನು ಮಾಡಿದ್ದಾರೆ. ಗಡ್ಡಿ ಪಿಡ್ಡನಾಯಕ, ರಾಜಾ ಹರಸಂಗಿ ಪಾಮನಾಯಕ, ರಾಜಾ ಪೀತಾಂಬರ ಬಹರಿ ಪಿಡ್ಡನಾಯಕ, ರಾಜಾ ಇಮ್ಮಡಿ ಪಾಮನಾಯಕ, ರಾಜಾ ಮುಮ್ಮಡಿ (ರಾಘವ) ಪಾಮನಾಯಕ, ರಾಜಾ ಇಮ್ಮಡಿ ವೆಂಕಟಪ್ಪ ನಾಯಕ, ರಾಜಾ ನಾಲ್ವಡಿ ಪಿಡ್ಡನಾಯಕ, ಮುಮ್ಮುಡಿ ರಾಜಾ ದೇವೆಂದ್ರ ವೆಂಕಟಪ್ಪ ನಾಯಕ, ರಾಜಾ ಕೃಷ್ಣಪ್ಪ ನಾಯಕ, ಮಹಾಕ್ರಾಂತಿ ವೀರ ನಾಲ್ವಡಿ ರಾಜಾ ವೆಂಕಟಪ್ಪ ನಾಯಕ, ರಾಣಿ ಈಶ್ವರಮ್ಮ, ರಾಣಿ ರಂಗಮ್ಮ, ದತ್ತು ಪುತ್ರ ವೆಂಕಟಪ್ಪ ನಾಯಕ ಮಗನಾದ ರಾಜಾ ಕೃಷ್ಣಪ್ಪನಾಯಕ (೧೯೫೨) ಹೀಗೆ ಬೇಡ ರಾಜರುಗಳು ಪೈಪೋಟಿಗೆ ಬಿದ್ದಂತೆ ಸಗರನಾಡನ್ನು ಸ್ವತಂತ್ರವಾಗಿ ಸುಲಲಿತವಾಗಿ ರಾಜ್ಯಭಾರವನ್ನು ಮಾಡಿಕೊಂಡು ಬಂದರು.'[೧] ಮುಂದೆ ಸ್ವಾತಂತ್ರ್ಯ ನಂತರ ಪ್ರಜಾಪ್ರಭುತ್ವ ಆಡಳಿತ ಜಾರಿಗೆ ಬಂದನಂತರ ೧೯೪೭ರಲ್ಲಿ ಮೊದಲ ವಿಧಾನಸಭಾ ಚುನಾವಣೆಯಲ್ಲಿ ಬೇರೆ ಸಮುದಾಯದವರು ಗೆದ್ದದ್ದು ಬಿಟ್ಟರೇ ೧೯೫೨ರಿಂದ ಇಂದಿನವರೆಗೆ ಸಾಮಾನ್ಯ ಮೀಸಲಾತಿ ಇದ್ದರೂ ಎಸ್.ಟಿ. ಮೀಸಲಾತಿ ಇದ್ದರೂ ಸುರಪುರದಲ್ಲಿ ಬೇಡರೇ ಇಂದಿನವರೆಗೆ ಎ.ಎಲ್.ಎ.ಗಳಾಗಿ ಆಯ್ಕೆಯಾಗುತ್ತಾ ಬಂದಿದ್ದಾರೆ. ಇದರ ಜೊತೆಗೆ ಕೆಲವು ಸಂದರ್ಭಗಳಲ್ಲಿ ಎಮ್.ಪಿ.ಗಳಾಗಿ ಆಯ್ಕೆಯಾಗಿದ್ದಾರೆ. ಆದರೆ ದುರದೃಷ್ಟಕರ ವಿಷಯವೆಂದರೆ ಸಗರ ನಾಡಿನಲ್ಲಿ ಕೇವಲ ಸುರಪುರ ತಾಲೂಕು ಮಾತ್ರ ಬೇಡರ ರಾಜಕೀಯ ಹಿಡಿತದಲ್ಲಿದೆ. ಆದರೆ ಶಹಾಪುರ, ಜೇವರ್ಗಿ ತಾಲೂಕುಗಳು ಈ ಬೇಡ ಸಮುದಾಯದವರ ಹಿಡಿತದಲ್ಲಿ ಇಲ್ಲ. ಕೆಲವು ಗ್ರಾಮಗಳಲ್ಲಿ ಮಾತ್ರ ಗ್ರಾಮ ಪಂಚಾಯತಿ

ಅಧ್ಯಕ್ಷರಾಗಿ ತಾಲೂಕು ಪಂಚಾಯತಿ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಅಂದರೆ ಶಹಾಪುರ ಜೇವರ್ಗಿ ತಾಲೂಕುಗಳಲ್ಲಿ ಬೇಡರು ರಾಜಕೀಯವಾಗಿ ಹಿಂದುಳಿದಿದ್ದಾರೆ ಎಂದು ಹೇಳಬಹುದು. ಕಾರಣ ಈ ಎರಡೂ ತಾಲೂಕುಗಳಲ್ಲಿ ಬೇಡರು ಮೇಲ್ಜಾತಿಯವರಿಂದ ರಾಜಕೀಯವಾಗಿ ತುಳಿತಕ್ಕೆ ಒಳಗಾಗಿದ್ದಾರೆ. ಚುನಾವಣೆ ಸಂದರ್ಭದಲ್ಲಿ ಮಾತ್ರ ಮತಬ್ಯಾಂಕುಗಳನ್ನಾಗಿ ಮಾಡಿಕೊಂಡು ಉಳಿದ ಸಂದರ್ಭಗಳಲ್ಲಿ ಇವರನ್ನು ನಿರ್ಲಕ್ಷಿಸಿದ್ದಾರೆ. ಬೇಡರು ಕೇವಲ ಗ್ರಾಮ ಪಂಚಾಯತಿ, ತಾಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ ಮಾತ್ರ ತೃಪ್ತಿಪಟ್ಟುಕೊಳ್ಳಬೇಕಾಗಿದೆ. ಇದು ಸುರಪುರ, ಶಹಾಪುರ ಮತ್ತು ಜೇವರ್ಗಿ ತಾಲೂಕಿನೊಳಗೆ ಇರುವ ಪ್ರಮುಖ ರಾಜಕೀಯ ವ್ಯತ್ಯಾಸ ಎಂದು ಹೇಳಬಹುದು.

**೮.೨ ಬೇಡ ಸಮುದಾಯದ ರಾಜಕೀಯ ಮೀಸಲಾತಿ:**

'೧೯೪೭ರಲ್ಲಿ ಭಾರತ ದೇಶಕ್ಕೆ ಸ್ವತಂತ್ರ ಬಂದನಂತರ ೧೯೫೦ನೇ ಜನವರಿ ೨೬ನೇ ತಾರೀಖು ನಮ್ಮ ಸಂವಿಧಾನ ಜಾರಿಗೆ ಬಂದಾಗ ಸಂವಿಧಾನದ ರಚನಾಕಾರರು ಸಮಾಜದ ಎಲ್ಲ ವರ್ಗದ ಜನರಿಗೆ ಅವಕಾಶ ಕಲ್ಪಿಸುವುದಕ್ಕಾಗಿ ಸಂವಿಧಾನದ ೩೩೦(೧) ಹಾಗೂ ೩೩೨ನೇ ವಿಧಿಗಳ ಪ್ರಕಾರ ಪರಿಶಿಷ್ಟ ಪಂಗಡ ಎಸ್.ಟಿ. ಮತ್ತು ಪರಿಶಿಷ್ಟ ಜಾತಿಗಳಿಗೆ ಲೋಕಸಭೆ ಮತ್ತು ವಿಧಾನ ಸಭೆಗಳಲ್ಲಿ ಕೆಲವು ಸ್ಥಾನಗಳನ್ನು ಮೀಸಲಿಟ್ಟರು. ಅಧಿಕಾರ ವಿಕೇಂದ್ರಿಕರಣ ತತ್ವದ ಪ್ರಕಾರ ಪಂಚಾಯತ ರಾಜ್ ವ್ಯವಸ್ಥೆ ಜಾರಿಗೆ ಬಂದ ನಂತರ ಪ್ರತಿಯೊಂದು ಗ್ರಾಮ ಪಂಚಾಯತಿ ತಾಲೂಕು ಪಂಚಾಯತಿ ಹಾಗೂ ಜಿಲ್ಲಾ ಪಂಚಾಯತಿ ಸದಸ್ಯ ಸ್ಥಾನಗಳಿಗಾಗಿ ಮೀಸಲಾತಿಯನ್ನು ನಿಗದಿಪಡಿಸಿದರು. ಇಂದು ಸರಕಾರ ಸಮಾಜದ ಎಲ್ಲಾ ವರ್ಗದ ಜನರು ಕೇವಲ ಸಾಮಾಜಿಕವಾಗಿ ಆರ್ಥಿಕವಾಗಿ ಅಭಿವೃದ್ಧಿಗೊಳಿಸುವುದರ ಜೊತೆಗೆ ರಾಜಕೀಯವಾಗಿ ಸಹಿತ ಅಭಿವೃದ್ಧಿಗೊಳ್ಳಲು ಈ ಅವಕಾಶ ಕಲ್ಪಿಸಲಾಗಿದೆ.'[೨]

ಈ ಮೀಸಲಾತಿಯನ್ನು ಉಪಯೋಗಿಸಿಕ್ಕೊಳ್ಳುತ್ತಿರುವ ಸಗರನಾಡಿನ ಬೇಡರು ಇಂದು ಮೊದಲಿಗಿಂತ ರಾಜಕೀಯದಲ್ಲಿ ಆಸಕ್ತಿಯನ್ನು ಬೆಳೆಸಿಕೊಳ್ಳುತ್ತಿದ್ದಾರೆ. ರಾಜಕೀಯ ಆಸಕ್ತಿಯನ್ನು ಬೆಳೆಸಿಕೊಂಡ ಕೆಲವು ಬೇಡ ರಾಜಕೀಯ ಮುಖಂಡರುಗಳು ಜನ ಸೇವೆಯೇ ಜನಾರ್ಧನನ ಸೇವೆ ಎಂದು ತಿಳಿದು ಎಮ್.ಎಲ್.ಎ., ಎಮ್.ಪಿ., ಗ್ರಾಮ ಪಂಚಾಯತಿ, ತಾಲೂಕ ಪಂಚಾಯತಿ, ಜಿಲ್ಲಾ ಪಂಚಾಯತಿ ಚುನಾವಣೆಗಳಿಗೆ ಅಭ್ಯರ್ಥಿಗಳಾಗಿ ನಿಂತು ಜಯಗಳಿಸುತ್ತಿದ್ದಾರೆ. ಚುನಾವಣೆಗಳಲ್ಲಿ ಸ್ಪರ್ಧಿಸಿ ಗೆದ್ದಂತೆ ಬೇಡ ನಾಯಕರುಗಳು ಒಳ್ಳೆಯ ರಾಜಕೀಯ ಆಡಳಿತವನ್ನು ನೀಡುತ್ತಿದ್ದಾರೆ. ನಿಧಾನವಾಗಿ ತಮ್ಮ ನಾಯಕತ್ವದ ಗುಣವನ್ನು ತೋರಿಸುತ್ತಿದ್ದಾರೆ. ಸಗರನಾಡಿನಲ್ಲಿ ಕೆಲವು ಬೆರಳಣಿಕೆಯಷ್ಟು ಬೇಡ ನಾಯಕರು ಮಾತ್ರ ಸಂಪೂರ್ಣವಾಗಿ ರಾಜಕೀಯದಲ್ಲಿ ತಲ್ಲೀನರಾದರೆ ಇನ್ನು ಕೆಲವರು ರಾಜಕೀಯ

ನಾಯಕರಾದರು. ಒಂದು ಕಡೆ ಇನ್ನಿತರ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಬಹುತೇಕ ಬೇಡರು ಕೃಷಿ, ಸರ್ಕಾರಿ ಉದ್ಯೋಗ, ಖಾಸಗಿ ಉದ್ಯೋಗಳನ್ನು ಮಾಡುತ್ತಿದ್ದಾರೆ. ಸುರಪುರದಲ್ಲಿ ಸ್ವಾತಂತ್ರ್ಯ ಬಂದಾಗಿನಿಂದ ಇಂದಿನವರೆಗೆ ಬೇಡರೇ ಎಮ್.ಎಲ್.ಎ.ಗಳಾಗಿ ಆಯ್ಕೆಯಾಗಿದ್ದಾರೆ. ಇವರನ್ನು ಸೋಲಿಸಲು ಇದುವರೆಗೆ ಯಾವ ಜಾತಿ-ಧರ್ಮದವರಿಂದ ಸಾಧ್ಯವಾಗಿಲ್ಲ. ಅಷ್ಟೊಂದು ರಾಜಕೀಯದಲ್ಲಿ ಚಾಣಾಕ್ಷತೆಯನ್ನು ಹೊಂದಿದ್ದಾರೆ ಎಂದು ಹೇಳಬಹುದು. ಆದರೆ ಈ ಚಾಣಾಕ್ಷತೆ ಶಹಾಪುರ್, ಜೇವರ್ಗಿ ಬೇಡರಲ್ಲಿ ಕಾಣಸಿಗುವುದಿಲ್ಲ. ಆದರೆ ಪ್ರಸ್ತುತ ದಿನಮಾನಗಳಲ್ಲಿ ನಿಧಾನವಾಗಿ ರಾಜಕೀಯವಾಗಿ ಮೇಲೆ ಬರುತ್ತಿದ್ದಾರೆ.

**೮.೩ ಸಗರನಾಡಿನಲ್ಲಿ ಬೇಡ ಸಮುದಾಯದ ರಾಜಕೀಯ ನಾಯಕರು ಮತ್ತು ಅಭಿವೃದ್ಧಿ**

**ರಾಜಾ ಪಿಡ್ಡನಾಯಕ:** 'ಇವರು ಸುರಪುರ ಸಂಸ್ಥಾನದ ರಾಜರಾಗಿದ್ದು ೧೯೫೨ ರಿಂದ ೨೦ ವರ್ಷಗಳವರೆಗೆ ಸುರಪುರ ವಿಧಾನ ಸಭಾ ಕ್ಷೇತ್ರದಿಂದ ಆಯ್ಕೆಯಾಗಿದ್ದಾರೆ. ಇವರ ಜನಸೇವೆ ಇಂದಿನ ನಾಯಕರುಗಳಿಗೆ ಒಂದು ಮಾದರಿ ಇದ್ದಂತೆ. ವಿಧಾನಸಭೆಯಲ್ಲಿ ಮತ್ತು ಅಂದಿನ ಮುಖ್ಯಮಂತ್ರಿಗಳಲ್ಲಿ ಇವರ ಮಾಹಿತಿಗೆ ಭೂಮಿ ತೂಕದ ಬೆಲೆ ಮತ್ತು ಮರ್ಯಾದೆ ಇತ್ತು. ಇವರು ಯಾವುದೇ ಆಸೆ ಆಮಿಷಕ್ಕೆ ಬಲಿಯಾಗದೇ ಶಾಸಕರಾಗಿ ಜನಸೇವೆ ಮಾಡಿದ್ದಾರೆ. ಸುರಪುರ ಕ್ಷೇತ್ರಕ್ಕೆ ಅಂದು ಅನೇಕ ಜನಪರ ಕೆಲಸ ಕಾರ್ಯಗಳನ್ನು ಮಾಡಿದ್ದಾರೆ. ಇಂದಿನ ಅರಮನೆಯ ಹಿರಿಯರಿಂದ ತಿಳಿದುಕೊಂಡಾಗ ಇವರೊಬ್ಬ ಅತ್ಯಂತ ಕೋಮಲ ಹೃದಯದ ಮುಗ್ಧ ಸ್ವಭಾವದವರಾಗಿದ್ದರು ಎಂದು ತಿಳಿದು ಬರುತ್ತದೆ.'[೬] ಇಂದಿಗೂ ಕೂಡ ಇವರನ್ನು ಸಗರ ನಾಡಿನ ಜನರು ನೆನಪಿಸಿಕೊಳ್ಳುತ್ತಾರೆ. ಅವರು ಮನೆ ಮನೆಗೆ ಮತ ಕೇಳಲು ಹೋದಾಗ ಜನರು ಪ್ರೀತಿಯಿಂದ ಕಣ್ಣೀರಿಟ್ಟಿದ್ದರು ಎಂದು ತಿಳಿದು ಬರುತ್ತದೆ. ಅಂದರೆ ರಾಜನಾದವನು ನಮ್ಮಂತಹ ಜನಸಾಮಾನ್ಯರ ಮನೆ ಬಾಗಿಲಿಗೆ ಬಂದಿದ್ದು ನಮ್ಮ ಪುಣ್ಯ ಎಂಬ ಭಾವ ಅವರಲ್ಲಿತ್ತು. ಇವರು ಎಂದೂ ಕೂಡಾ ಭ್ರಷ್ಟಾಚಾರಕ್ಕೆ ಬಲಿಯಾದವರಲ್ಲ. ಜನರಿಗೆ ಸರ್ಕಾರಕ್ಕೆ ಕೈ ಚಾಚಿ ಬೇಡಿದವರಲ್ಲ. ಒಂದು ಕೈಯಿಂದ ಕೊಟ್ಟಿದ್ದನ್ನು ಇನ್ನೊಂದು ಕೈಯಿಂದ ತೆಗೆದುಕೊಳ್ಳುತ್ತಿರಲಿಲ್ಲ. ಇವರು ವಿಧಾನಸಭೆಯೊಳಗೆ ಹೋದರೆ ಮುಖ್ಯಮಂತ್ರಿಗಳೇ ಎದ್ದು ನಿಂತು ಕೂಡುತ್ತಿದ್ದರಂತೆ ಒಂದು ಸಂದರ್ಭದಲ್ಲಿ ಅಂದಿನ ಮುಖ್ಯಮಂತ್ರಿ ಡಿ. ದೇವರಾಜ ಅರಸರು ನಿಮಗೆ ಮಂತ್ರಿಸ್ಥಾನ ಕೊಡುತ್ತೇವೆ ಸ್ವೀಕರಿಸಿರಿ ಎಂದು ಹೇಳಿದಾಗ ನಾನು ಸಂಸ್ಥಾನದ ರಾಜ ಎಂದೂ ಕೂಡ ಮಂತ್ರಿಯಾಗುವುದಿಲ್ಲ. ಕೇವಲ ವಿಧಾನಸಭೆ ಸದಸ್ಯನಾಗಿಯೇ ಮುಂದುವರೆಯುತ್ತೇನೆ ಎಂದು ಉತ್ತರ ಕೊಟ್ಟರಂತೆ. ಈ ಮಾತನ್ನು ಕೇಳಿದಾಗ ಇವರು ಎಂತಹ ಮಹಾನ್ ವ್ಯಕ್ತಿಗಳು ಎಂದು ನಮಗೆ ತಿಳಿದುಬರುತ್ತದೆ. ದುರದೃಷ್ಟದ ಸಂಗತಿ ಎಂದರೆ ಅವರು ೧೯೯೨ರಲ್ಲಿ ಸ್ವರ್ಗಸ್ಥರಾದರು ಎಂದು ತಿಳಿದು ಬರುತ್ತದೆ.

**ರಾಜಾ ಕುಮಾರ ನಾಯಕ:**

'ಅವರು ೧೯೭೧-೭೨ ರಿಂದ ಸುಮಾರು ೧೦ ವರ್ಷಗಳ ಕಾಲ ಎರಡುಬಾರಿ ಸುರಪುರ ಕ್ಷೇತ್ರದ ಶಾಸಕರಾಗಿ ಆಯ್ಕೆಯಾಗಿದ್ದಾರೆ. ಇವರು ತಮ್ಮ ಸಂಬಂಧಿಕರಾದ ರಾಜಾ ಪಿಡ್ಡನಾಯಕರ ವಿರುದ್ಧ ಜಯಗಳಿಸಿ ಸುರಪುರದ ರಾಜಕೀಯ ಚುಕ್ಕಾಣಿಯನ್ನು ಹಿಡಿದರು. ಇವರು ತಮ್ಮ ಕ್ಷೇತ್ರದಲ್ಲಿ ಸಾಕಷ್ಟು ಜನಪರ ಅಭಿವೃದ್ಧಿ ಕೆಲಸ ಕಾರ್ಯಗಳನ್ನು ಮಾಡಿದ್ದಾರೆ ಎಂದು ಊರಿನ ಹಿರಿಯರು ಹೇಳುತ್ತಾರೆ.'[೪] (ಇವರ ಪುತ್ರರಿಂದ ಪಡೆದ ಮಾಹಿತಿ)

**ಬ್ಯಾರಿಸ್ಟರ್ ರಾಜಾ ವೆಂಕಟಪ್ಪನಾಯಕ (ಶಹಾಪುರ ತಾಲೂಕಿನ ಮಾಜಿ ಶಾಸಕರು):**

'ಇವರನ್ನು ಸಗರನಾಡಿನ ಹೆಮ್ಮೆಯ ಪುತ್ರರೆಂದು ಹೇಳಬಹುದು. ಇವರು ಹೈದ್ರಾಬಾದಿನಲ್ಲಿ ತಮ್ಮ ವಿದ್ಯಾಭ್ಯಾಸ ಮುಗಿಸಿ ಉಚ್ಚ ವ್ಯಾಸಂಗಕ್ಕಾಗಿ ಲಂಡನ್ನಿಗೆ ತೆರಳಿ ಅಲ್ಲಿಂದ ಬ್ಯಾರಿಸ್ಟರ್ ಪದವಿಯನ್ನು ಪಡೆದು ಹೈದ್ರಾಬಾದ ನಿಜಾಮರ ಶ್ರೇಷ್ಠ ನ್ಯಾಯಾಲಯದಲ್ಲಿ ವಕೀಲ ವೃತ್ತಿ ಮಾಡುತ್ತಿದ್ದರು. ೧೯೪೮ರಲ್ಲಿ ಹೈದ್ರಾಬಾದ ನಿಜಾಮನಿಂದ ಪ್ರೇರಿತನಾದ ಕಾಶಿಮ ರಜ್ವಿಯ ನಿಜಾಮ ರಾಜ್ಯದ ಹಿಂದು ಪ್ರಜೆಗಳ ಮೇಲೆ ದೌರ್ಜನ್ಯ ಅತ್ಯಾಚಾರವನ್ನು ಪ್ರಾರಂಭಿಸಿದಾಗ ತಮ್ಮ ವಕೀಲ ವೃತ್ತಿಯನ್ನು ಬಿಟ್ಟು ಹೈದ್ರಾಬಾದ ವಿಮೋಚನಾ ಚಳುವಳಿಯ ನೇತೃತ್ವವನ್ನು ವಹಿಸಿ ಜನರ ರಕ್ಷಣೆಗಾಗಿ ತಾಳಿಕೋಟಿಯಲ್ಲಿ ಯುವಕರ ಕ್ಯಾಂಪನ್ನು ಪ್ರಾರಂಭಿಸಿದರು. ಅಂದಿನ ಕೇಂದ್ರ ಸರಕಾರದ ಗೃಹಮಂತ್ರಿ ಸರದಾರ ವಲ್ಲಭಾಯಿ ಪಟೇಲ್ ಹಾಗೂ ಕೃಷ್ಣ ಮೆನನ್ ಜೊತೆ ಗರಿಷ್ಠ ಸಂಬಂಧ ಹೊಂದಿದ್ದು, ಹೈದ್ರಾಬಾದ ವಿಮೋಚನೆಗಾಗಿ ಕೇಂದ್ರ ಸರ್ಕಾರದ ಮಿಲಿಟರಿ ಕಾರ್ಯಾಚರಣೆ ನಡೆಸಬೇಕೆನ್ನುವ ಇವರ ಪ್ರಯತ್ನದಲ್ಲಿ ಯಶಸ್ವಿಯಾಗಿ ನಿಜಾಮನಿಂದ ಹೈದ್ರಾಬಾದ ಪ್ರಾಂತ್ಯವನ್ನು ಸ್ವತಂತ್ರಗೊಳಿಸಿ ಸ್ವಾತಂತ್ರ್ಯ ಹೋರಾಟಗಾರರ ಕೀರ್ತಿಗೆ ಪಾತ್ರರಾದರು. ೧೯೬೨ರಲ್ಲಿ ಒಂದೇ ಸಲಕ್ಕೆ ಶಹಾಪುರದ ಶಾಸಕರಾಗಿ ಮತ್ತು ರಾಯಚೂರ ಕ್ಷೇತ್ರದ ಎಂ.ಪಿ.ಯಾಗಿ ಆಯ್ಕೆಯಾಗಿ ಒಂದು ಹೊಸ ದಾಖಲೆಯನ್ನು ಸ್ಥಾಪಿಸಿದರು.'[೫] ತದನಂತರ ವಿಧಾನಸಭೆಗೆ ರಾಜಿನಾಮೆ ನೀಡಿ ಸಂಸದ ಸದಸ್ಯರಾಗಿ ಅನೇಕ ಅಭಿವೃದ್ಧಿ ಕೆಲಸ ಕಾರ್ಯಗಳನ್ನು ಮಾಡಿದ್ದಾರೆ ಎಂದು ಈ ಭಾಗದ ಹಿರಿಯರು ಹೇಳುತ್ತಾರೆ. ಕೇವಲ ರಾಜಕೀಯ ಆಸಕ್ತಿಯನ್ನು ಬೆಳೆಸಿಕೊಳ್ಳದೇ ಸಂಗೀತದಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ್ದರು. ಇವರು ತಬಲಾ ಬಾರಿಸುವುದರಲ್ಲಿ ಪ್ರವೀಣರಾಗಿದ್ದರು. ಇವರು ನಿಜಾಂನಿಗೆ ಮುಸ್ಲಿಂ ಮತಾಂಧರಿಗೆ ಸಿಂಹ ಸ್ವಪ್ನರಾಗಿ ಕಾಡಿದ್ದರು. ಅಂದಿನಿಂದ ಇಂದಿನವರೆಗೂ ಶಹಾಪುರದಲ್ಲಿ ಬೇಡ ಜನಾಂಗದ ಎಂ.ಎಲ್.ಎ.ಯಾಗಿ ಆಯ್ಕೆಯಾದ ಏಕೈಕ ವ್ಯಕ್ತಿಯೆಂದು ಹೇಳಬಹುದು. ಇದುವರೆಗೂ

ಯಾವೊಬ್ಬ ಬೇಡ ನಾಯಕನೂ ಶಹಾಪುರದಲ್ಲಿ ರಾಜಕೀಯ ಶಕ್ತಿಯಾಗಿ ಬೆಳೆದಿಲ್ಲ. (ಇವರ ಪುತ್ರರಿಂದ ಪಡೆದ ಮಾಹಿತಿ)

**ಶ್ರೀ ರಾಜಾ ಮದನಗೋಪಾಲ ನಾಯಕ:**

ಇವರು ಸುರಪುರದ ಬೇಡ ನಾಯಕರಲ್ಲಿ ರಾಜಕೀಯ ಚಾಣಾಕ್ಷತೆಯನ್ನು ಹೊಂದಿದ ಪ್ರಮುಖ ನಾಯಕರಲ್ಲಿ ಒಬ್ಬರು. ರಾಜಾ ಎಸ್. ಎಂ. ವೆಂಕಟಪ್ಪ ನಾಯಕ ಪತ್ನಿ ರಾಣಿ ಜಾನಕಿದೇವಿ ಅವರ ಮೂವರು ಪುತ್ರರಲ್ಲಿ ಹೆಮ್ಮೆಯ ಪುತ್ರರಾಗಿ ಹುಟ್ಟಿದ್ದಾರೆ. ರಾಜ ಪಾಮನಾಯಕ ಮತ್ತು ರಾಜಾ ಶ್ರೀನಿವಾಸ ನಾಯಕ ಸಹೋದರರನ್ನು ಹೊಂದಿರುವ ಇವರು ೨೨-೦೮-೧೯೫೧ ರಲ್ಲಿ ಜನಿಸಿದ್ದಾರೆ. ೧ನೇ ತರಗತಿಯಿಂದ ೭ನೇ ತರಗತಿಯವರೆಗೆ ಪ್ರಾಥಮಿಕ ಶಿಕ್ಷಣವನ್ನು ಸುರಪುರ ಆನಂದ ವಿದ್ಯಾಲಯ ಶಾಲೆಯಲ್ಲಿ ಮುಗಿಸಿ ೮ನೇ ತರಗತಿಯಿಂದ ೧೦ನೇ ತರಗತಿಯವರೆಗೆ ಗುಲ್ಬರ್ಗಾ ಜಿಲ್ಲೆಯ ಎಸ್. ವಿ. ಶಾಲೆಯಲ್ಲಿ ಮುಗಿಸಿದ್ದಾರೆ. ಸುರಪುರದ ಶ್ರೀ ಪ್ರಭು ಮಹಾವಿದ್ಯಾಲಯದಲ್ಲಿ (ಎಸ್.ಪಿ. ಕಾಲೇಜು) ತಮ್ಮ ಬಿ.ಎ. ಪದವಿಯನ್ನು ಪಡೆದರು. ತಮ್ಮ ಕಾಲೇಜು ದಿನಗಳಲ್ಲಿ ಪ್ರಭಾವಿ ವಿದ್ಯಾರ್ಥಿಯಾಗಿ ಎಲ್ಲರ ಗಮನವನ್ನು ಸೆಳೆದಿದ್ದರು. ಶ್ರೀ ಪ್ರಭು ಕಾಲೇಜಿನಲ್ಲಿ ನಡೆದ ವಿದ್ಯಾರ್ಥಿ ಚುನಾವಣೆಯಲ್ಲಿ ಸಿ. ಆರ್. ಆಗಿ ನೇಮಕವಾದರು. ಸದಾ ಅವರ ಹಿಂದೆ ವಿದ್ಯಾರ್ಥಿಗಳ ದೊಡ್ಡ ದಂಡೇ ಇರುತ್ತಿತ್ತು. ಈ ಒಂದು ಸಂಘಟನಾ ಚಾತುರ್ಯತೆಯೇ ಇವರು ರಾಜಕೀಯದಲ್ಲಿ ಮುಂದುವರೆಯುವಂತೆ ಮಾಡಿತು ಎಂದು ಹೇಳಿದರೆ ಅತಿಶಯೋಕ್ತಿ ಯಾಗಲಾರದು. ನಂಬಿದವರಿಗೆ ಯಾವತ್ತೂ ಇವರು ಕೈ ಬಿಟ್ಟಿಲ್ಲ. ಮತ್ತು ಕಷ್ಟದಲ್ಲಿದ್ದವರಿಗೆ ನಿಸ್ವಾರ್ಥವಾಗಿ ಸಹಾಯ ಮಾಡಿದ್ದಾರೆ ಎಂದು ಇವರ ಅಭಿಮಾನಿ ಬಳಗದವರು ಹೇಳುತ್ತಾರೆ. ೨೦ನೇ ವಯಸ್ಸಿನಲ್ಲಿ ಇವರು ರಾಜಕೀಯದಲ್ಲಿ ಸಕ್ರೀಯರಾದವರು '೩೧ನೇ ವಯಸ್ಸಿನಲ್ಲಿ ಇವರು ಕಾಂಗ್ರೆಸ್ಸಿನಿಂದ ರಾಜಾ ಕುಮಾರ ನಾಯಕ ಮತ್ತು ರಾಜಾ ಪಿಡ್ಡನಾಯಕರ ವಿರುದ್ಧ ಸ್ಪರ್ಧಿಸಿ ೧೨೫೦೦ ಮತಗಳಿಂದ ವಿಜಯವನ್ನು ಪಡೆದರು. (೧೯೮೩) ಆಗ ರಾಮಕೃಷ್ಣ ಹೆಗಡೆ ಮುಖ್ಯಮಂತ್ರಿಯಾಗಿದ್ದರು. ಅದೇ ರೀತಿಯಾಗಿ ೧೯೮೫ರ ಚುನಾವಣೆಯಲ್ಲಿ ಮಂಗಿಹಾಳ ಶಿವಣ್ಣ ಎಂಬ ಅಭ್ಯರ್ಥಿಯ ವಿರುದ್ಧ ೧೧೫೦ ಮತಗಳಿಂದ ಗೆದ್ದು ಎಂ.ಎಲ್.ಎ. ಆಗಿ ಮರು ಆಯ್ಕೆಯಾದರು. ಹಾಗೂ ೧೯೮೯ರಲ್ಲಿ ನಡೆದ ಸಾರ್ವತ್ರಿಕ ವಿಧಾನ ಸಭೆ ಚುನಾವಣೆಯಲ್ಲಿ ಮತ್ತು ಕಾಂಗ್ರೆಸ್‌ನಿಂದ ಸ್ಪರ್ಧಿಸಿ ೧೫೦೦೦ ಮತಗಳಿಂದ ಮರು ಆಯ್ಕೆಯಾದವರು ಆಗ ಸೋಲಿಲ್ಲದ ಸರದಾರನೆಂಬ ಬಿರುದು ಪಡೆದು ನಿರಂತರವಾಗಿ ಮೂರು ಬಾರಿ ಗೆದ್ದಿದ್ದರಿಂದ ಹ್ಯಾಟ್ರಿಕ್ ಸಾಧನೆ ಇವರಿಗೆ ದೊರಕಿತು.'[೬] ಇವರ ಜನಪ್ರೀಯತೆ ರಾಜಕೀಯ ಉತ್ಸಾಹವನ್ನು ನೋಡಿದಂತಹ ೧೯೯೨ರಲ್ಲಿ ವೀರಪ್ಪ ಮೋಯಿಲಿಯವರು ತಮ್ಮ ಸಚಿವ ಸಂಪುಟದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಚಿವರನ್ನಾಗಿ ಮಾಡಿದರು. ಅವರ

ಅವಧಿಯಲ್ಲಿ ಒಂದು ದಿನ ಸುರಪುರದ ಪಂಚಮುಖಿ ಹನುಮಾನ ದೇವಸ್ಥಾನದ ಹತ್ತಿರ ಕೊಳವೆ ಬಾವಿ ಹಾಕಿಸುವ ಸಂದರ್ಭದಲ್ಲಿ ನೀರು ಬೀಳುವವರೆಗೆ ಅಲ್ಲಿಯೇ ಇದ್ದು, ನೀರು ಬಿದ್ದ ನಂತರ ಮುಂದಿನ ಕೆಲಸಕ್ಕೆ ಅಣಿಯಾದರು. ಇದು ಇವರ ಕರ್ತವ್ಯ ನಿಷ್ಠೆ ಮತ್ತು ಜನಸೇವೆಯನ್ನು ತೋರಿಸುತ್ತದೆ.

ದುರಾದೃಷ್ಟವಶಾತ್ ೧೯೯೪ರ ಚುನಾವಣೆಯಲ್ಲಿ ರಾಜಾ ವೆಂಕಟಪ್ಪ ನಾಯಕರ ವಿರುದ್ಧ ಸ್ಪರ್ಧಿಸಿ ಅಲ್ಪ ಮತಗಳಿಂದ ಸೋತರು. ಆದರೂ ಇವರ ಜನಪ್ರೀಯತೆ ಕಡಿಮೆಯಾಗಿರಲಿಲ್ಲ. ೨೦೦೪ರಲ್ಲಿ ಜಾತ್ಯಾತೀತ ಜನತಾದಳದಿಂದ ರಾಯಚೂರು ಲೋಕಸಭೆ ಅಭ್ಯರ್ಥಿಯಾಗಿ ಸ್ಪರ್ಧಿಸಿ ಎ. ವೆಂಕಟೇಶ ನಾಯಕರ ವಿರುದ್ಧ ಕೇವಲ ೫೦೦ ಮತಗಳಿಂದ ಪರಾಭವಗೊಂಡರು. ಈ ಸೋಲು ಇವರಿಗೆ ಮೋಸದ ಸೋಲು ಎಂದು ಹೇಳಿದರೆ ತಪ್ಪಾಗಲಾರದು. ಅಂದರೆ ಇವರು ಈ ಚುನಾವಣೆಯಲ್ಲಿ ಸೋತು ಗೆದ್ದಂತೆ ಎಂದು ಹೇಳಬಹುದು. ಈಗಲೂ ಕೂಡ ಜನರು ಇವರನ್ನು ಪ್ರೀತಿಯಿಂದ ಮಾಜಿಸಾಬ ಎಂದು ಉಚ್ಚರಿಸುತ್ತಾರೆ. ಇವರು ಸೋಲನ್ನು ಗೆಲುವಾಗಿ ಸ್ವೀಕರಿಸಿಕೊಂಡು ನಾಡಿನ ಸಾಂಸ್ಕೃತಿಕ ಚಟುವಟಿಕೆಗಳನ್ನು ಮಾಡುತ್ತಿದ್ದಾರೆ. ಇವರ ನೇತೃತ್ವದಲ್ಲಿ ಇಂದಿಗೂ ನಾಡಹಬ್ಬ ವಿಜೃಂಭಣೆಯಿಂದ ನಡೆಯುತ್ತದೆ. ಸದಾಚಾರ ಸಂಪನ್ನ ಸದ್ಗುಣ ವ್ಯಕ್ತಿಯಾದ ಇವರು ಸರಳ ಜೀವಿಗಳು. ಬಡವ ಬಲ್ಲಿದರೆನ್ನದೇ ಎಲ್ಲರನ್ನೂ ಸಮಾನವಾಗಿ ಕಾಣುತ್ತಾರೆ. ಮಹಾನ್ ದೈವ ಭಕ್ತರು ಕೂಡಾ ಹಿರಿಯರನ್ನು ತುಂಬಾ ಗೌರವದಿಂದ ಕಾಣುವ ಇವರು ಊರಿನ ಹಿರಿಯರ ಪ್ರೀತಿಗೆ ಪಾತ್ರರಾಗಿದ್ದಾರೆ. ಇಂದಿನ ಓಟ್ ಬ್ಯಾಂಕ್ ದುಡ್ಡಿನ ರಾಜಕಾರಣ ಇವರನ್ನು ರಾಜಕೀಯದಲ್ಲಿ ಧುಮುಕದಂತೆ ಮಾಡದೆ ಶಿಕ್ಷಣ ಪ್ರೇಮಿಯಾದ ಇವರು ತಮ್ಮ ತಾಯಿಯ ಹೆಸರಿನಲ್ಲಿ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ, ರಾಣಿ ಜಾನಕಿದೇವಿ ಪ್ರಾಥಮಿಕ ಹಾಗೂ ಪ್ರೌಢಶಾಲೆಯನ್ನು ಹೊಂದಿದ್ದಾರೆ. ಈ ಶಾಲೆ ಇಂದು ಜನಪ್ರೀಯ ಶಾಲೆಯಾಗಿ ಹೊರಹೊಮ್ಮಿದೆ. ಸುರಪುರದ ಹೆಚ್ಚಿನ ಮಕ್ಕಳು ಇದೇ ಶಾಲೆಯಲ್ಲಿಯೇ ಓದುತ್ತಿದ್ದಾರೆ. ಈಗ ರಾಜಾ ಮದನಗೋಪಾಲ ನಾಯಕರು ರಾಜಕೀಯದಲ್ಲಿ ಏಳುಬೀಳುಗಳನ್ನು ಕಾಣುತ್ತಾ ಸೋಲು ಗೆಲವುಗಳನ್ನು ಸಮಾನವಾಗಿ ಸ್ವೀಕರಿಸುತ್ತಾ ಮನ್ನಡೆದಿದ್ದಾರೆ.

**ಇವರ ಕಾಲಾವಧಿಯಲ್ಲಾದ ಅಭಿವೃದ್ಧಿ ಕಾರ್ಯಗಳು:**

• 'ಸುರಪುರ ಪಟ್ಟಣಕ್ಕೆ ಮೊದಲ ಬಾರಿಗೆ ೩೩ ಕೋಟಿ ರೂಪಾಯಿ ಅನುದಾನವನ್ನು ಬಿಡುಗಡೆ ಮಾಡಿಸಿದ್ದರು.

• ಇವರು ಸಚಿವರಾಗಿದ್ದಾಗ ರೈತರಿಗೆ ೨ ಕೃಷಿ ಮಾರುಕಟ್ಟೆಯನ್ನು ಸ್ಥಾಪನೆ ಮಾಡಿಸಿದರು. ಇದು ಇವರ ದೊಡ್ಡ ಸಾಧನೆಯಲ್ಲಿ ಒಂದಾಗಿದೆ.'[೬]

•೫೦ ಹಾಸಿಗೆಯುಳ್ಳ ಸರ್ಕಾರಿ ಆಸ್ಪತ್ರೆಗೆ ಸೌಲಭ್ಯವನ್ನು ಮಾಡಿಸಿದ್ದಾರೆ.

•ಸುರಪುರ ನಗರದಲ್ಲಿ ಒಳಚರಂಡಿ ಸೌಲಭ್ಯ ಕಲ್ಪಿಸಿದ್ದಾರೆ.

•ಸುರಪುರ ನಗರಕ್ಕೆ ೫ ರಿಂದ ೬ ಕೋಟಿ ರೂಪಾಯಿ ವೆಚ್ಚದಲ್ಲಿ ನೀರಿನ ಸೌಲಭ್ಯವನ್ನು ಒದಗಿಸಿದ್ದರು.

•ಸರಕಾರಿ ಕಾಲೇಜುಗಳ ಸ್ಥಾಪನೆ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಿಗೆ ಶೈಕ್ಷಣಿಕ ಸೌಲಭ್ಯವನ್ನು ಕಲ್ಪಿಸಿದ್ದಾರೆ.

•ಸುರಪುರ ತಾಲೂಕಿನ ಗ್ರಾಮಗಳಿಗೆ ಆಶ್ರಯ ಮನೆ ಯೋಜನೆ ಅಡಿಯಲ್ಲಿ ೯ ಸಾವಿರ ಮನೆಗಳನ್ನು ಕಟ್ಟಿಸಿಕೊಟ್ಟಿದ್ದಾರೆ.' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

ಇದು ಇವರ ಸರಕಾರದ ಆಡಳಿತ ಅವಧಿಯಲ್ಲಿ ಆದಂತಹ ಅಭಿವೃದ್ಧಿ ಕಾರ್ಯಗಳು. ಇಂದು ಕೃಷಿ ಮಾರುಕಟ್ಟೆ ರಾಜ್ಯದಲ್ಲಿ ೨ನೇ ಸ್ಥಾನ ಬರುತ್ತಿದೆ. ಅಂದರೆ ವಾರ್ಷಿಕ ೪ ರಿಂದ ೫ ಕೋಟಿ ರೂಪಾಯಿ ಲಾಭ ಈ ಕೃಷಿ ಮಾರುಕಟ್ಟೆಗೆ ಇದೆ.

**ರಾಜಾ ವೆಂಕಟಪ್ಪ ನಾಯಕರು (ಶಾಸಕರು ಸುರಪುರ)**

'ಇವರು ರಾಜಾ ಕುಮಾರನಾಯಕ್ ಮಾಜಿ ಶಾಸಕರ ಹಿರಿಯ ಪುತ್ರರಾಗಿದ್ದು ೨೩-೧೨-೧೯೫೭ ರಲ್ಲಿ ಸುರಪುರದ ತಮ್ಮ ಸ್ವಗೃಹದಲ್ಲಿ ಜನಿಸಿದರು. ೧ ರಿಂದ ೩ನೇ ತರಗತಿಯವರೆಗೆ ಆನಂದವಿದ್ಯಾಲಯ ಪ್ರೌಢಶಾಲೆಯಲ್ಲಿ ಕಲಿತು, ೪ ರಿಂದ ೧೦ನೇ ತರಗತಿವರೆಗೆ ಹೈದ್ರಾಬಾದಿನ ಜೆಪೋಡಿನ್ಸ್ ಶಾಲೆಯಲ್ಲಿ ಕಲಿತರು. ತಮ್ಮ ಬಿ.ಎಸ್.ಸಿ. ಪದವಿಯನ್ನು ಕಲಬುರಗಿ ಜಿಲ್ಲೆಯ ನೂತನ ವಿದ್ಯಾಲಯದಲ್ಲಿ ಮುಗಿಸಿದರು. ನಂತರ ಎಂ.ಬಿ.ಬಿ.ಎಸ್. ವೈದ್ಯಕೀಯ ಶಿಕ್ಷಣವನ್ನು ಇದೇ ಜಿಲ್ಲೆಯ ಎಂ.ಆರ್. ಮೆಡಿಕಲ್ ಕಾಲೇಜಿನಲ್ಲಿ ಮುಗಿಸಿದರು. ಆದ್ದರಿಂದ ಇವರಿಗೆ ಡಾ. ರಾಜಾ ವೆಂಕಟಪ್ಪ ನಾಯಕ ಎಂದು ಕರೆಯಲು ಜನರು ಪ್ರಾರಂಭ ಮಾಡಿದರು. ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ ಮರಳಿ ಸುರಪುರಕ್ಕೆ ಬಂದು ಕುಮಾರನಾಯಕರ ರಾಜಕೀಯ ಗರಡಿಯಲ್ಲಿ ಪಳಗಿದರು. ೩೦ನೇ ವಯಸ್ಸಿನಲ್ಲಿ ಪೇಠ ಅಮ್ಮಾಪುರದ ಮಂಡಲ ಪಂಚಾಯತಿ ಅಧ್ಯಕ್ಷರಾಗಿ ಆಯ್ಕೆಯಾಗಿ ಸಂಪೂರ್ಣ ರಾಜಕೀಯಕ್ಕೆ ಧುಮುಕಿದರು.

೧೯೯೪ರಲ್ಲಿ ಅಂದಿನ ಮುಖ್ಯಮಂತ್ರಿ ಬಂಗಾರಪ್ಪನವರ ಹೊಸ ಪಕ್ಷ ಕೆ.ಸಿ.ಪಿ.ಯಿಂದ ಅಭ್ಯರ್ಥಿಯಾಗಿ ರಾಜಾ ಮದನಗೋಪಾಲ ನಾಯಕರ ವಿರುದ್ಧ ಸ್ಪರ್ಧಿಸಿ ಶಾಸಕರಾಗಿ ಆಯ್ಕೆಯಾದರು. ಇದು ಇವರ ಮೊದಲ ಗೆಲುವಾಗಿತ್ತು. ಈ ಗೆಲುವನ್ನು ರಾಜಕೀಯ ಮೆಟ್ಟಿಲು ಮಾಡಿಕೊಂಡ ಇವರು ಉತ್ತಮ ಆಡಳಿತ ನೀಡಿ ಇಡೀ ತಾಲೂಕಾವನ್ನು ತಮ್ಮ

ಹತೋಟಿಯಲ್ಲಿಟ್ಟುಕೊಂಡರು. ಇದೇ ಜನಪ್ರೀಯತೆಯಲ್ಲಿ ಮತ್ತೊಮ್ಮೆ ೧೯೯೯ರಲ್ಲಿ ಸಾರ್ವತ್ರಿಕ ಚುನಾವಣೆ ಬಂದಾಗ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ೨೦ ಸಾವಿರ ಮತಗಳಿಂದ ಜಯ ಗಳಿಸಿದರು. ಇದು ಇವರ ಅತಿ ಹೆಚ್ಚು ಮತಗಳ ಗೆಲುವಾಗಿತ್ತು. ನೊಡುವುದಕ್ಕೆ ಗಂಭೀರದಿಂದ ಕಾಣುವ ಇವರು ಕೋಮಲ ಒಳ್ಳೆಯ ಹೃದಯವಂತರು. ಸುರಪುರ ತಾಲೂಕಿನ ಜನರ ಕಷ್ಟ ನಷ್ಟಗಳಿಗೆ ಸ್ಪಂದಿಸುತ್ತಾರೆ. ಜನರೂ ಕೂಡಾ ಅಷ್ಟೇ ಗೌರವ ಭಾವನೆಯಿಂದ ಕಾಣುತ್ತಿದ್ದಾರೆ. ನಂತರ ೨೦೦೪ನೇ ಇಸ್ವಿಯಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕನ್ನಡನಾಡು ಪಕ್ಷದ ನರಸಿಂಹ ನಾಯಕರ ವಿರುದ್ಧ ಸ್ಪರ್ಧಿಸಿ ಕೇವಲ ೧೫೦೦ ಮತಗಳಿಂದ ಪರಾಭವಗೊಂಡರು. ಜನರ ಬದಲಾವಣೆಗೆ ಓಗೊಟ್ಟು ಇವರು ಸೋಲನ್ನು ಸಂತೋಷದಿಂದ ಸ್ವೀಕರಿಸಿದರು. ಆದರೂ ಇವರ ಜನಪ್ರೀಯತೆ ಕಡಿಮೆಯಾಗಲಿಲ್ಲ. ನಂತರ ೨೦೦೯ರಲ್ಲಿ ನಡೆದ ಲೋಕಸಭೆ ಚುನಾವಣೆಯಲ್ಲಿ ರಾಯಚೂರು ಲೋಕಸಭಾ ಕ್ಷೇತ್ರಕ್ಕೆ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿ ಓಟು ಮತ್ತು ನೋಟಿನ ರಾಜಕೀಯದಲ್ಲಿ ಸಣ್ಣ ಫಕೀರಪ್ಪ ಅವರ ವಿರುದ್ಧ ಸೋತರು. ನಂತರ ೨೦೧೩ರ ವಿಧಾನಸಭೆ ಚುನಾವಣೆಯಲ್ಲಿ ನರಸಿಂಹನಾಯಕರ ವಿರುಧ್ಧ ಗೆಲುವನ್ನು ಸಾಧಿಸಿದರು. ಗೆಲುವನ್ನು ಅಷ್ಟೇ ಸುಲಭವಾಗಿ ಸ್ವೀಕರಿಸಿದರು. ಸೋಲನ್ನು ಕೂಡಾ ಅಷ್ಟೇ ಪ್ರಮಾಣದಲ್ಲಿ ಸ್ವೀಕರಿಸಿದ್ದಾರೆ. ಪ್ರಸ್ತುತ ಶಾಸಕರಾಗಿ ಸುರಪುರ ತಾಲೂಕು ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ.

**ಇವರ ಕಾಲಾವಧಿಯಲ್ಲಿ ನಡೆದ ಅಭಿವೃದ್ಧಿ ಕಾರ್ಯಗಳು:**

- ಸುರಪುರ ಪಟ್ಟಣದ ಪ್ರಮುಖ ಬೀದಿಗಳಿಗೆ ಸಿಮೆಂಟ್ ರಸ್ತೆ ನಿರ್ಮಾಣ ಮಾಡಿಸಿದ್ದಾರೆ.
- ಪುರಸಭೆ ಮಳಿಗೆಗಳ ನಿರ್ಮಾಣ
- ತಾಲೂಕ ಪಂಚಾಯತ ಕಟ್ಟಡಗಳ ನಿರ್ಮಾಣ
- ಚಿಕ್ಕನಳ್ಳಿ ಬೆಂಚಗಡ್ಡಿ ಸೇತುವೆ ನಿರ್ಮಾಣ
- ಸುರಪುರ ತಾಲೂಕು ಗ್ರಾಮದ ಬಡಜನರಿಗೆ ೧೦,೦೦೦ ಮನೆಗಳನ್ನು ಸರ್ಕಾರದ ವತಿಯಿಂದ ಕಲ್ಪಿಸಿದ್ದಾರೆ
- ಅನೇಕ ಗ್ರಾಮಗಳಿಗೆ ಬ್ರಿಜ್ ಬ್ಯಾರೇಜ್ ನಿರ್ಮಾಣ
- ಪ್ರಸ್ತುತ ಸುರಪುರದ ಹೈಟೆಕ್ ಬಸ್ ನಿಲ್ದಾಣ ಕಾಮಗಾರಿ ಚಾಲನೆಯಲ್ಲಿದೆ.
- ಟೈಲರ್ ಮಂಜಿಲ್ ಹತ್ತಿರ ಗಾರ್ಡನ್ ನಿರ್ಮಾಣ ಕಾಮಗಾರಿ ಚಾಲನೆಯಲ್ಲಿದೆ.
- ಹೊಸ ಹೈಟೆಕ್ ಬಸ್ ನಿಲ್ದಾಣ ನಿರ್ಮಿಸಿದ್ದಾರೆ.
- ಸರಕಾರಿ ಪದವಿ ಕಾಲೇಜು ಹಿಂದುಗಡೆ ನಾಲ್ಕು ಕೋಟಿ ರೂಪಾಯಿ ವೆಚ್ಚದಲ್ಲಿ

ನಿರ್ಮಿತಿ ಕೇಂದ್ರದ ವತಿಯಿಂದ ಕ್ರೀಡಾಂಗಣ ನಿರ್ಮಾಣವಾಗುತ್ತಿದೆ.' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

ಹೀಗೆ ಇವರು ಶಾಸಕರಾಗಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದಾರೆ. ಈ ಕೆಲಸ ಕಾರ್ಯಗಳೇ ಇಂದು ಇವರ ಜನಪ್ರೀಯತೆಗೆ ಕಾರಣಗಳಾಗಿವೆ ಎಂದು ಹೇಳಬಹುದು.

**ಶ್ರೀ ನರಸಿಂಹ ನಾಯಕ (ರಾಜುಗೌಡ) ಮಾಜಿ ಸಣ್ಣ ಕೈಗಾರಿಕೆ ಸಚಿವರು:**

'ಇವರು ಜನಪ್ರೀಯ ವ್ಯಕ್ತಿಯಾಗಿದ್ದು ಸಗರ ನಾಡಿನಲ್ಲಿ ಜನಾನುರಾಗಿಯಾಗಿದ್ದಾರೆ. ಚಿಕ್ಕವರಿಂದ ಹಿಡಿದು ವೃದ್ಧರವರೆಗೆ ನರಸಿಂಹ ನಾಯಕರನ್ನು ಪ್ರೀತಿಯಿಂದ ರಾಜುಗೌಡ ಎಂದು ಸಂಭೋಧಿಸುತ್ತಾರೆ. ಇವರ ತಂದೆ ಶ್ರೀ ಶಂಭನಗೌಡ ಆಗಿದ್ದು ಹುಟ್ಟೂರು ಕೊಡೇಕಲ್ ಗ್ರಾಮವಾಗಿದೆ. ಇವರು ೨೭-೧೨-೧೯೭೮ರಲ್ಲಿ ಸುರಪುರದಲ್ಲಿ ಜನಿಸಿದ್ದು, ೧ ರಿಂದ ೩ನೇ ಪ್ರಾಥಮಿಕ ಶಿಕ್ಷಣವನ್ನು ಬಾಗಲಕೋಟೆಯಲ್ಲಿ ಕಲೆತಿದ್ದು ೪ ರಿಂದ ೮ನೇ ತರಗತಿಯವರೆಗೆ ರಾಯಚೂರಿನಲ್ಲಿ ಕಲಿತಿದ್ದಾರೆ. ಪ್ರೌಢ ಶಿಕ್ಷಣವನ್ನು ಅಂದರೆ ೮ನೇ ತರಗತಿಯಿಂದ ೧೦ನೇ ತರಗತಿಯವರೆಗೆ ಬಳ್ಳಾರಿಯಲ್ಲಿ ಕಲಿತು ಪಿ.ಯು.ಸಿ. ಕಾಲೇಜು ವಿದ್ಯಾಭ್ಯಾಸವನ್ನು ಕಲಬುರಗಿಯ ವಿಜಯ ವಿದ್ಯಾಲಯದಲ್ಲಿ ಮುಗಿಸಿದ್ದಾರೆ. ಕೇವಲ ಪಿ.ಯು.ಸಿ.ವರೆಗೆ ಕಲಿತಿರುವ ಇವರು ಹೆಚ್ಚಿನ ವಿದ್ಯಾಭ್ಯಾಸವನ್ನು ಕಾರಣಾಂತರಗಳಿಂದ ಮೊಟಕುಗೊಳಿಸಿದರು. ನಂತರ ಕೃಷಿಯಲ್ಲಿ ಆಸಕ್ತಿ ಮೂಡಿಸಿಕೊಂಡಿರುವ ಇವರು ಮರಳಿ ತಮ್ಮ ಸ್ವಗ್ರಾಮ ಕೊಡೇಕಲ್ಲಿಗೆ ಬಂದು ತಮ್ಮ ಕೃಷಿ ಭೂಮಿಯನ್ನು ಸಾಗುವಳಿ ಮಾಡಲು ಪ್ರಾರಂಭಿಸಿದರು. ಇದರ ಜೊತೆಗೆ ಕ್ರಿಕೇಟ್ ಆಟದ ಪ್ರೀಯರಾದ ಇವರು ಕೊಡೇಕಲ್‌ನಲ್ಲಿ ಯುವಕರ ದಂಡನ್ನು ಕಟ್ಟಿಕೊಂಡು ತಾಲೂಕ ಮಟ್ಟದ ಜಿಲ್ಲಾ ಮಟ್ಟದ ಕ್ರಿಕೇಟ್ ಆಟವನ್ನು ಸ್ಪರ್ಧೆಯನ್ನು ನಡೆಸುತ್ತಿದ್ದರು. ಹೆಚ್ಚಿನ ಗೆಳೆಯರ ಬಳಗವನ್ನು ಹೊಂದಿದ್ದ ಇವರು ವಿವಿಧ ಕ್ರೀಡೆಯಲ್ಲಿ ಭಾಗವಹಿಸುತ್ತಿದ್ದರು. ಕ್ರೀಡೆಯೇ ಇವರ ಸಂಘಟನಾ ಚಾತುರ್ಯಕ್ಕೆ ಮತ್ತು ಜನಪ್ರೀಯತೆಗೆ ಕಾರಣವಾಯಿತು.

ಇವರ ನಡತೆ ಗುಣ ಸ್ನೇಹಮಯ ವ್ಯಕ್ತಿತ್ವವನ್ನು ಕಂಡ ಸುತ್ತ ಮುತ್ತಲಿನ ಗ್ರಾಮದ ಜನರು ೨೦೦೦ನೇ ಇಸ್ವಿಯಲ್ಲಿ ಜಿಲ್ಲಾ ಪಂಚಾಯತ ಚುನಾವಣೆಯಲ್ಲಿ ಅಂದಿನ ಶಾಸಕರಾಗಿದ್ದ ರಾಜಾ ವೆಂಕಟಪ್ಪ ನಾಯಕರ ಬಳಿ ಹೋಗಿ ರಾಜುಗೌಡನೇ ನಮ್ಮ ಕ್ಷೇತ್ರದ ಅಭ್ಯರ್ಥಿಯಾಗಬೇಕೆಂದು ಕೇಳಿಕೊಂಡು ಸರ್ವಾನುಮತದಿಂದ ಕೊಡೇಕಲ್ ಕ್ಷೇತ್ರಕ್ಕೆ ಕಾಂಗ್ರೆಸ್ ಅಭ್ಯರ್ಥಿಯನ್ನಾಗಿ ೫೨೨೫ ಮತಗಳಿಂದ ಆರಿಸಿ ತಂದರು. ಕೇವಲ ೨೧ನೇ ವಯಸ್ಸಿನಲ್ಲಿ ಗುಲ್ಬರ್ಗಾ ಜಿಲ್ಲೆಯ ಜಿಲ್ಲಾ ಪಂಚಾಯತಿ ಸದಸ್ಯರಾದ ಇವರು ತಮ್ಮ ಅಧಿಕಾರ ಅವಧಿಯಲ್ಲಿ ಬಡ ಜನರಿಗೆ ದೀನ ದಲಿತರಿಗೆ ಸಾಕಷ್ಟು ಸಹಾಯವನ್ನು ಮಾಡಿದರು. ತಮ್ಮ ಅಧಿಕಾರ

ವ್ಯಾಪ್ತಿಯೊಳಗೆ ಬರುವ ಸರಕಾರದ ಅನೇಕ ಯೋಜನೆಗಳನ್ನು ತಮ್ಮ ಕ್ಷೇತ್ರದ ಜನರಿಗೆ ತಲುಪಿಸಿದರು. ಮತ್ತು ಮಾನವೀಯತೆ ದೃಷ್ಟಿಯಿಂದ ನ್ಯಾಯ ಕೇಳಿಕೊಂಡು ಬಂದ ವಿವಿಧ ಗ್ರಾಮದ ಜನರಿಗೆ ಮರಳಿ ಗ್ರಾಮಗಳಿಗೆ ತಲುಪಿಸುವ ಸಲುವಾಗಿ ತಮ್ಮ ಸ್ವಂತ ವಾಹನವನ್ನು ಬಿಡುತ್ತಿದ್ದರು. ಬಡವರಿಗೆ ತೀರಾ ಹತ್ತಿರವಾದ ಇವರು ಬಹು ಬೇಗನೇ ಜನರ ಹೃದಯದಲ್ಲಿ ಮನೆ ಮಾಡಿದರು. ಇವರಿಗೆ ಇದೇ ಮುಂದೆ ವರವಾಗಿ ಪರಿಣಮಿಸಿತು. ಇವರಿಗೆ ಜಿಲ್ಲಾ ಪಂಚಾಯತಿಯ ಸಿ.ಎಸ್. ಅಧಿಕಾರಿಯಾದ ಮಹೇಶ್ವರಾಂ ಹಾಗೂ ಜಿಲ್ಲಾಧಿಕಾರಿಗಳಾದ ಲಕ್ಷ್ಮೀನಾರಾಯಣ ಅವರು ಇವರ ಏಳಿಗೆಗೆ ಪ್ರೋತ್ಸಾಹವನ್ನು ನೀಡಿದರು. ಈ ಇಬ್ಬರು ವ್ಯಕ್ತಿಗಳನ್ನು ಇಂದು ನೆನಪಿಸಿಕೊಳ್ಳುತ್ತಾರೆ. ಸುರಪುರದಲ್ಲಿ ರಾಜಕೀಯ ಬದಲಾವಣೆಯಾಗಿ ಅನೇಕ ಕಾರಣಗಳಿಂದ ರಾಜಾ ವೆಂಕಟಪ್ಪನಾಯಕರಿಂದ ದೂರಾಗಿ ಕಾಲಜ್ಞಾನಿ ಕೊಡೇಕಲ್ ಬಸವಣ್ಣನ ಕೃಪಾಶೀರ್ವಾದದಿಂದ ತಮ್ಮ ಪಕ್ಷದ ಶಾಸಕರಾಗಿದ್ದ ರಾಜಾ ವೆಂಕಟಪ್ಪ ನಾಯಕ ವಿರುದ್ಧ ಕನ್ನಡನಾಡು ಪಕ್ಷದಿಂದ ಸ್ಪರ್ಧಿಸಿ ೨೦೦೪ರಲ್ಲಿ ೪೪೩೦೦ರ ಮತಗಳನ್ನು ಪಡೆದು ೨೭೮೫ ಮತಗಳ ಅಂತರದಿಂದ ಗೆಲುವನ್ನು ಸಾಧಿಸಿದರು. ಆಗ ಇವರ ವಯಸ್ಸು ಕೇವಲ ೨೬ ವರ್ಷ. ಕರ್ನಾಟಕ ರಾಜ್ಯದಲ್ಲಿಯೇ ಅತಿ ಚಿಕ್ಕ ವಯಸ್ಸಿನ ಶಾಸಕರಾಗಿ ಜನಪ್ರಿಯತೆಯನ್ನು ಪಡೆದರು. ಆಗ ಕರ್ನಾಟಕದಲ್ಲಿ ಕನ್ನಡನಾಡು ಪಕ್ಷದ ಏಕೈಕ ಶಾಸಕರೆಂದರೆ ಇವರೊಬ್ಬರೇ. ಆಗ ಇವರು ಎಲ್ಲರ ಗಮನವನ್ನು ಸೆಳೆದರು. ಈ ಅವಧಿಯಲ್ಲಿ ಸಾಕಷ್ಟು ಅನುದಾನವನ್ನು ಬಿಡುಗಡೆ ಮಾಡಿಸಿ ಸುರಪುರ ತಾಲೂಕು ಅಭಿವೃದ್ಧಿಗಾಗಿ ಶ್ರಮಿಸಿದರು. ನಂತರ ೨೦೦೮ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಮತ್ತೇ ವೆಂಕಟಪ್ಪ ನಾಯಕರ ವಿರುದ್ಧ ಬಿ.ಜೆ.ಪಿ. ಪಕ್ಷದಿಂದ ಸ್ಪರ್ಧಿಸಿ ೬೨ ಸಾವಿರ ಮತಗಳನ್ನು ಪಡೆದು ೪೫೮೧ ಮತಗಳ ಅಂತರದಿಂದ ದಿಗ್ವಿಜಯವನ್ನು ಸಾಧಿಸಿ ೨ನೇ ಬಾರಿಗೆ ಶಾಸಕರಾಗಿ ಆಯ್ಕೆಯಾದರು. ಎರಡನೇ ಬಾರಿ ಶಾಸಕರಾಗಿ ಆಯ್ಕೆಯಾದ ನಂತರ ಛಲ ಬಿಡದ ತ್ರಿವಿಕ್ರಮನಂತೆ ರಾಜ್ಯ ಸರ್ಕಾರದಿಂದ ಸುರಪುರ ತಾಲೂಕಿಗೆ ಕೋಟ್ಯಾಂತರ ರೂಪಾಯಿ ಹಣವನ್ನು ಬಿಡುಗಡೆ ಮಾಡಿ ಅನೇಕ ಅಭಿವೃದ್ಧಿಯ ಕಾರ್ಯಗಳನ್ನು ಮಾಡಲು ಪ್ರಾರಂಭ ಮಾಡಿದರು. ೨ನೇ ಬಾರಿ ಶಾಸಕರಾಗಿ ಆಯ್ಕೆಯಾಗಿ ಹಿರಿಯ ನಾಯಕರುಗಳ ಗಮನವನ್ನು ಸೆಳೆದು ಬಿ.ಜೆ.ಪಿ. ಸರ್ಕಾರದಲ್ಲಿ ಸಣ್ಣ ಕೈಗಾರಿಕೆ ಸಚಿವರಾಗಿ ಪ್ರಮಾಣ ವಚನ ಸ್ವೀಕಾರ ಮಾಡಿ ಹೆಚ್ಚಿನ ಜವಾಬ್ದಾರಿಯನ್ನು ತೆಗೆದುಕೊಂಡರು. ತಮ್ಮ ಖಾತೆಗೆ ಸಂಬಂಧಪಟ್ಟ ಕಾರ್ಯ ಚಟುವಟಿಕೆಗಳನ್ನು ಮಾಡಲು ಪ್ರಾರಂಭ ಮಾಡಿದರು. ಇದರ ಜೊತೆಗೆ ಯಾದಗಿರಿ ಜಿಲ್ಲೆಯ ಉಸ್ತುವಾರಿ ಸಚಿವರಾಗಿ ಜಿಲ್ಲೆಯ ಅಭಿವೃದ್ಧಿ ಕೆಲಸಗಳನ್ನು ಮಾಡಿದರು. ಸಚಿವರಾದರೂ ಯಾವುದೇ ಅಧಿಕಾರಿಗಳಿಗೆ ನೋವಾಗದಂತೆ ನಡೆದುಕೊಂಡರು. ಅಧಿಕಾರಿಗಳ ಜೊತೆ ಸರಳವಾಗಿ ಬೆರೆಯುತ್ತಿದ್ದರು. ಬಡವರಿಗೆ, ಬಡ

ಯುವಕರಿಗೆ, ಬಡ ವಿದ್ಯಾರ್ಥಿಗಳಿಗೆ ವೈಯಕ್ತಿಕವಾಗಿ ಸಾಕಷ್ಟು ಹಣದ ಸಹಾಯವನ್ನು ಮಾಡಿದ್ದಾರೆ. ಇವರಲ್ಲಿ ಕಾಂಗ್ರೆಸ್ಸು, ಬಿ.ಜೆ.ಪಿ. ಜೆ.ಡಿ.ಎಸ್. ಎಂಬ ಪಕ್ಷದ ಬೇಧಭಾವವನ್ನು ಮಾಡಿಲ್ಲ. ತಮ್ಮ ವಿರೋಧಿ ಪಕ್ಷದ ಕಾರ್ಯಕರ್ತರು ತಮ್ಮಲ್ಲಿ ಬಂದರೆ ಒಳ್ಳೆಯ ಗೌರವಕೊಟ್ಟು ಉಪಚರಿಸಿ ಅವರ ಸಮಸ್ಯೆಗಳಿಗೆ ಸ್ಪಂದಿಸುತ್ತಾರೆ. ಹಾಗೆಯೇ ಯಾವುದೇ ತರಹದ ಚಿಕ್ಕಪುಟ್ಟ ಅಹಿತಕರ ಘಟನೆಗಳನ್ನು, ವಿಷಯಗಳನ್ನು, ಮಾತುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳದೇ ಮುನ್ನಡೆಯುತ್ತಾರೆ. ಈ ಗುಣ ಮತ್ತು ನಡತೆ ಅವರ ರಾಜಕೀಯ ಯಶಸ್ಸಿಗೆ ಕಾರಣವಾಗಿದೆ. ತಾವು ಬೆಳೆಯುವುದರ ಜೊತೆಗೆ ತಮ್ಮ ಬೆಂಬಲಿಗರು, ಸ್ನೇಹಿತರು, ಆತ್ಮೀಯರು ಬೆಳೆಯಬೇಕೆಂದು ತಮ್ಮವರಿಗೆ ರಾಜಕೀಯದಲ್ಲಿ ಉನ್ನತ ಸ್ಥಾನಮಾನಗಳನ್ನು ಕೊಡಿಸಿದ್ದಾರೆ. ಇದು ಅವರಲ್ಲಿ ಇರುವ ದೊಡ್ಡ ಗುಣವೆಂದು ಹೇಳಬಹುದು. ಇಂತಹ ವ್ಯಕ್ತಿತ್ವವುಳ್ಳ ವ್ಯಕ್ತಿ ಸುರಪುರ ತಾಲೂಕು ಕ್ಷೇತ್ರದ ಜನರಿಗೆ ಸಿಕ್ಕಿದ್ದು ಅಪರೂಪವೆಂದು ಹೇಳಬಹುದು. ಅದೃಷ್ಟವಶಾತ್ ೨೦೧೩ರ ವಿಧಾನಸಭೆ ಚುನಾವಣೆಯಲ್ಲಿ ರಾಜಾ ವೆಂಕಟಪ್ಪ ನಾಯಕರ ವಿರುದ್ಧ ಪರಾಭವಗೊಂಡರು.

<u>ಜಿಲ್ಲಾ ಪಂಚಾಯತ ಸದಸ್ಯರಾಗಿ ಮಾಡಿದ ಅಭಿವೃದ್ಧಿ ಕಾರ್ಯಗಳು</u>

•ಕೋಡೇಕಲ್ ಕ್ಷೇತ್ರದ ವ್ಯಾಪ್ತಿಗೆ ಒಳಪಟ್ಟ ಗ್ರಾಮಗಳಿಗೆ ನೀರಾವರಿ ಸೌಲಭ್ಯ

•ಶೈಕ್ಷಣಿಕ ಸೌಲಭ್ಯ

•ರಸ್ತೆ ಮತ್ತು ಕುಡಿಯುವ ನೀರಿನ ಸೌಲಭ್ಯ

**ಇವರು ಶಾಸಕರಾಗಿ ಸಚಿವರಾಗಿ ಮಾಡಿದ ಅಭಿವೃದ್ಧಿ ಕಾರ್ಯಗಳು**

•ಎಲ್ಲಾ ಗ್ರಾಮಗಳಿಗೆ ರಸ್ತೆಯ ಸೌಲಭ್ಯಕ್ಕಾಗಿ ೪೮ ಕೋಟಿ ರೂಪಾಯಿ ಸರಕಾರದಿಂದ ಬಿಡುಗಡೆ ಮಾಡಿಸಿದ್ದಾರೆ.

•೧೮೦ ಕಿ.ಮೀ. ರಸ್ತೆ ಡಾಂಬರೀಕರಣ

•ಸುರಪುರಕ್ಕೆ ಬಸ್ ಡಿಪೋ ವ್ಯವಸ್ಥೆ

•ಅಗ್ನಿಶಾಮಕ ದಳದ ವ್ಯವಸ್ಥೆ

•ಸುರಪುರ ಪಟ್ಟಣಕ್ಕೆ ಕುಡಿಯುವ ನೀರು ಮತ್ತು ಸಿಸಿ ರಸ್ತೆ ನಿರ್ಮಾಣ

•ಡಿಪ್ಲೋಮಾ ಕಾಲೇಜು ಸ್ಥಾಪನೆ

•ಬಿ.ಬಿ.ಎಂ. ಕಾಲೇಜು ಸ್ಥಾಪನೆ

•ಕೊಡೇಕಲ್, ಹುಣಸಗಿ, ನಾರಾಯಣಪುರ, ಕಕ್ಕೇರಿಯಲ್ಲಿ ಪದವಿ ಪೂರ್ವ ಕಾಲೇಜು ಸ್ಥಾಪನೆ

•ಜೋಗುಂಡಬಾವಿ, ಎಣ್ಣೆ ವಡಗೇರಾ, ಬಲಶೆಟ್ಟಿಹಾಳ, ಹುಣಸಗಿ, ಗೆದ್ದಲಮರಿ, ದೇವತ್ಕಲ್, ಬಾಚಿಮಟ್ಟಿ, ಕನ್ನಳ್ಳಿ, ಕಲ್ಲದೇವನಹಳ್ಳಿ, ಸೂಗೂರ ಗ್ರಾಮಗಳಿಗೆ ಪ್ರೌಢಶಿಕ್ಷಣ ವ್ಯವಸ್ಥೆ

•ಬೋನಾಳ ಏತ ನೀರಾವರಿ ಯೋಜನೆಗೆ ಚಾಲನೆ. ಇದರಿಂದ ೧೪ ರಿಂದ ೧೮ ಸಾವಿರ ಎಕರೆ ಪ್ರದೇಶಕ್ಕೆ ನೀರಾವರಿ ಸಿಗುತ್ತದೆ.

•ತಳವಾರಗೇರಾ, ಆಲ್ದಾಳ, ಹಾವಿನಾಳ, ಕವಡಿಮಟ್ಟಿ, ಗುಡಿಹಾಳ, ಶಳ್ಳಗಿ, ಮುಷ್ಠಳ್ಳಿ, ಖಾನಾಪುರ ಎಸ್. ಹೆಚ್., ಚಂದ್ಲಾಪುರ, ಬೇವಿನಹಾಳ, ಸೂಗೂರು, ಹೆಮ್ಮಡಗಿ, ಅಥಣಿ, ಕರ್ನಾಳ, ಕುಪಗಲ್, ಚೌಡೇಶ್ವರಿಹಾಳ ಭಾಗದ ಗ್ರಾಮಗಳಿಗೆ ನೀರಾವರಿ ಸೌಲಭ್ಯ ಸಿಗುತ್ತದೆ.

•ಹುಣಸಗಿಯಲ್ಲಿ ಬಸ್‌ಸ್ಟ್ಯಾಂಡ್ ನಿರ್ಮಾಣ

•ಸುರಪುರದಲ್ಲಿ ಹೈಟೆಕ್ ಬಸ್‌ಸ್ಟ್ಯಾಂಡ್ ನಿರ್ಮಾಣ ಮಾಡುವ ಯೋಜನೆಯಲ್ಲಿದ್ದರು.

**ವೈಯಕ್ತಿಕ ಸಹಾಯ ಸಹಕಾರ**

•೮೦೦ ಬಡ ವ್ಯಕ್ತಿಗಳಿಗೆ ಹೃದಯ ಶಸ್ತ್ರ ಚಿಕಿತ್ಸೆ ಮಾಡಿಸಿದ್ದಾರೆ

•ಸೈನಿಕರಿಗೆ ಧನ ಸಹಾಯ

•ಕನ್ನೆಳ್ಳಿ ಗ್ರಾಮದ ಶಾಲೆಗೆ ಭೂಮಿಯನ್ನು ದಾನ ಮಾಡಿದ್ದಾರೆ

•ಹಲವಾರು ಸಂಘ ಸಂಸ್ಥೆ ಸಂಘಟನೆಗಳ ಕಾರ್ಯ ಚಟುವಟಿಕೆಗಳಿಗೆ ಧನ ಸಹಾಯ

ಈ ರೀತಿಯಾಗಿ ನರಸಿಂಹ ನಾಯಕರು ಶಾಸಕರಾಗಿ ಸಚಿವರಾಗಿ ತಮ್ಮ ಕ್ಷೇತ್ರಕ್ಕೆ ಸಾಕಷ್ಟು ಅಭಿವೃದ್ಧಿ ಕಾರ್ಯಗಳನ್ನು ಮಾಡಿದ್ದಾರೆ.' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

**ರಾಜಾ ಹನುಮಪ್ಪ ನಾಯಕ(ತಾತ)(ಜಿಲ್ಲಾ ಪಂಚಾಯತ ಮಾಜಿ ಅಧ್ಯಕ್ಷರು ಯಾದಗಿರಿ ಜಿಲ್ಲೆ**

'ಇವರು ಬೇಡ ಜನಾಂಗದ ಪ್ರತಿಷ್ಠಿತ ಕುಟುಂಬದಲ್ಲಿ ಹುಟ್ಟಿದ್ದು ತಂದೆ ರಾಜಾ ವಾಸುದೇವ ನಾಯಕ ಅವರ ಮಾರ್ಗದರ್ಶನದಲ್ಲಿ ಬೆಳೆದು ಮುಂದೆ ರಾಜಕೀಯ ಧುರೀಣರಾಗಿರುವುದಕ್ಕೆ ಕಾರಣವಾಯಿತು. ೧೯೭೩ರಲ್ಲಿ ಸುರಪುರದಲ್ಲಿ ಜನಿಸಿ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸುರಪುರದ ಶಂಷಿರಪುರ ಶಾಲೆಯಲ್ಲಿ ಕಲಿತು, ಪ್ರೌಢ ಶಿಕ್ಷಣವನ್ನು ಬಾಲಕರ ಪ್ರೌಢಶಾಲೆಯಲ್ಲಿ ಮುಗಿಸಿದರು. ಮುಂದೆ ಕಾಲೇಜು ಶಿಕ್ಷಣವನ್ನು ಶ್ರೀ ಪ್ರಭು

ಮಹಾವಿದ್ಯಾಲಯದಲ್ಲಿ ಮುಗಿಸಿ ಬಿ.ಎ. ಪದವಿಯನ್ನು ಪಡೆದರು. ಇವರ ಸಂಬಂಧಿ ರಾಜಾ ಮದನಗೋಪಾಲ ನಾಯಕರ ಗರಡಿಯಲ್ಲಿ ಬೆಳೆದು ಇವರ ರಾಜಕೀಯ ಆಗುಹೋಗುಗಳನ್ನು ಕಂಡರು. ಆಗ ಅವರಿಗೆ ರಾಜಕೀಯದಲ್ಲಿ ಆಸಕ್ತಿ ಮೂಡಿಸಿಕೊಂಡರು. ೨೦೦೫-೦೬ರಲ್ಲಿ ಕಲಬುರಗಿ ಜಿಲ್ಲಾ ಪಂಚಾಯತ ಚುನಾವಣೆಯಲ್ಲಿ ನಿಂತು ೫೦೦ ಮತಗಳಿಂದ ಗೆಲುವನ್ನು ಸಾಧಿಸಿ ಮುಂದೆ ಗುಲ್ಬರ್ಗಾ ಜಿಲ್ಲೆಯ ಪಂಚಾಯತಿಯ ಉಪಾಧ್ಯಕ್ಷರಾದರು. ನಂತರ ಯಾದಗಿರಿ ತಾಲೂಕು ಹೊಸ ಜಿಲ್ಲೆಯಾದ ನಂತರ ೨೦೦೯ಯಾದಗಿರಿ ಜಿಲ್ಲೆಯ ಪ್ರಪ್ರಥಮ ಜಿಲ್ಲಾ ಪಂಚಾಯತ ಅಧ್ಯಕ್ಷರಾಗಿ ಆಯ್ಕೆಯಾದರು. ಇದು ಇವರ ಜೀವನದಲ್ಲಿ ಮರೆಯಲಾರದಂತಹ ಘಳಿಗೆ ಎಂದು ಹೇಳಬಹುದು. ರಾಜಕೀಯದಲ್ಲಿ ಏಳು ಬೀಳುಗಳನ್ನು ಕಂಡಿರುವ ಇವರು ಸುರಪುರ ತಾಲೂಕಿನಲ್ಲಿ ಪ್ರಭಾವಶಾಲಿ ವ್ಯಕ್ತಿಯಾಗಿದ್ದಾರೆ. ನರಸಿಂಹನಾಯಕರ (ರಾಜುಗೌಡ) ಆತ್ಮೀಯ ಗೆಳೆಯರಾದ ಇವರು ತಮ್ಮ ಬೆಂಬಲವನ್ನು ಕೊಟ್ಟು ಸಹಕರಿಸುತ್ತಿದ್ದಾರೆ.

**ಅಭಿವೃದ್ಧಿ ಕಾರ್ಯಗಳು:**

೧. ಜಿಲ್ಲೆಯಲ್ಲಿ ಕುಡಿಯುವ ನೀರಿನ ವ್ಯವಸ್ಥೆ

೨. ಗ್ರಾಮಗಳಿಗೆ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆ

೩. ವಯಸ್ಕರ ಶಿಕ್ಷಣಕ್ಕೆ ಒತ್ತು

೪. ರಾತ್ರಿ ಶಾಲೆಗಳಿಗೆ ಪ್ರೋತ್ಸಾಹ

೫. ವಿವಿಧ ಅಭಿವೃದ್ಧಿ ಕಾರ್ಯಗಳಿಗೆ ಪ್ರೋತ್ಸಾಹ' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

**ಈರಮ್ಮ ಗಂ/ ಹನಮಂತ್ರಾಯ (ಜಿಲ್ಲಾ ಪಂಚಾಯತಿ ಮಾಜಿ ಸದಸ್ಯರು ಗುಲ್ಬರ್ಗಾ ೧೯೯೩)**

'ಇವರು ಸುರಪುರ ತಾಲೂಕಿನ ಹುಣಸಗಿ ಗ್ರಾಮದವರಾಗಿದ್ದು, ಗೃಹಿಣಿಯಾಗಿದ್ದ ಇವರು ಆಕಸ್ಮಿಕವಾಗಿ ರಾಜಕೀಯ ಮೀಸಲಾತಿಯಿಂದ ಗುಲ್ಬರ್ಗಾ ಜಿಲ್ಲಾ ಪಂಚಾಯತಿ ಚುನಾವಣೆಯಲ್ಲಿ ಹುಣಸಗಿ ಮತಕ್ಷೇತ್ರದಿಂದ ಸ್ಪರ್ಧಿಸಿ ಜಿಲ್ಲಾ ಪಂಚಾಯತಿ ಸದಸ್ಯರಾಗಿ ಆಯ್ಕೆಯಾದರು. ಕೇವಲ ೭ನೇ ತರಗತಿಯನ್ನು ಓದಿದ ಇವರು ಸದಸ್ಯರಾಗಿ ಆಯ್ಕೆಯಾಗಿದ್ದು ಹೆಮ್ಮೆ ಎಂದು ಹೇಳಬಹುದು. ಮನೆಯವರ ಮತ್ತು ಹಿರಿಯರ ಬೆಂಬಲ ಪ್ರೋತ್ಸಾಹದಿಂದ ತಮ್ಮ ಅವಧಿಯಲ್ಲಿ ಕೆಲವು ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡರು.

೧. ಬಡವರಿಗೆ ಗಂಗಾ ಕಲ್ಯಾಣ ಯೋಜನೆ ಅಡಿಯಲ್ಲಿ ಕೊಳವೆ ಭಾವಿ ಮತ್ತು ಪಂಪಸೆಟ್ ಗಳನ್ನು ಕಲ್ಪಿಸಿದ್ದಾರೆ.

೨. ಕೊಳವೆ ಭಾವಿ ದುರಸ್ತಿಯನ್ನು ಮಾಡಿಸಿದ್ದಾರೆ.

೩. ಪ್ರಾಥಮಿಕ ಶಿಕ್ಷಣಕ್ಕೆ ಒತ್ತನ್ನು ನೀಡಿದ್ದಾರೆ.' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

**ರಾಜಾ ಶ್ರೀನಿವಾಸ ನಾಯಕ:**

ಇವರು ಸುರಪುರದ ಸ್ವಾತಂತ್ರ್ಯ ಹೋರಾಟಗಾರರಾದ ಬ್ಯಾರಿಸ್ಟರ್ ರಾಜಾ ವೆಂಕಟಪ್ಪ ನಾಯಕ ಅವರ ೩ನೇಯ ಸುಪುತ್ರ, ತಂದೆಯವರ ರಾಜಕೀಯ ಮಾರ್ಗದರ್ಶನ ಗರಡಿಯಲ್ಲಿ ಬೆಳೆದ ಇವರು ೨೦೦೨ರಿಂದ ೨೦೦೭ರವರೆಗೆ ೨ ಸಲ ಜಿಲ್ಲಾ ಪಂಚಾಯತ ಸದಸ್ಯರಾಗಿ ಖಾನಾಪುರ ಎಸ್.ಹೆಚ್. ಕ್ಷೇತ್ರಕ್ಕೆ ಚುವಾಣೆಗೆ ನಿಂತು ಆಯ್ಕೆಯಾಗಿದ್ದಾರೆ. ಇವರ ಅಧಿಕಾರ ವ್ಯಾಪ್ತಿಯಲ್ಲಿ ಅನೇಕ ಬಡ ಜನರಿಗೆ ಸರಕಾರದ ಸೌಲಭ್ಯಗಳನ್ನು ಕಲ್ಪಿಸಿದ್ದಾರೆ.

**ಅಭಿವೃದ್ಧಿ ಕಾರ್ಯಗಳು:**

೧. ತಮ್ಮ ಮತಕ್ಷೇತ್ರಕ್ಕೆ ನೀರಿನ ಸೌಲಭ್ಯ

೨. ಕೊಳವೆ ಭಾವಿ ನಿರ್ಮಾಣ

೩. ಶಾಲಾ ಕಟ್ಟಡಗಳ ನಿರ್ಮಾಣ

೪. ಶೈಕ್ಷಣಿಕ ಸೌಲಭ್ಯ

**ಶಾಂತಮ್ಮ ಗಂ/ ಭೀಮಣ್ಣ ಹವಾಲ್ದಾರ ಆಂದೋಲ ಜೇವರ್ಗಿ ಜಿ:ಗುಲ್ಬರ್ಗಾ ಮಾಜಿ ಜಿಲ್ಲಾ ಪಂಚಾಯತ ಸದಸ್ಯರು ಅಧ್ಯಕ್ಷರು ೨೦೦೮-೦೯)**

ಇವರು ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲೂಕಿನ ಆಂದೋಲ ಗ್ರಾಮದವರು. ಹವಾಲ್ದಾರ ಮನೆತನಕ್ಕೆ ಸೇರಿದ ಇವರು ಗ್ರಾಮದಲ್ಲಿ ಒಳ್ಳೆಯ ಹೆಸರನ್ನು ಹೊಂದಿದ್ದಾರೆ. ಗ್ರಾಮದಲ್ಲಿ ಬೇಡರ ಜನಸಂಖ್ಯೆ ಕಡಿಮೆ ಇದ್ದರೂ ಗ್ರಾಮವನ್ನು ಹಿಡಿತದಲ್ಲಿಟ್ಟುಕೊಂಡಿದ್ದಾರೆ. ಈ ಆಂದೋಲ ಗ್ರಾಮ ಆಕಸ್ಮಿಕವಾಗಿ ಜಿಲ್ಲಾ ಪಂಚಾಯತಿ ಚುನಾವಣೆಯಲ್ಲಿ ಪರಿಶಿಷ್ಟ ಪಂಗಡ ಮೀಸಲಾತಿಯನ್ನು ಹೊಂದಿದ್ದಾಗ ಶಾಂತಮ್ಮ ಇವರು ತಮ್ಮ ಕುಟುಂಬದವರು ಪತಿಯ ಸಹಕಾರದಿಂದ ಊರಿನ ಜನರ ಪ್ರೋತ್ಸಾಹದಿಂದ ೨೦೦೮-೦೯ರಲ್ಲಿ ಗುಲ್ಬರ್ಗಾ ಜಿಲ್ಲಾ ಪಂಚಾಯತಿ ಚುನಾವಣೆಗೆ ನಿಂತರು. ಆಗ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ತಮ್ಮ ರಾಜಕೀಯ ಎದುರಾಳಿ ಗಂಗಮ್ಮ ದೇಸಾಯಿಯವರ ವಿರುದ್ಧ ೧೨೯ ಮತಗಳಿಂದ ಗೆಲುವನ್ನು ಸಾಧಿಸಿದರು. ನಂತರ ನಿಧಾನವಾಗಿ ರಾಜಕೀಯ ಅನುಭವವನ್ನು ಪಡೆದ ಇವರು ಕುಟುಂಬದವರ ಹಿತೈಷಿಗಳ ರಾಜಕೀಯ ಮುಖಂಡರ ಬೆಂಬಲವನ್ನು ಪಡೆದು ಎಲ್ಲರ ವಿಶ್ವಾಸವನ್ನು ಗಳಿಸಿ ೧೯ ತಿಂಗಳು ಜಿಲ್ಲಾ ಪಂಚಾಯತಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಈ ಆಂದೋಲ ಕ್ಷೇತ್ರ ೨೬ ಗ್ರಾಮಗಳನ್ನು ಒಳಗೊಂಡಿದ್ದು

ಬಿರಾಳ, ರಾಜೋಳ, ಮಲ್ಲ ಬಿ., ಗಂವಾರ್, ಕೆಲ್ಲುರು, ಜಾಗವ ಹೀಗೆ ಅನೇಕ ಗ್ರಾಮಗಳಿಗೆ ಸರ್ಕಾರದ ವಿವಿಧ ಯೋಜನೆಗಳು ತಲುಪುವಂತೆ ನೋಡಿಕೊಂಡರು.

**ಅಭಿವೃದ್ಧಿ ಕಾರ್ಯಗಳು:**

೧. ಕುಡಿಯುವ ನೀರಿನ ವ್ಯವಸ್ಥೆ

೨. ವಸತಿ ಸೌಲಭ್ಯಗಳನ್ನು ಒದಗಿಸಿದ್ದು

೩. ರಸ್ತೆ ಸುಧಾರಣೆಗೆ ಒತ್ತು

೪. ಶಾಲಾ ಮತ್ತು ವಿದ್ಯಾರ್ಥಿ ವಸತಿ ನಿಲಯಗಳ ಸಮಸ್ಯೆಗಳ ನಿವಾರಣೆ

೫. ಗಂಗಾ ಕಲ್ಯಾಣ ಯೋಜನೆ ಬಡವರಿಗೆ ಸಿಗುವಂತೆ ಮಾಡಿದರು' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

**ತಾಲೂಕು ಪಂಚಾಯತಿ**

**ಅಮರಮ್ಮ ಗಂ/ ಬಸವರಾಜ ಕವಲಿ (ತಾ. ಪಂ. ಸದಸ್ಯರು ಸುರಪುರ ೨೦೧೧-೧೨)**

'ಅಮರಮ್ಮ ಬಸವರಾಜ ಕವಲಿ ಇವರು ಯಾದಗಿರ ಜಿಲ್ಲೆಯ ಸುರಪುರ ತಾಲೂಕಿನ ದೇವಾಪುರ ಗ್ರಾಮದವರು. ಕವಲಿ ಮನೆತನಕ್ಕೆ ಸೇರಿದ ಇವರು ಊರಿನ ಗೌರವ ಪ್ರತಿಷ್ಠೆಯನ್ನು ಹೊಂದಿದ್ದಾರೆ. ಇವರ ಪತಿ ಬಸವರಾಜ ಕವಲಿ. ೧೯೮೭ರಲ್ಲಿ ಗ್ರಾಮ ಪಂಚಾಯತಿ ಸದಸ್ಯರಾಗಿ ಹಾಗೂ ೧೯೯೩ರಲ್ಲಿ ಗ್ರಾಮ ಪಂಚಾಯತಿ ಸದಸ್ಯರಾಗಿ ರಾಜಕೀಯದಲ್ಲಿ ಹೆಸರನ್ನು ಮಾಡಿದರು. ಇವರ ಪ್ರಭಾವದಿಂದ ೨೦೧೧-೧೨ರಲ್ಲಿ ದೇವಾಪುರ ಕ್ಷೇತ್ರ ಮಹಿಳಾ ಸಾಮಾನ್ಯ ಮೀಸಲಾತಿಯನ್ನು ಪಡೆದಾಗ ನರಸಿಂಹ ನಾಯಕರ ಮಾರ್ಗದರ್ಶನದಿಂದ ಪತಿ ಬಸವರಾಜ ಕವಲಿ ಸಮ್ಮತಿಯ ಮೇರೆಗೆ ಅಮರಮ್ಮ ಇವರು ತಾಲೂಕು ಪಂಚಾಯತಿ ಚುನಾವಣೆಗೆ ನಿಂತು ೩೫೦ ಮತಗಳಿಂದ ಗೆಲುವನ್ನು ಸಾಧಿಸಿದರು. ಇವರ ಗೆಲುವು ಈ ಕ್ಷೇತ್ರದಲ್ಲಿ ಪ್ರತಿಷ್ಠೆಯ ವಿಷಯವಾಗಿತ್ತು. ಈ ಗೆಲುವಿನ ಮೂಲಕ ತಮ್ಮ ಕ್ಷೇತ್ರಕ್ಕೆ ವಿವಿಧ ಅಭಿವೃದ್ಧಿ ಕಾರ್ಯಗಳನ್ನು ಮಾಡಿದ್ದಾರೆ.

**ಅಭಿವೃದ್ಧಿ ಕಾರ್ಯಗಳು:**

೧. ದೇವಾಪುರ ಹಿರಿಯ ಪ್ರಾಥಮಿಕ ಶಾಲೆಗೆ ಕ್ರೀಡಾ ಸಾಮಗ್ರಿಗಳನ್ನು ನೀಡಿದ್ದಾರೆ

೨. ತಾಲೂಕು ಪಂಚಾಯತಿ ಅನುದಾನದಿಂದ ಪ್ರಾಥಮಿಕ ಶಾಲೆಯನ್ನು ದುರಸ್ತಿ ಮಾಡಿಸಿದ್ದಾರೆ

೩. ಶೆಳ್ಳಿಗಿ ಗ್ರಾಮದ ಹಿರಿಯ ಪ್ರಾಥಮಿಕ ಶಾಲೆಗೆ ಕಂಪ್ಯೂಟರ್‌ಗಳನ್ನು ಒಪ್ಪಿಸಿದ್ದಾರೆ

೪. ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡಿದ್ದಾರೆ

೫. ಸಣ್ಣ ರೈತರಿಗೆ ಗಂಗಾ ಕಲ್ಯಾಣ ಯೋಜನೆಯಲ್ಲಿ ಕೊಳವೆ ಬಾವಿ ಸೌಲಭ್ಯವನ್ನು ಕಲ್ಪಿಸಿದ್ದಾರೆ.' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

**ಸಾಬಮ್ಮ ಗಂ/ ಗೋಪಾಲಪ್ಪ ದೇಸಾಯಿ ದೇವರಗೋನಾಲ**

'ಇವರು ಸಗರನಾಡಿನ ಸುರಪುರದ ದೇವರಗೋನಾಲ ಗ್ರಾಮದವರು. ದೇಸಾಯಿ ಮನೆತನಕ್ಕೆ ಸೇರಿದವರು. ಈ ಕುಟುಂಬದಲ್ಲಿ ಹುಟ್ಟಿ ಬೆಳೆದ ಇವರು ಬಡತನ ಸಿರಿತನವನ್ನು ತಮ್ಮ ಜೀವನದಲ್ಲಿ ಕಂಡವರು. ದೇವರ ಅದೃಷ್ಟದಂತೆ ೨೦೦೦ ಇಸ್ವಿಯಲ್ಲಿ ದೇವರಗೋನಾಲ ತಾಲೂಕು ಪಂಚಾಯತಿ ಕ್ಷೇತ್ರ ಪರಿಶಿಷ್ಟ ಪಂಗಡಕ್ಕೆ ಮೀಸಲಾದಾಗ ಇವರು ಅವಿರೋಧವಾಗಿ ಆಯ್ಕೆಯಾದರು. ಇದು ಅವರ ಹಿರಿತನಕ್ಕೆ ಕಾರಣವಾಯಿತು. ನಂತರ ಸುಮಾರು ೧೦ ವರ್ಷಗಳ ಕಾಲ ರಾಜಕೀಯಕ್ಕೆ ಕಾಲಿಡಲಿಲ್ಲ. ೨೦೧೦ನೇ ಸಾಲಿನಲ್ಲಿ ಆಕಸ್ಮಿಕವಾಗಿ ತಾಲೂಕು ಪಂಚಾಯತಿ ಚುನಾವಣೆ ನಡೆದಾಗ ಊರಿನವರ ಒತ್ತಾಯಕ್ಕೆ ಮಣಿದು ನಿಂಗಮ್ಮ ಗಂಡ ದೇವಿಂದ್ರಪ್ಪ ಚಿಕ್ಕನಳ್ಳಿ ಇವರ ವಿರುದ್ಧ ಸ್ಪರ್ಧಿಸಿ ೫೦೧ ಮತಗಳಿಂದ ಗೆಲುವನ್ನು ಸಾಧಿಸಿದರು. ಮುಂದೆ ತಾಲೂಕಾ ಪಂಚಾಯತ ಅಧ್ಯಕ್ಷರಾಗಿ ಜವಾಬ್ದಾರಿಯನ್ನು ತೆಗೆದುಕೊಂಡಿದ್ದರು.

**ಅಭಿವೃದ್ಧಿ ಕಾರ್ಯಗಳು:**

೧. ವಸತಿ ಸೌಲಭ್ಯಗಳು

೨. ಕುಡಿಯುವ ನೀರಿನ ವ್ಯವಸ್ಥೆ

೩. ಪ್ರಾಥಮಿಕ ಆರೋಗ್ಯ ಸೌಲಭ್ಯಗಳು' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

**ಕಾಜಪ್ಪ ದೊರಿ ಅರೆವಾಳ ತಾಲೂಕು ಪಂಚಾಯತಿ ಸದಸ್ಯ ಜೇವರ್ಗಿ:**

'ಇವರು ಕಲಬುರಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಅರೆವಾಳ ಗ್ರಾಮದವರು. ೨೦೧೧ರಲ್ಲಿ ತಾಲೂಕು ಪಂಚಾಯತಿ ಚುನಾವಣೆ ನಡೆದಾಗ ಈ ಗ್ರಾಮದ ಕಾಜಪ್ಪ ದೊರಿ ಅರೆವಾಳ ಇವರು ತಾಲೂಕಾ ಪಂಚಾಯತಿ ಸದಸ್ಯರಾಗಿ ಆಯ್ಕೆಯಾದರು. ಈ ಪಂಚಾಯತಿಯಲ್ಲಿ ಬೇಡ ಜನಾಂಗದ ಏಕೈಕ ಸದಸ್ಯರೆಂದರೆ ಇವರೇ. ಕಾರಣ ಈ ತಾಲೂಕಿನಲ್ಲಿ ಬೇಡರ ಜನಸಂಖ್ಯೆ ಕಡಿಮೆ ಇದೆ. ಜೊತೆಗೆ ಬೇಡರ ಪ್ರಭಾವವೂ ಕಡಿಮೆ ಎಂದು ಹೇಳಬಹುದು. ಪ್ರಾರಂಭದಲ್ಲಿ ಅರೆವಾಳ ಗ್ರಾಮ ಪಂಚಾಯತಿಯ ಸದಸ್ಯರಾಗಿದ್ದರು. ನಂತರ ಇವರ ರಾಜಕೀಯ ಆಸಕ್ತಿ ಒಳ್ಳೆಯ ನಡತೆಯನ್ನು ನೋಡಿದ ಜನರು ತಾಲೂಕು ಪಂಚಾಯತಿಯ ಚುನಾವಣೆಗೆ ನಿಲ್ಲಿಸಿ ಗೆಲ್ಲಿಸಿದರು. ಮತ್ತು ಇವರ ಧರ್ಮ ಪತ್ನಿಯಾದ ಶಾಂತಾಬಾಯಿ ಇವರು ನಿರಂತರ ೩ ಸಲ ಗ್ರಾಮ ಪಂಚಾಯತಿ ಸದಸ್ಯರಾಗಿ ಆಯ್ಕೆಯಾಗಿದ್ದರು.

**ಅಭಿವೃದ್ಧಿ ಕಾರ್ಯಗಳು:**

- ಅರೆವಾಳ, ಜನಿವಾರ, ಗೌನಳ್ಳಿ, ರಾಸೋಣಗಿ, ಹನ್ನುರ, ಹಂಗರಗಿ ಗ್ರಾಮಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಿದ್ದಾರೆ
- ಕುಡಿಯುವ ನೀರಿನ ಸೌಲಭ್ಯ
- ಶಾಲಾ ಕಟ್ಟಡ ನಿರ್ಮಾಣ
- ಬೇಡ ವಿದ್ಯಾರ್ಥಿಗಳಿಗೆ ಸ್ಕಾಲರ್‌ಶಿಪ್ ವ್ಯವಸ್ಥೆ' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

**ಗ್ರಾಮ ಪಂಚಾಯಿತಿ**

**ರಾಣಿ ಕಲಾವತಿ ತಂ/ ರಾಜಾ ಚನ್ನಪ್ಪ ನಾಯಕ (ಗ್ರಾಪಂ. ಅಧ್ಯಕ್ಷರು ದೇವಿಕೇರಾ ೨೦೧೧-೧೨)**

'ಇವರು ಸುರಪುರ ತಾಲೂಕಿನಿಂದ ಕೇವಲ ೩ ಕಿ.ಮೀ. ದೂರವಿರುವ ಐತಿಹಾಸಿಕ ಗ್ರಾಮವಾದ ದೇವಿಕೇರಾ ಗ್ರಾಮದವರು. ಸುರಪುರದಲ್ಲಿ ಘನತೆ ಗೌರವ ಸ್ವಾಭಿಮಾನವನ್ನು ಹೊಂದಿದ, ದಾನ, ಧರ್ಮಕ್ಕೆ ಹೆಸರುವಾಸಿಯಾದ ರಾಣಿ ಪಾಪಮ್ಮ ಜೇಜಿಯವರ ಮೂರನೇಯ ಮಗಳು ರಾಣಿ ಪಾಪಮ್ಮ ಜೇಜಿಯವರಿಗೆ ರತ್ತಾಳ ಮತ್ತು ದೇವಿಕೇರಿ ೨ ಕಣ್ಣುಗಳಂತೆ ತಿಳಿದುಕೊಂಡಿದ್ದರು. ಇವರ ಪ್ರತಿಯೊಂದು ಆಗು ಹೋಗುಗಳಿಗೆ ಈ ೨ ಗ್ರಾಮದ ಜನರು ಹೃದಯ ಪೂರ್ವಕವಾಗಿ ಸ್ಪಂದಿಸುತ್ತಿದ್ದರು. ಈ ಗ್ರಾಮಗಳಲ್ಲಿ ನೂರಾರು ಎಕರೆ ಕೃಷಿ ಭೂಮಿ ಹೊಂದಿದ್ದಾರೆ. ಯಾರಿಗೂ ಯಾವತ್ತಿಗೂ ಕೂಡಾ ಕೆಟ್ಟದನ್ನು ಬಯಸಿದವರಲ್ಲ. ಘೋಷಾ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ೨೦೧೦-೧೧ರಲ್ಲಿ ಗ್ರಾಮ ಪಂಚಾಯತಿ ಚುನಾವಣೆಗಳು ನಡೆದಾಗ ೨ ಗ್ರಾಮಗಳ ಜನರ ಒತ್ತಡದ ಮೇರೆಗೆ ಚುನಾವಣೆಗೆ ಸ್ಪರ್ಧಿಸಿದರು. ಇವರು ಒಂದು ದಿನವೂ ಚುನಾವಣಾ ಪ್ರಚಾರಕ್ಕೆ ಬಂದವರಲ್ಲ. ಆದರೂ ಕೂಡಾ ಜನರು ತಾಯಿಯೆಂದು ಭಾವಿಸಿ ಅಭಿಮಾನದಿಂದ ಮತಗಳನ್ನು ಹಾಕಿ ಬಹುಮತಗಳಿಂದ ಆರಿಸಿ ತಂದರು. ಇದು ರಾಣಿ ಕಲಾವತಿಯವರು ಆ ಎರಡು ಗ್ರಾಮದ ಜನರಿಗೆ ಅಭಾರಿಯಾಗಿ ಅಭಿಮಾನದಿಂದ ಕೃತಜ್ಞತೆಯನ್ನು ಸಲ್ಲಿಸಿದರು. ಮುಂದೆ ದೈವದ ಪ್ರೇರಣೆಯಿಂದ ಹಿರಿಯರ ಆಶೀರ್ವಾದದಿಂದ ೨೦೧೨-೧೩ರಲ್ಲಿ ಗ್ರಾಮ ಪಂಚಾಯತಿ ಅಧ್ಯಕ್ಷರಾದರು. ಆಗ ಜನರ ಸಂತೋಷಕ್ಕೆ ಮಿತಿಯೇ ಇರಲಿಲ್ಲ. ನಂತರ ೨೦೧೫-೧೬ ಗ್ರಾಮ ಪಂಚಾಯತಿ ಚುನಾವಣೆಯಲ್ಲಿ ಗೆಲ್ಲುವ ಅಭ್ಯರ್ಥಿ ಯಾದರೂ ಕೂಡಾ ವಿರೋಧಿಗಳ ಕುತಂತ್ರದಿಂದ ಚುನಾವಣೆಯಿಂದ ಹಿಂದಕ್ಕೆ ಸರಿಯ ಬೇಕಾಯಿತು.

**ಅಭಿವೃದ್ಧಿ ಕಾರ್ಯಗಳು:**

೧. ವಸತಿ ಸೌಲಭ್ಯಗಳನ್ನು ಕಲ್ಪಿಸಿದ್ದಾರೆ.

೨. ಗ್ರಾಮ ನೈರ್ಮಲ್ಯ ಯೋಜನೆಯನ್ನು ಅಚ್ಚು ಕಟ್ಟಾಗಿ ಜಾರಿಗೆ ತಂದಿದ್ದಾರೆ.

೩. ಶೌಚಾಲಯಗಳ ನಿರ್ಮಾಣ

೪. ಸುವರ್ಣ ಗ್ರಾಮ ಯೋಜನೆ ಕಾರ್ಯಕ್ರಮ ಅನುಷ್ಠಾನ

೫. ರತ್ತಾಳ ಮತ್ತು ದೇವಿಕೇರಿ ಗ್ರಾಮಗಳಿಗೆ ಸಿಸಿ ರಸ್ತೆಗಳ ನಿರ್ಮಾಣ

೬. ದೇವಿಕೇರಾ ಗ್ರಾಮದಲ್ಲಿ ಹೊಸ ಶಾಲಾ ಕಟ್ಟಡ ನಿರ್ಮಾಣ' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

**ದೇವಿಕೆಮ್ಮ ಗಂಡ ಗೋಪಾಲಪ್ಪ ನಾಯಕ ಅರಳಹಳ್ಳಿ (ದೇವಾಪುರ ಗ್ರಾಮ ಪಂಚಾಯತಿ ಸದಸ್ಯರು ೨೦೧೦-೧೧)**

ಸುರಪುರ ತಾಲೂಕಿನ ಅರಳಹಳ್ಳಿ ಗ್ರಾಮದವರಾದ ಇವರು ಸಾಮಾನ್ಯ ಬಡ ಕುಟುಂಬದಲ್ಲಿ ಹುಟ್ಟಿ ಬೆಳೆದು ಸ್ವಾಭಿಮಾನ ಬದುಕನ್ನು ಸಾಧಿಸಿದವರು. ಜೀವನದಲ್ಲಿ ಎಷ್ಟೇ ಕಷ್ಟಗಳು ಬಂದರೂ ನಗುನಗುತ್ತಾ ಜೀವನ ಸಾಗಿಸಿದರು. ೨೦೦೯-೧೦ರಲ್ಲಿ ಗ್ರಾಮ ಪಂಚಾಯತಿ ಚುನಾವಣೆ ನಡೆದಾಗ ಮನೆಯವರು ಕುಟುಂಬದವರ ಒತ್ತಾಯದ ಮೇರೆಗೆ ಚುನಾವಣೆಯಲ್ಲಿ ಸ್ಪರ್ಧಿಸಿ ಗೆಲುವನ್ನು ಪಡೆದರು. ಬಡತನವನ್ನು ಅನುಭವಿಸಿರುವ ಇವರು ಬಡ ಜನರ ಕಷ್ಟ ನಷ್ಟಗಳಿಗೆ ಸ್ಪಂದಿಸಿ ಕೈಲಾದಷ್ಟು ಸಹಾಯವನ್ನು ಮಾಡುತ್ತಾರೆ.

**ಅಭಿವೃದ್ಧಿ ಕಾರ್ಯಗಳು:**

೧. ಸರಕಾರದ ಯೋಜನೆಗಳನ್ನು ಸರಿಯಾದ ರೀತಿಯಲ್ಲಿ ಕಾರ್ಯರೂಪಕ್ಕೆ ತಂದಿರುವುದು

೨. ಕುಡಿಯುವ ನೀರಿನ ವ್ಯವಸ್ಥೆ

೩. ಆರೋಗ್ಯ ಸೌಲಭ್ಯಗಳು

**ವೀರ ವೆಂಕಟಪ್ಪ ಗೌಡ (ಗೌಡಗೇರಿ ಗ್ರಾಮ ಪಂಚಾಯತಿ ಸದಸ್ಯರು ೨೦೦೮-೦೯)**

ಸುರಪುರ ತಾಲೂಕಿನ ಗೌಡಗೇರಿ ಗ್ರಾಮದವರಾದ ಇವರು ಮಧ್ಯಮ ವರ್ಗದಲ್ಲಿ ಕುಟುಂಬದಲ್ಲಿ ಜನಿಸಿದವರು. ಬಿ. ಎ. ಮತ್ತು ಎಂ.ಎ. ರಾಜ್ಯ ಶಾಸ್ತ್ರ ಪದವಿಯನ್ನು ಪಡೆದ ಇವರು ಆಕಸ್ಮಿಕವಾಗಿ ಗ್ರಾಮದ ರಾಜಕೀಯದಲ್ಲಿ ಭಾಗವಹಿಸಿ ಗ್ರಾಮ ಪಂಚಾಯತಿ ಸದಸ್ಯರಾಗಿ ಆಯ್ಕೆಯಾದರು. ಇಡೀ ತಾಲೂಕಿನಲ್ಲಿ ಎಂ.ಎ. ಪದವಿಯನ್ನು ಪಡೆದ ಏಕೈಕ

ಗ್ರಾಮ ಪಂಚಾಯತಿಯ ಸದಸ್ಯರೆಂದು ಹೇಳಬಹುದು. ಜನರ ಸೇವೆಯನ್ನು ಮಾಡಬೇಕು ಎಂಬ ಆಶೆ ಇರುವುದರಿಂದ ಇವರು ರಾಜಕೀಯ ಮೊದಲ ಮೆಟ್ಟಲು ಗ್ರಾಮ ಪಂಚಾಯತಿ ಚುನಾವಣೆಗೆ ನಿಂತು ಸದಸ್ಯರಾಗಿ ಜನರ ಸೇವೆಯನ್ನು ಮಾಡತೊಡಗಿದರು.

**ಅಭಿವೃದ್ಧಿ ಕಾರ್ಯಗಳು:**

೧. ಗೌಡಗೇರಿ ಗ್ರಾಮಕ್ಕೆ ಕುಡಿಯುವ ನೀರಿನ ಸೌಲಭ್ಯ

೨. ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚಿನ ಒತ್ತು ಕೊಟ್ಟರು

೩. ಗ್ರಾಮದ ಗ್ರಂಥಾಲಯಕ್ಕೆ ಪುಸ್ತಕಗಳನ್ನು ಒದಗಿಸಿ ಕೊಟ್ಟರು

**ಹಣಮಂತ್ರಾಯ ದೊರೆ: ನೆಲೋಗಿ, ಜೇವರ್ಗಿ ತಾಲೂಕು ಗ್ರಾಮ ಪಂಚಾಯತ ಉಪಾಧ್ಯಕ್ಷರು:**

ಇವರು ಸಗರನಾಡಿನ ನೆಲೋಗಿ ಗ್ರಾಮದವರು. ಜೇವರ್ಗಿ ತಾಲೂಕಿನಲ್ಲಿ ಬೇಡರ ಜನಸಂಖ್ಯೆ ಮತ್ತು ಅವರ ಪ್ರಭಾವ ಕಡಿಮೆ ಇದ್ದರೂ ಕೆಲವು ಗ್ರಾಮಗಳಲ್ಲಿ ಬೇಡರು ತಮ್ಮ ಪ್ರಭಾವೀ ನಾಯಕತ್ವವನ್ನು ಹೊಂದಿದ್ದಾರೆ. ಇಂತಹ ಗ್ರಾಮಗಳಲ್ಲಿ ನೆಲೋಗಿ ಗ್ರಾಮವು ಒಂದು. ಇದು ಮಾಜಿ ಮುಖ್ಯಮಂತ್ರಿ ಧರಂಸಿಂಗ್ ಅವರ ಹುಟ್ಟೂರಾಗಿದೆ. ಈ ಗ್ರಾಮದಲ್ಲಿ ಗ್ರಾಮ ಪಂಚಾಯತಿ ಚುನಾವಣೆ ನಡೆದಾಗ ಹಣಮಂತ್ರಾಯ ದೊರೆಯವರು ಸ್ಪರ್ಧಿಸಿ ಗೆಲುವನ್ನು ಸಾಧಿಸಿ ಎಲ್ಲರ ಹುಬ್ಬೇರುವಂತೆ ಮಾಡಿದರು. ಸಾಮಾನ್ಯ ಬಡ ಬೇಡ ಕುಟುಂಬದಲ್ಲಿ ಹುಟ್ಟಿದ ಇವರು ರಾಜಕೀಯವನ್ನು ಪ್ರವೇಶ ಮಾಡಿದ್ದು ಆಕಸ್ಮಿಕವಾಗಿ ಹೇಳಬಹುದು.

**ಅಭಿವೃದ್ಧಿ ಕಾರ್ಯಗಳು:**

೧. ಗ್ರಾಮದ ರಸ್ತೆ ಸುಧಾರಣೆ

೨. ಆರೋಗ್ಯ ಸೌಲಭ್ಯಗಳು

೩. ಬಡವರಿಗೆ ವಸತಿ ಸೌಲಭ್ಯಗಳನ್ನು ಕಲ್ಪಿಸಿದ್ದಾರೆ.

**ವೆಂಕಟೇಶ ಹುಲಗಣ್ಣ ಹಳ್ಳದಮನಿ ಚಿಕ್ಕನಳ್ಳಿ(ಕಚಕನೂರ ಗ್ರಾಮಪಂಚಾಯತಿ ಅಧ್ಯಕ್ಷರು ೨೦೦೮-೦೯)**

ಇವರು ಸಗರನಾಡಿನ ಸುರಪುರದ ಚಿಕ್ಕನಳ್ಳಿ ಗ್ರಾಮದವರು. ಈ ಹಳ್ಳಿಯಲ್ಲಿ ಕೆಲವೇ ಕೆಲವು ಬೇಡರ ಕುಟುಂಬಗಳು ಇದ್ದವು. ಇವರ ಪ್ರಭಾವ ಹೆಚ್ಚಾಗಿದೆ. ಆದ್ದರಿಂದ ೨೦೦೮-೦೯ನೇ ಸಾಲಿನಲ್ಲಿ ನಡೆದ ಗ್ರಾಮ ಪಂಚಾಯತಿ ಚುನಾವಣೆಯಲ್ಲಿ ಸ್ಪರ್ಧಿಸಿ ಗೆದ್ದು ಅಧ್ಯಕ್ಷರಾಗಿ ಆಯ್ಕೆಯಾದಾಗ ಗ್ರಾಮದ ಜನರಿಗೆ ಮತ್ತು ಗ್ರಾಮಕ್ಕೆ ಏನಾದರೂ ಕೊಡುಗೆಯನ್ನು ನೀಡಬೇಕು ಎಂದು ಅನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡಿದರು.

**ಅಭಿವೃದ್ಧಿ ಕಾರ್ಯಗಳು:**

೧. ಕಂಪ್ಯೂಟರ್ ಕೋಣೆಗಳ ನಿರ್ಮಾಣ

೨. ಶಾಲೆಗೆ ಕಂಪೌಂಡ ನಿರ್ಮಾಣ

೩. ನೀರಿನ ಪೈಪಲೈನ್ ನಿರ್ಮಾಣ ಕಾಮಗಾರಿ

೪. ಸಿಮೆಂಟ್ ರಸ್ತೆ ಚರಂಡಿ ನಿರ್ಮಾಣ

೫. ಬಡವರಿಗೆ ಸುಮಾರು ೬೦ ಮನೆಗಳನ್ನು ನೀಡಿದ್ದಾರೆ.

**೮.೪ ಸಗರನಾಡಿನ ಸುರಪುರ ಬೇಡರ ರಾಜಕೀಯದಲ್ಲಿ ಆಸಕ್ತಿ**

೧. ಸಗರ ನಾಡಿನಲ್ಲಿ ಬೇಡರು ಬಹುಸಂಖ್ಯಾತರು

೨. ಬೇಡರು ಧೈರ್ಯವಂತರು, ಶೂರರೂ, ಹೋರಾಟದ ಮನೋಭಾವವನ್ನು ಉಳ್ಳವರು

೩. ಮೊದಲಿನಿಂದಲೂ ಇವರಲ್ಲಿ ರಾಜಕೀಯ ಇಚ್ಛಾಶಕ್ತಿ ಇದೆ

೪. ಇತ್ತೀಚಿನ ದಿನಮಾನಗಳಲ್ಲಿ ಆರ್ಥಿಕವಾಗಿ ಸಬಲರಾಗಿದ್ದಾರೆ

೫. ಸಮುದಾಯದ ಸಂಘ ಸಂಸ್ಥೆಗಳನ್ನು ರಚಿಸಿಕೊಂಡಿದ್ದಾರೆ

೬. ಶಿಕ್ಷಣದಲ್ಲಿ ಹೆಚ್ಚಿನ ಒಲವನ್ನು ಮೂಡಿಸಿ ಕೊಂಡಿದ್ದಾರೆ

೭. ರಾಜಕೀಯ ಎನ್ನುವುದು ಇವರ ರಕ್ತದಲ್ಲಿ ಬೆರೆತುಹೋಗಿದೆ.

೮. ಮುನ್ನಡೆಸಿಕೊಂಡು ಹೋಗುವ ನಾಯಕತ್ವ ಗುಣವನ್ನು ಹೊಂದಿದ್ದಾರೆ.

**೮.೫ ಶಹಾಪುರ ಮತ್ತು ಜೇವರ್ಗಿ ಬೇಡರ ರಾಜಕೀಯ ಆಸಕ್ತಿ ಮತ್ತು ಅನಾಸಕ್ತಿ**

೧. ಈ ಎರಡೂ ತಾಲೂಕಗಳಲ್ಲಿ ಬೇಡರ ಜನಸಂಖ್ಯೆ ಲಿಂಗಾಯತ ಸಮುದಾಯಕ್ಕಿಂತ ಕಡಿಮೆ ಇದೆ.

೨. ಹೆಚ್ಚಾಗಿ ಬೇಡರು ಬಡವರಾಗಿದ್ದಾರೆ.

೩. ರಾಜಕೀಯ ತುಳಿತಕ್ಕೆ ಒಳಗಾಗಿದ್ದಾರೆ.

೪. ರಾಜಕೀಯ ಆಸಕ್ತಿ ಇದ್ದರೂ ಆರ್ಥಿಕವಾಗಿ ಸಬಲರಿಲ್ಲ.

೫. ರಾಜಕೀಯ ಆಸಕ್ತಿ ಇದ್ದರೂ ಪ್ರೋತ್ಸಾಹವಿಲ್ಲ.

೬. ರಾಜಕೀಯ ಶಿಕ್ಷಣದ ಕೊರತೆ.

೭. ಐಕ್ಯತೆಯ ಭಾವನೆ ಕಡಿಮೆ ಇರುವುದು.

೮. ಸಮುದಾಯದ ಸಂಘ ಸಂಸ್ಥೆ ಸಂಘಟನೆಗಳ ಕೊರತೆ.

೯. ಹೋರಾಟದ ಮನೋಭಾವನೆ ಕಡಿಮೆ ಇರುವುದು.

೧೦. ರಾಜಕೀಯ ಪ್ರಜ್ಞೆ ಕಡಿಮೆ ಇರುವುದು.

**೮.೬ ರಾಜಕೀಯ ನಾಯಕರ ಪ್ರತಿಕ್ರಿಯೆ ಮತ್ತು ಅಭಿಪ್ರಾಯಗಳು:**

ಸಗರನಾಡಿನ ಸುರಪುರ, ಶಹಾಪುರ, ಜೇವರ್ಗಿ ತಾಲೂಕುಗಳ ಗ್ರಾಮಗಳಿಗೆ ಕ್ಷೇತ್ರ ಅಧ್ಯಯನಕ್ಕೆ ಹೋದಾಗ ಬೇಡರ ರಾಜಕೀಯ ಅರಿವು ಆಸಕ್ತಿ ಮತ್ತು ಅಭಿಪ್ರಾಯಗಳನ್ನು ಕುರಿತು ಪ್ರಶ್ನಾವಳಿಗಳ ಮೂಲಕ ಕಂಡುಕೊಳ್ಳಲಾಗಿದೆ. ಆದರೆ ನಾಯಕರುಗಳಿಂದ ಒಂದೇ ರೀತಿಯ ಅಭಿಪ್ರಾಯಗಳು ವ್ಯಕ್ತವಾಗಲಿಲ್ಲ. ವಿಭಿನ್ನ ರೀತಿಯ ಅಭಿಪ್ರಾಯಗಳನ್ನು ಹಂಚಿಕೊಂಡಿದ್ದಾರೆ.

೧. 'ಬಡವರ ದೀನ ದಲಿತರ ಸೇವೆ ಮಾಡಲು ಅವಕಾಶ.

೨. ಬೇಡ ಸಮುದಾಯವನ್ನು ಅಭಿವೃದ್ಧಿ ಮಾಡಲು ಅವಕಾಶ.

೩. ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಅವಕಾಶ ದೊರೆತಿದೆ.

೪. ಸಾಮಾಜಿಕ ಮತ್ತು ರಾಜಕೀಯ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಒಳ್ಳೆಯ ಅವಕಾಶ.

೫. ರಾಜಕೀಯ ಜ್ಞಾನ ಪಡೆಯಲು ರಾಜ್ಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಲು ಅವಕಾಶ.

೬. ಕಾನೂನು ಮತ್ತು ಸಂವಿಧಾನದ ಬಗ್ಗೆ ತಿಳಿದುಕೊಳ್ಳಲು ಅವಕಾಶ.' (ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

**೮.೭ ಬೇಡ ಸಮುದಾಯ ಮತ್ತು ರಾಜಕೀಯ ಮೀಸಲಾತಿಯ ಪ್ರಯೋಜನಗಳು:**

೧. ಸಗರನಾಡಿನ ಬೇಡರು ಸರ್ಕಾರದಿಂದ ವಿವಿಧ ಸೌಲಭ್ಯಗಳನ್ನು ನ್ಯಾಯಯುತವಾಗಿ ಪಡೆದುಕೊಳ್ಳುತ್ತಿದ್ದಾರೆ.

೨. ಬೇಡರಿಗೆ ರಾಜಕೀಯ ಪ್ರಜ್ಞೆ ಅನುಭವ ಆಸಕ್ತಿ ಬೆಳೆಸಿಕೊಳ್ಳಲು ತುಂಬಾ ಅನುಕೂಲವಾಗಿದೆ.

೩. ಬೇಡರಿಗೆ ತಮ್ಮ ಹಕ್ಕು ಭಾಧ್ಯತೆಗಳನ್ನು ತಿಳಿದುಕೊಳ್ಳಲು ಪ್ರಯೋಜನ ಕಾರಿಯಾಗಿದೆ.

೪. ತಮ್ಮ ಸಮುದಾಯದವರ ಸೇವೆ ಮಾಡಲು ಅವಕಾಶ ದೊರೆತಿದೆ.

೫. ಐಕ್ಯತೆಯನ್ನು ಬೆಳೆಸಿಕೊಳ್ಳಲು ಸಾಧ್ಯವಾಗಿದೆ.

೬. ಮೀಸಲಾತಿಯಿಂದ ಬೇಡ ಯುವಕರಿಗೆ ರಾಜಕೀಯವಾಗಿ ಬೆಳೆಯಲು ಉತ್ತಮ ಅವಕಾಶ ದೊರೆತಿದೆ.

೭. ಕಾನೂನು ಕಾಯ್ದೆ ಸಂವಿಧಾನದ ವಿಧಿ ವಿಧಾನಗಳನ್ನು ತಿಳಿದುಕೊಳ್ಳಲು ಅನುಕೂಲವಾಗಿದೆ.

೮. ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಅನುಕೂಲವಾಗಿದೆ.

### ೮.೮ ಸಗರನಾಡಿನ ಬೇಡ ಸಮುದಾಯದ ಶಾಸಕರು ಮತ್ತು ಲೋಕಸಭಾ ಸದಸ್ಯರ ಪಟ್ಟಿ

| ಕ್ರ. ಸಂ. | ಹೆಸರು | ಊರು | ಕ್ಷೇತ್ರ | ಸ್ಥಾನ | ವರ್ಷ |
|---|---|---|---|---|---|
| ೧ | 'ರಾಜಾ ಪಿಡ್ಡ ನಾಯಕ | ಸುರಪುರ | ಸುರಪುರ | ಎಂ.ಎಲ್.ಎ. | ೧೯೫೨ |
| ೨ | ರಾಜಾ ಕುಮಾರ ನಾಯಕ | ಸುರಪುರ | ಸುರಪುರ | ಎಂ.ಎಲ್.ಎ. | ೧೯೭೧-೭೨ |
| ೩ | ರಾಜಾ ಮದನಗೋಪಾಲ ನಾಯಕ | ಸುರಪುರ | ಸುರಪುರ | ಎಂ.ಎಲ್.ಎ. | ೧೯೮೩ |
| ೪ | ಡಾ॥ ರಾಜಾ ವೆಂಕಟಪ್ಪ ನಾಯಕ | ಸುರಪುರ | ಸುರಪುರ | ಎಂ.ಎಲ್.ಎ. | ೧೯೯೪ ಮತ್ತು ೨೦೧೩ |
| ೫ | ನರಸಿಂಹ ನಾಯಕ (ರಾಜುಗೌಡ) | ಕೊಡೇಕಲ್ | ಸುರಪುರ | ಎಂ.ಎಲ್.ಎ. | ೨೦೦೪ |
| ೬ | ರಾಜಾ ರಂಗಪ್ಪ ನಾಯಕ | ಸುರಪುರ | ಸುರಪುರ (ರಾಯಚೂರ) | ಎಂ. ಪಿ. | -- |
| ೭ | ಬ್ಯಾರಿಸ್ಟರ್ ರಾಜಾ ವೆಂಕಟಪ್ಪ ನಾಯಕ | ಸುರಪುರ | ಶಹಾಪುರ | ಎಂ.ಎಲ್.ಎ. | ೧೯೬೭ |
| ೮ | ಬ್ಯಾರಿಸ್ಟರ್ ರಾಜಾ ವೆಂಕಟಪ್ಪ ನಾಯಕ | ಸುರಪುರ (ರಾಯಚೂರ) | ಸುರಪುರ | ಎಂ. ಪಿ. | ೧೯೬೭ |

(ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

## ೮.೯ ಸಗರನಾಡಿನ ಬೇಡರ ಆಯ್ದ ಗ್ರಾಮ ಪಂಚಾಯತ, ತಾಲೂಕ ಪಂಚಾಯತ ಮತ್ತು ಜಿಲ್ಲಾ ಪಂಚಾಯತ ಸದಸ್ಯರ ಪಟ್ಟಿ

### ಸಗರನಾಡಿನ ಬೇಡರ ಆಯ್ದ ಗ್ರಾಮ ಪಂಚಾಯತ ಸದಸ್ಯರ ಪಟ್ಟಿ

| ಕ್ರ. ಸಂ. | ಹೆಸರು | ಊರು | ಕ್ಷೇತ್ರ | ಸ್ಥಾನ | ವರ್ಷ |
|---|---|---|---|---|---|
| ೧ | 'ರಾಣಿ ಕಲಾವತಿ | ದೇವಿಕೇರಾ | ಸುರಪುರ | ಅಧ್ಯಕ್ಷರು | ೨೦೧೧-೧೨ |
| ೨ | ದೇವಿಕೆಮ್ಮ | ಅರಳಹಳ್ಳಿ | ಸುರಪುರ | ಸದಸ್ಯರು | ೨೦೧೦-೧೧ |
| ೩ | ವೆಂಕಟೇಶ | ಕಚಕನೂರ | ಸುರಪುರ | ಅಧ್ಯಕ್ಷರು | ೨೦೦೮-೦೯ |
| ೪ | ವೀರ ವೆಂಕಟಪ್ಪ ಗೌಡ | ಗೌಡಗೇರಿ | ಸುರಪುರ | ಸದಸ್ಯರು | ೨೦೦೮-೦೯ |
| ೫ | ಗೌರಮ್ಮ ನಾಯಕ | ಬೋನಾಳ | ಸುರಪುರ | ಸದಸ್ಯರು | ೨೦೧೦-೧೧ |
| ೬ | ಹಣಮಂತ್ರಾಯ ದೊರಿ | ನೇಲೋಗಿ | ಜೇವರ್ಗಿ | ಉಪಾಧ್ಯಕ್ಷರು | ೨೦೦೮-೦೯ |
| ೭ | ಕೊಂಡಯ್ಯ | ವನದುರ್ಗಾ | ಶಹಾಪುರ | ಸದಸ್ಯರು | ೨೦೦೮-೦೯ |
| ೮ | ವಿಜಯಲಕ್ಷ್ಮೀ ಸಾಯಬಣ್ಣ | ದೇವಿಕೆರಾ | ಸುರಪುರ | ಸದಸ್ಯರು | ೨೦೧೫-೧೬' |

(ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

### ತಾಲೂಕಾ ಪಂಚಾಯತಿ ಸದಸ್ಯರ ಪಟ್ಟಿ

| ಕ್ರ. ಸಂ. | ಹೆಸರು | ಊರು | ಕ್ಷೇತ್ರ ತಾಲೂಕು | ಸ್ಥಾನ | ವರ್ಷ |
|---|---|---|---|---|---|
| ೧ | 'ಅಮರಮ್ಮ | ದೇವಾಪುರ | ಸುರಪುರ | ಸದಸ್ಯರು | ೨೦೧೦-೧೧ |
| ೨ | ಸಾಬಮ್ಮ | ದೇವರಗೋನಾಲ | ಸುರಪುರ | ಅಧ್ಯಕ್ಷರು | ೨೦೧೨-೧೩ |
| ೩ | ಕಾಜಪ್ಪ ದೊರಿ | ಅರವಾಳ | ಜೇವರ್ಗಿ | ಸದಸ್ಯರು | ೨೦೧೦-೧೧ |
| ೪ | ಹಣಮಂತ್ರಾಯ ದೊರಿ | ವನದುರ್ಗಾ | ಶಹಾಪುರ | ಅಧ್ಯಕ್ಷರು | ೨೦೦೮-೦೯ |
| ೫ | ಹಯ್ಯಾಳಪ್ಪ ನಾಯಕ | ಹಳಿಸಗರ | ಶಹಾಪುರ | ಸದಸ್ಯರು | ೨೦೦೮-೦೯ |
| ೬ | ದೇವಿಂದ್ರಪ್ಪ ಗೌಡ | ವಾಗಣಗೇರಾ | ಸುರಪುರ | ಸದಸ್ಯರು | ೨೦೦೮-೦೯ |
| ೭ | ಗುಂಡಮ್ಮ | ಗೊಡ್ರಿಹಾಳ | ಸುರಪುರ | ಉಪಾಧ್ಯಕ್ಷರು | ೨೦೦೮-೦೯ |
| ೮ | ರಾಣಿ ರಂಗಮ್ಮ | ಕೊಡೆಕಲ್ | ಸುರಪುರ | ಸದಸ್ಯರು | ೨೦೦೮-೦೯ |
| ೯ | ಶ್ರೀನಿವಾಸ ನಾಯಕ | ಚೌಡೇಶ್ವರಿಹಾಳ | ಸುರಪುರ | ಸದಸ್ಯರು | ೨೦೧೦-೧೧'[೧೬] |

## ಆಯ್ದ ಜಿಲ್ಲಾ ಪಂಚಾಯತಿ ಸದಸ್ಯರ ಮಾಹಿತಿ ಪಟ್ಟಿ

| ಕ್ರ. ಸಂ. | ಹೆಸರು | ಊರು | ಕ್ಷೇತ್ರ | ಸ್ಥಾನ | ವರ್ಷ |
|---|---|---|---|---|---|
| ೧ | 'ರಾಜಾ ಹನುಮಪ್ಪ ನಾಯಕ | ಸುರಪುರ | ಖಾನಾಪುರ ಎಸ್.ಹೆಚ್. | ಅಧ್ಯಕ್ಷರು | ೨೦೦೯ |
| ೨ | ಈರಮ್ಮ | ಸುರಪುರ | ಸುರಪುರ | ಸದಸ್ಯರು | ೧೯೯೩ |
| ೩ | ರಾಜಾ ಶ್ರೀನಿವಾಸ ನಾಯಕ | ಸುರಪುರ | ಖಾನಾಪುರ ಎಸ್.ಹೆಚ್. | ಸದಸ್ಯರು | ೦೦೨-೦೭ |
| ೪ | ಶಾಂತಮ್ಮ | ಆಂದೋಲ | ಜೇವರ್ಗಿ | ಅಧ್ಯಕ್ಷರು | ೦೦೮-೦೯ |
| ೫ | ಮರಲಿಂಗಪ್ಪ | ಕರನಾಳ | ಖಾನಾಪುರ ಎಸ್.ಎಚ್. | ಸದಸ್ಯರು | ೨೦೧೬ |
| ೬ | ಲಕ್ಷ್ಮಿ ಗಂಡ ದೊಡ್ಡ ದೇಸಾಯಿ | ದೇವರ ಗೊನಾಲ | ಪೇಟ ಅಮ್ಮಾಪುರ | ಸದಸ್ಯರು | ೨೦೧೬ |

(ಇವರ ಸಂದರ್ಶನದ ಮೂಲಕ ಪಡೆದ ಮಾಹಿತಿ)

ಹೀಗೆ ಸಗರನಾಡಿನ ಬೇಡ ಸಮುದಾಯದವರು ರಾಜಕೀಯ ನಾಯಕರುಗಳ ಪಟ್ಟಿ ಮಾಡುತ್ತಾ ಹೋದ ಹಾಗೆ ದೊಡ್ಡದಾಗುತ್ತಾ ಹೋಗುತ್ತದೆ. ಈ ನಾಡಿನ ಬೇಡರು ಜನಸೇವೆಯೇ ಜನಾರ್ಧನ ಸೇವೆ ಎಂದು ತಿಳಿದು ರಾಜಕೀಯ ಚುನಾವಣೆಗಳಲ್ಲಿ ಸ್ಪರ್ಧಿಸುತ್ತಿದ್ದಾರೆ. ನಾಯಕತ್ವದ ಗುಣ ಇವರ ರಕ್ತದಲ್ಲಿ ಬಂದಿದೆ ಎಂದು ಹೇಳಿದರೆ ತಪ್ಪಾಗಲಾರದು. ಪ್ರಜಾಪ್ರಭುತ್ವ ಆಡಳಿತ ಜಾರಿಗೆ ಬಂದಾಗಿನಿಂದ ಇಂದಿನವರೆಗೆ ಸುರಪುರದಲ್ಲಿ ಸುಮಾರು ೬೦ ವರ್ಷಗಳಿಂದ ಮೀಸಲಾತಿ ಇದ್ದರೂ ಇರದಿದ್ದರೂ ಬೇಡ ನಾಯಕರುಗಳೇ ವಿಧಾನಸಭೆ ಸದಸ್ಯರಾಗಿ ಆಯ್ಕೆಯಗುತ್ತಿದ್ದಾರೆ. ಒಂದು ರೀತಿಯಲ್ಲಿ ಹೆಮ್ಮೆ ಪಡುವಂತಹ ವಿಷಯವಾದರೂ ಸಾಮಾನ್ಯ ಬೇಡರ ಅಭಿವೃದ್ಧಿಗೆ ಒತ್ತುಕೊಡದೇ ಹೋದದ್ದು ಇನ್ನೊಂದು ರೀತಿಯ ದುರಾದೃಷ್ಟಕರ. ಹಾಗೆಯೇ ಜೇವರ್ಗಿ ಮತ್ತು ಶಹಾಪೂರ ತಾಲೂಕುಗಳಲ್ಲಿ ಇದುವರೆಗೂ ಯಾವೊಬ್ಬ ಬೇಡನೂ ಶಾಸಕನಾಗಿ ಲೋಕಸಭಾ ಸದಸ್ಯನಾಗಿ ಆಯ್ಕೆಯಾಗಿಲ್ಲ. ಇದು ಇವರ ದೌರ್ಜನ್ಯಕ್ಕೆ ಒಳಗಾಗಿರುವ ನಿದರ್ಶನವನ್ನು ತೋರಿಸುತ್ತದೆ. ಕೆಲವು ಗ್ರಾಮಗಳಲ್ಲಿ ಬೆರಳಣಿಕೆಯಷ್ಟು ಬೇಡ ನಾಯಕರು ಜಿಲ್ಲಾ ಪಂಚಾಯತಿ, ತಾಲೂಕಾ ಪಂಚಾಯತಿ ಸದಸ್ಯರಾಗಿದ್ದು, ಬಿಟ್ಟರೆ ರಾಜಕೀಯದಲ್ಲಿ ಬೆಳವಣಿಗೆಯನ್ನು ಹೊಂದಿದ ಬೇಡರ ಸಂಖ್ಯೆ ಕಡಿಮೆ ಇದೆ. ಜೊತೆಗೆ ಪರಿಶಿಷ್ಟ ಪಂಗಡಕ್ಕೆ ಸಿಗುವ ಸೌಲಭ್ಯಗಳೂ ಸಹ ಸರಿಯಾದ ರೀತಿಯಲ್ಲಿ ಸಿಗುತ್ತಿಲ್ಲ. ಈ ನಾಡಿನಲ್ಲಿ ವಾಲ್ಮೀಕಿ ಜನಾಂಗದ ಪ್ರಭಾವ ಹೆಚ್ಚಿಗೆ ಇದ್ದರೂ ಹೇಳಿಕೊಳ್ಳುವಂತಹ ಸಮುದಾಯ ಭವನಗಳು, ಕಲ್ಯಾಣ ಮಂಟಪಗಳು ವಾಲ್ಮೀಕಿ ಮತ್ತು ಅಂದಿನ ರಾಜರುಗಳ ವೃತ್ತಿಗಳು ಕಾಣಸಿಗುವುದಿಲ್ಲ. ಸುರಪುರದಲ್ಲಿ ಮಾತ್ರ ಯುವಕರ ಒತ್ತಾಯದ ಮೇರೆಗೆ ಅಲ್ಲಲ್ಲಿ ನಾಲ್ವಡಿ ವೆಂಕಟಪ್ಪ ನಾಯಕರ ವೃತ್ತ, ವಾಲ್ಮೀಕಿ ವೃತ್ತ

ನೋಡಲು ಸಿಗುತ್ತದೆ. ಸುಮಾರು ೬೦ ವರ್ಷಗಳಿಂದ ರಾಜಕೀಯ ನಾಯಕರು ತಮ್ಮ ಸಮುದಾಯದಿಂದ ಅಭಿವೃದ್ಧಿಗೆ ನಿರಂತರವಾಗಿ ಶ್ರಮಿಸಿದ್ದಾದರೆ ಪ್ರಸ್ತುತ ಬೇಡರು ಆರ್ಥಿಕವಾಗಿ ಅಭಿವೃದ್ಧಿಯನ್ನು ಸಾಧಿಸಬಹುದಿತ್ತು. ಇದಕ್ಕೆ ರಾಜಕೀಯ ನಾಯಕರುಗಳ, ಸಾಮಾನ್ಯ ಬೇಡರ, ಇಚ್ಚಾಶಕ್ತಿಯ ಕೊರತೆ ಇದೆ. ಇದಕ್ಕೆ ಕೇವಲ ರಾಜಕೀಯ ನಾಯಕರ ತಪ್ಪು ಎಂದು ತಿಳಿದರೆ ಅತಿಶಯೋಕ್ತಿಯಾಗುತ್ತದೆ. ಕೇವಲ ೧೦ ವರ್ಷಗಳ ಈಚೆಗೆ ಸಾಮಾನ್ಯ ಬೇಡರಿಗೆ ರಾಜಕೀಯ ಪ್ರಜ್ಞೆ ಮೂಡುತ್ತಿದೆ. ಮೀಸಲಾತಿಯ ಬಗ್ಗೆ ತಿಳಿದುಕೊಂಡು ಸ್ಥಳೀಯ ಗ್ರಾಮ ಪಂಚಾಯತಿ, ತಾಲೂಕ ಪಂಚಾಯತಿ, ಜಿಲ್ಲಾ ಪಂಚಾಯತಿಗಳಿಗೆ ಸ್ಪರ್ಧಿಸಿ ಗೆಲುವನ್ನು ಪಡೆಯುತ್ತಿದ್ದಾರೆ. ಮುಖ್ಯವಾಗಿ ಮಹಿಳೆಯರು ಚುನಾವಣೆಗಳಲ್ಲಿ ಸ್ಪರ್ಧೆಗೆ ಇಳಿಯುತ್ತಿದ್ದುದ್ದು ಒಳ್ಳೆಯ ಬೆಳವಣಿಗೆ ಎಂದು ಹೇಳಬಹುದು. ಅದರಲ್ಲಿಯೂ ಘೋಷಾ ಪದ್ಧತಿಯನ್ನು ಅನುಸರಿಸುವ ಒಳ್ಳೆಯ ರಾಜ ಮನೆತನದ ಮಹಿಳೆಯರು ಇಂದು ರಾಜಕೀಯಕ್ಕೆ ಬರುತ್ತಿರುವುದು ಬೇಡ ಸಮುದಾಯದ ಸಾಮಾಜಿಕ ಬದಲಾವಣೆಗೆ ಸಾಕ್ಷಿಯಾಗಿದೆ ಎಂದು ಹೇಳಬಹುದು. ಒಟ್ಟಿನಲ್ಲಿ ಸಗರನಾಡಿನಲ್ಲಿ ಬೇಡರು ರಾಜಕೀಯದಲ್ಲಿ ಪ್ರಭಾವವನ್ನು ಹೊಂದಿರುವುದು ಸತ್ಯವೆಂದು ಹೇಳಬಹುದು.

**ಅಡಿಟಿಪ್ಪಣಿ**

೧. ಭಾಸ್ಕರರಾವ್ ಮುಡಬೊಳ, ೨೦೦೧, ಮರೆತುಹೋದ ಸುರಪುರ ಇತಿಹಾಸ, ಪು.ಸಂ. ೫೫.

೨. ಕರ್ನಾಟಕ ಪಂಚಾಯತ್ ರಾಜ್ ಇಲಾಖೆ ಪುಸ್ತಕ, ಪು.ಸಂ. ೧೧

೩. ಭಾಸ್ಕರರಾವ್ ಮುಡಬೊಳ, ೨೦೦೧, ಮರೆತುಹೋದ ಸುರಪುರ ಇತಿಹಾಸ, ಪು.ಸಂ. ೫೬

೪. ಚನ್ನಮಲ್ಲಪ್ಪ ಜುಬೀರ್, ಕಲಬುಗರಗಿ ಜಿಲ್ಲೆಯ ಬುಡಕಟ್ಟು ರಾಜಕೀಯ, ಪು.ಸಂ. ೫೮.

೫. ಅದೇ, ಪು.ಸಂ. ೬೦

೭. ಅದೇ, ಪು.ಸಂ. ೬೮

# ಅಧ್ಯಾಯ ೯

# ಸಮಾರೋಪ

ಸಗರನಾಡು ಇದು ಕೇವಲ ನಾಡಲ್ಲ. ಬೇಡ ಸಮುದಾಯದ ಬೀಡು. ಒಂದಾನೊಂದು ಕಾಲದಲ್ಲಿ ಈ ನಾಡು ವೈಭೋಗದಿಂದ ಮೆರೆದಿತ್ತು. ಈ ನಾಡಿಗೆ ತನ್ನದೇ ಆದ ಚಾರಿತ್ರಿಕ ಹಿನ್ನೆಲೆ ಇದೆ. ಈ ನಾಡಿನ ಇತಿಹಾಸವನ್ನು ಕೆದಕಿ ನೋಡಿದಾಗ ಈ ನಾಡಲ್ಲಿ ಹುಟ್ಟಿದ ನಾವೇ ಧನ್ಯರು ಎಂಬ ಭಾವನೆ ಮೂಡುತ್ತದೆ. ಇತಿಹಾಸದ ಬಗ್ಗೆ ಅಧ್ಯಯನ ಮಾಡುತ್ತಾ ಹೋದಾಗ ಭಾವಪರವಷರಾಗುತ್ತೇವೆ. ನಮ್ಮನ್ನು ಯಾವುದೋ ಲೋಕಕ್ಕೆ ಕರೆದೊಯ್ಯುತ್ತದೆ. ಇಂತಹ ವೈಭವದ ಇತಿಹಾಸವನ್ನು ಇಂದು ಪ್ರತಿಯೊಬ್ಬರೂ ತಿಳಿದುಕೊಳ್ಳುವ ಅವಶ್ಯಕತೆ ಇದೆ. ಆದರೆ ಒಂದಾನೊಂದು ಕಾಲದಲ್ಲಿ ಶ್ರೀಮಂತಿಕೆಯಿಂದ ಕೂಡಿದ್ದ ಈ ನಾಡು ಇಂದು ನಿರ್ಲಕ್ಷ್ಯಕ್ಕೆ ಒಳಗಾಗಿದ್ದು ಹಿಂದುಳಿದ ಪ್ರದೇಶಗಳ ಪಟ್ಟಿಗೆ ಸೇರಿದ್ದು ಅಲ್ಲಿಯ ಜನರ ದುರ್ದೈವ ಎನ್ನಬಹುದು. ಮುಖ್ಯವಾಗಿ ಈ ನಾಡನ್ನು ಕಟ್ಟಿ ಬೆಳೆಸಿದ ಮತ್ತು ಮೊಘಲರಿಗೆ, ಬ್ರಿಟೀಷರಿಗೆ, ದೇಶದ್ರೋಹಿಗಳಿಗೆ ಸಿಂಹಸ್ವಪ್ನವಾಗಿ ಕಾಡಿದ, ಸಗರನಾಡಿನ ಶೂರರೆಂದೇ ಹೆಸರುಗಳಿಸಿದ ಬೇಡ ಸಮುದಾಯವು ಇಂದು ದುರ್ಬಲ ವರ್ಗಗಳ ಪಟ್ಟಿಗೆ ಸೇರಿರುವುದನ್ನು ಕಾಣಬಹುದು. ದುರ್ಬಲರು ಎಂದರೆ ಸಾಮಾಜಿಕವಾಗಿ ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಔದ್ಯೋಗಿಕವಾಗಿ ತೀರಾ ಹಿಂದುಳಿದಿದ್ದು ಮೂಲ ಸೌಕರ್ಯಗಳಿಂದ ವಂಚಿತವಾದ ಸಮುದಾಯ ಅಥವಾ ವರ್ಗಕ್ಕೆ ದುರ್ಬಲ ವರ್ಗ ಎಂದು ಕರೆಯಬಹುದು. ಸಂಶೋಧನಾ ಅಧ್ಯಯನ ಮಾಡುವುದಕ್ಕಿಂತಲೂ ಮುಂಚೆ ಸಗರನಾಡಿನ ಬೇಡರು ಪ್ರಬಲರು, ಶಕ್ತಿಶಾಲಿಗಳು, ಶ್ರೀಮಂತರೂ, ಭೂಮಾಲಿಕರು ಎಂದು ತಿಳಿದುಬಂದಿತ್ತು. ಅದಕ್ಕೆ ಕಾರಣ ಕೇವಲ ಸುರಪುರ, ಶಹಾಪುರ, ಜೇವರ್ಗಿ ಪಟ್ಟಣಗಳಲ್ಲಿರುವ ಬೇಡ ಸಮುದಾಯದವರನ್ನು ನೋಡಿ ಅವರ ಉನ್ನತ ಆರ್ಥಿಕ ಸ್ಥಿತಿಯನ್ನು ನೋಡಿ ಬೇಡರು ಪ್ರಬಲರು ಎಂದು ತಿಳಿದು ಬಂದಿತ್ತು. ನಂತರ ಈ ಸಮುದಾಯದ ಬಗ್ಗೆ ವೈಜ್ಞಾನಿಕವಾಗಿ ಸಂಶೋಧನಾ ಅಧ್ಯಯನ ಮಾಡಲು ಪ್ರಾರಂಭಿಸಿದಾಗ ಮತ್ತು ಗ್ರಾಮಗಳಿಗೆ

ಭೇಟಿ ಕೊಟ್ಟು ಬೇಡರ ಕುಟುಂಬಗಳ ಬಗ್ಗೆ ಕ್ಷೇತ್ರ ಅಧ್ಯಯನ ಮಾಡುವಾಗ ನೈಜ ಸ್ಥಿತಿಗತಿಯ ಬಗ್ಗೆ ಅರಿವಾಯಿತು. ಆಗ ದೂರದ ಬೆಟ್ಟ ನುಣ್ಣಗೆ ಎಂಬ ಗಾದೆ ಮಾತು ನೆನಪಾಯಿತು. ಅದರಲ್ಲಿಯೂ ಸುರಪುರ ಶಹಾಪುರದ ಬೇಡ ಸಮುದಾಯದ ದೊಡ್ಡಿಗಳ ಚಿಂತಾಜನಕ ಪರಿಸ್ಥಿತಿ ನೋಡಿದಾಗ ಸರ್ಕಾರದ ಯೋಜನೆಗಳು ಸೌಲಭ್ಯಗಳು ಮೀಸಲಾತಿಗಳು ವ್ಯರ್ಥ ಅನಿಸುತ್ತವೆ. ಕಾರಣ ಸ್ವಾತಂತ್ರ್ಯ ಸಿಕ್ಕು ಹಲವಾರು ವರ್ಷಗಳಾದರೂ ಸಗರನಾಡಿನ ಬೇಡರು ಅಭಿವೃದ್ಧಿಯನ್ನು ಹೊಂದದೇ ಇರುವುದು ಸರ್ಕಾರ ಹಾಗೂ ಈ ಸಮುದಾಯದ ರಾಜಕೀಯ ನಾಯಕರುಗಳೇ ಪ್ರಮುಖ ಕಾರಣ ಎಂದರೆ ತಪ್ಪಾಗಲಾರದು. ಕೇವಲ ಸರ್ಕಾರ ಹಾಗೂ ರಾಜಕೀಯ ನಾಯಕರ ನಿರ್ಲಕ್ಷ್ಯತೆಯೇ ಕಾರಣವಲ್ಲ. ಈ ಸಮುದಾಯ ತಮಗೆ ತಾವೇ ವಂಚನೆಯನ್ನು ಮಾಡಿಕೊಂಡಿದೆ. ಆದ್ದರಿಂದ ಶೇ. ೭೦ ರಷ್ಟು ಬೇಡ ಸಮುದಾಯದ ಜನರು ಆರ್ಥಿಕವಾಗಿ ಹಿಂದುಳಿದಿದ್ದಾರೆ.

ಈ ಸಗರನಾಡಿನ ರಾಜಕೀಯ ಚದುರಂಗದಾಟದಲ್ಲಿ ಬೇಡರು ಕೇವಲ ಅಸ್ತ್ರಗಳಾಗಿ ಬಳಕೆಯಾಗುತ್ತಿರುವುದು ನೋವಿನ ಸಂಗತಿ. ಅಂದರೆ ಕೇವಲ ರಾಜಕೀಯ ಸಂಘರ್ಷಗಳಿಗೆ ಇವರನ್ನು ಈ ಸಮುದಾಯದ ನಾಯಕರುಗಳೇ ಬಳಕೆಮಾಡಿಕೊಳ್ಳುತ್ತಾ ಬಂದಿದ್ದಾರೆ. ಅಂದರೆ ಸಂಕಟ ಬಂದಾಗ ವೆಂಕಟರಮಣ ನೆನಪಾಗುವ ಹಾಗೆ ರಾಜಕೀಯಕ್ಕೆ ಧಕ್ಕೆ ಬಂದಾಗ ಮಾತ್ರ ಇವರನ್ನು ನೆನೆಯುತ್ತಾರೆ. ಈ ಮಾತು ನೊಂದ ಬೇಡ ಸಮುದಾಯದವರಿಂದ ಬಂದಿದೆ. ಕ್ಷೇತ್ರ ಅಧ್ಯಯನ ಮಾಡುವ ಸಂದರ್ಭದಲ್ಲಿ ಇಂತಹ ಅನೇಕ ನೋವುಗಳನ್ನು ಬೇಡ ಸಮುದಾಯದವರು ಹಂಚಿಕೊಂಡರು ಎಂದು ಹೇಳಬಹುದು. ಪ್ರಸ್ತುತ ದಿನಮಾನಗಳಲ್ಲಿ ನಿಧಾನ ಗತಿಯಲ್ಲಿ, ಆಮೆಯ ವೇಗದಲ್ಲಿ ಈ ಸಮುದಾಯದ ಜನ ಆರ್ಥಿಕವಾಗಿ, ಶೈಕ್ಷಣಿಕವಾಗಿ, ಔದ್ಯೋಗಿಕವಾಗಿ, ಅಭಿವೃದ್ಧಿಯನ್ನು ಸಾಧಿಸುತ್ತಿದ್ದಾರೆ. ಕಾರಣ ಈ ಸಮುದಾಯದ ಯುವಕರಲ್ಲಿ ಪ್ರಾಪಂಚಿಕ ಜ್ಞಾನ ಮೂಡಿದೆ. ಹೊರ ಪ್ರಪಂಚದ ನಿಜವಾದ ಸಂಗತಿಗಳನ್ನು ನೋಡಿ ಇಂದು ಇವರು ದೃಢ ನಿರ್ಧಾರದಿಂದ ಶೈಕ್ಷಣಿಕವಾಗಿ ಮುಂದೆ ಬಂದು ಆರ್ಥಿಕವಾಗಿ ರಾಜಕೀಯವಾಗಿ ಏಳಿಗೆಯನ್ನು ಸಾಧಿಸುತ್ತಿದ್ದಾರೆ. ಗ್ರಾಮಗಳಲ್ಲಿಯೂ ಕೂಡಾ ಶಿಕ್ಷಣದ ಅರಿವು ಮೂಡಿದ್ದು, ರಾಜಕೀಯ ಪ್ರಜ್ಞೆಯೂ ಮೂಡಿದೆ. ಆದರೂ ಈ ಸಮುದಾಯದ ಜನರಿಗೆ ಹಲವಾರು ಸಮಸ್ಯೆಗಳು ಕಾಡುತ್ತಿವೆ. ಆ ಸಮಸ್ಯೆಗಳಿಂದ ಹೊರ ಬಂದು ಅಭಿವೃದ್ಧಿಯ ಕಡೆಗೆ ದಿಟ್ಟವಾದ ಹೆಜ್ಜೆ ಇಟ್ಟಾಗ ಮಾತ್ರ ಈ ಬೇಡ ಸಮುದಾಯ ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಏಳಿಗೆಯನ್ನು ಸಾಧಿಸಬಹುದು. ಈ ನಿಟ್ಟಿನಲ್ಲಿ ಇಂದು ಬೇಡ ಸಮುದಾಯದ ಯುವ ಜನಾಂಗ ಹೆಜ್ಜೆಯನ್ನು ಇಡುತ್ತಿದೆ. ಇದು ನಿಧಾನವಾದರೂ ಸಂತೋಷದ ಸಂಗತಿ ಎಂದು ಹೇಳಬಹುದು. ಇಂತಹ ಅನೇಕ ಯುವಕರು ಇಂದು ಸರ್ಕಾರಿ ಉದ್ಯೋಗದಲ್ಲಿ, ಸ್ವಂತ ಉದ್ಯೋಗದಲ್ಲಿ, ರಾಜಕೀಯದಲ್ಲಿ ಸ್ವ-ಏಳಿಗೆಯನ್ನು ಸಾಧಿಸುತ್ತಿದ್ದಾರೆ. ಸರ್ಕಾರದ ವಿವಿಧ

ಸೌಲಭ್ಯಗಳನ್ನು ಸಂವಿಧಾನದ ಸವಲತ್ತುಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಆದ್ದರಿಂದ ಸಂಶೋಧನಾ ವಿದ್ಯಾರ್ಥಿಯಾದ ನಾನು ಬೇಡ ಸಮುದಾಯದ ಬಗ್ಗೆ ಅಧ್ಯಯನ ಮಾಡಲು ಪ್ರಾರಂಭ ಮಾಡಿದೆ. ಈ ನಾಡಿನ ಈ ಸಮುದಾಯದ ನೈಜ ಸ್ಥಿತಿಗತಿಗಳನ್ನು ಹೊರಹಾಕಲು ಕ್ಷೇತ್ರ ಅಧ್ಯಯನದ ಜೊತೆಗೆ ಹಲವಾರು ಗ್ರಂಥಗಳನ್ನು, ಲೇಖನಗಳನ್ನು, ಸರ್ಕಾರದ ಸಮೀಕ್ಷಾ ವರದಿ ಪುಸ್ತಕಗಳನ್ನು ಅಧ್ಯಯನ ಮಾಡಿ ಹೆಚ್ಚಿನ ಮಾಹಿತಿಯನ್ನು ಪಡೆಕೊಳ್ಳಲಾಗಿದೆ. ಸಗರನಾಡಿನ ಬೇಡ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು ಸಮಾಜ ಶಾಸ್ತ್ರೀಯ ಅಧ್ಯಯನ ಎಂಬ ಪ್ರಬಂಧವು ಕ್ಷೇತ್ರ ಅಧ್ಯಯನದ ಮೂಲಕ ಮಾಹಿತಿ ಪೂರಕ ಹಲವಾರು ಗ್ರಂಥಗಳ ನೆರವು ಪಡೆದು, ವ್ಯಕ್ತಿಗಳ ಸಂದರ್ಶನದ ವಿವರಣೆಯ ಮೂಲಕ ಅಧ್ಯಯನಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಿಕೊಳ್ಳುವುದರ ಮೂಲಕ ಈ ನನ್ನ ಮಹಾಪ್ರಬಂಧವು ರೂಪುಗೊಂಡಿದೆ.

ಮೊದಲನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ಮಹತ್ವದ ಕುರಿತು ಸಂಕ್ಷಿಪ್ತವಾಗಿ ಅಧ್ಯಯನ ಮಾಡಲಾಗಿದೆ. ಎರಡನೇ ಅಧ್ಯಾಯದಲ್ಲಿ ಸಗರನಾಡಿನ ಚಾರಿತ್ರಿಕ ಹಿನ್ನೆಲೆಯಾದ ಸಗರನ ಜೀವನ ಚರಿತ್ರೆ ಮತ್ತು ಬೇಡ ಸಮುದಾಯದ ಚಾರಿತ್ರಿಕ ಹಿನ್ನೆಲೆ, ಬೇಡ ದೊರೆಗಳ ರಾಜ್ಯದ ಆಡಳಿತ ಅವರ ಸಾಹಸ ಜೀವನ ಮೊಗಲರ ವಿರುದ್ಧ, ಬ್ರಿಟೀಷರ ವಿರುದ್ಧ ಹೋರಾಡಿದ ನೈಜ ಘಟನೆಗಳನ್ನು ಕುರಿತು ಹಾಗೂ ೧೮೫೭ ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬೇಡ ನಾಯಕರ ಮತ್ತು ರಾಜರ ಪಾತ್ರ ಹೀಗೆ ಹಲವಾರು ವಿಷಯಗಳನ್ನು ಇತಿಹಾಸದ ಸಂಗತಿಗಳನ್ನು ಹಲವಾರು ಗ್ರಂಥ, ಕೋಟೆ ಕೊತ್ತಲುಗಳ ಆಧಾರದ ಮೇಲೆ ಮತ್ತು ಬೇಡ ಸಮುದಾಯದ ಹಿರಿಯರಿಂದ ಚಾರಿತ್ರಿಕ ಹಿನ್ನೆಲೆಯನ್ನು ಕಲೆ ಹಾಕಲಾಗಿದೆ.

ಅಧ್ಯಾಯ ಮೂರರಲ್ಲಿ ಸಗರನಾಡಿನ ಬೇಡ ಸಮುದಾಯದ ಪರಿಚಯ ಮತ್ತು ಸಗರನಾಡಿನ ಸುರಪುರ, ಶಹಾಪುರ, ಜೇವರ್ಗಿ ತಾಲೂಕಿನ ಬೇಡ ಸಮುದಾಯದ ಪ್ರಸ್ತುತ ಸ್ಥಿತಿಗತಿಯ ಬಗ್ಗೆ ಮಾಹಿತಿಯನ್ನು ಕಟ್ಟಿ ಕೊಟ್ಟಿದ್ದೇನೆ.

ಅಧ್ಯಾಯ ನಾಲ್ಕರಲ್ಲಿ ಬಂಧುತ್ವ, ಕೌಟುಂಬಿಕ ಜೀವನ ಪದ್ಧತಿ, ವಿವಾಹ ಪದ್ಧತಿ, ಗೃಹನಿರ್ಮಾನ, ಆಹಾರ ಸೇವನೆಯ ಪದ್ಧತಿ, ನ್ಯಾಯ ಪದ್ಧತಿ, ಚಿಕಿತ್ಸಾ ಪದ್ಧತಿ, ಬೇಟೆ ಪದ್ಧತಿ, ಘೋಷಾ ಪದ್ಧತಿ, ಬೇಡ ಸಮುದಾಯದ ಮಹಿಳೆಯರ ಸ್ಥಾನಮಾನ, ಕಲೆ ಮತ್ತು ಕ್ರೀಡೆ, ಸಂಘ, ಸಂಸ್ಥೆ, ಸಂಘಟನೆಗಳು, ಜಾಜಮಾನ ಪದ್ಧತಿ ಬಗ್ಗೆ ಸಾಕಷ್ಟು ಮಾಹಿತಿಯನ್ನು ಸಂದರ್ಶನದ ಮೂಲಕ ಪಡೆದುಕೊಂಡು ದಾಖಲಿಸಿದ್ದೇನೆ.

ಅಧ್ಯಾಯ ಐದರಲ್ಲಿ ಸಗರನಾಡಿನ ಬೇಡ ಸಮುದಾಯದ ಸಾಂಸ್ಕೃತಿಕ ಜೀವನವನ್ನು ಕುರಿತು ವಿಶ್ಲೇಷಿಸಿದ್ದೇನೆ. ಇವರ ಸಂಸ್ಕೃತಿಯ ಆಚರಣೆಗಳನ್ನು ಕುರಿತು ಸವಿವರವಾಗಿ

ಕಟ್ಟಿಕೊಟ್ಟಿದ್ದೇನೆ. ಇವರ ಆಚಾರ ವಿಚಾರ ಪದ್ಧತಿ, ಧಾರ್ಮಿಕ ಆಚರಣೆಗಳ ಕುರಿತು ಅಧ್ಯಯನ ಮಾಡಿದ್ದೇನೆ.

ಅಧ್ಯಾಯ ಆರರಲ್ಲಿ ಬೇಡ ಸಮುದಾಯದ ಅರ್ಥಿಕ ಜೀವನವನ್ನು ಕುರಿತು ಅಧ್ಯಯನ ಮಾಡಿದ್ದೇನೆ. ಪ್ರಸ್ತುತ ಈಗ ಇರುವ ಆರ್ಥಿಕ ಸ್ಥಿತಿಗತಿಯ ಬಗ್ಗೆ ನೈಜವಾಗಿ ವಿವರಿಸಿದ್ದೇನೆ. ಇವರು ಆರ್ಥಿಕವಾಗಿ ತೀರಾ ಹಿಂದುಳಿದಿರುವುದಕ್ಕೆ ಕಾರಣಗಳನ್ನು ಕಂಡುಕೊಂಡು ಅದನ್ನು ಪ್ರಸ್ತಾಪಿಸಲಾಗಿದೆ. ಏಳನೇಯ ಅಧ್ಯಾಯದಲ್ಲಿ ಬೇಡ ಸಮುದಾಯದ ಶೈಕ್ಷಣಿಕ ಜೀವನ ಮತ್ತು ಸ್ಥಿತಿಗತಿಗಳು, ಶಿಕ್ಷಣದ ಗುಣಮಟ್ಟ ಉತ್ತಮಗೊಳಿಸುವ ದಿಶೆಯಲ್ಲಿ ಸರಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಸಹಯೋಗದ ಕುರಿತು ಮತ್ತು ಇವರಿಗೆ ಸಿಗುವ ಶೈಕ್ಷಣಿಕ ಸೌಲಭ್ಯಗಳ ಕುರಿತು ಕೂಲಂಕುಷವಾಗಿ ಅಧ್ಯಯನ ಮಾಡಿದ್ದೇನೆ.

ಅಧ್ಯಾಯ ಎಂಟರಲ್ಲಿ ಸಗರನಾಡಿನ ಬೇಡ ಸಮುದಾಯದ ರಾಜಕೀಯ ಜೀವನ ಕುರಿತು ಅಧ್ಯಯನ ಮಾಡಿದ್ದೇನೆ. ಇವರಲ್ಲಿರುವ ರಾಜಕೀಯ ಓಡಿತದ ಮನೋಬಲವನ್ನು ಹಾಗೂ ನಾಯಕತ್ವದ ಗುಣವನ್ನು ಅಲ್ಲದೇ ಶಹಾಪುರ, ಜೇವರ್ಗಿ ತಾಲೂಕುಗಳಲ್ಲಿ ಇವರು ರಾಜಕೀಯವಾಗಿ ಹಿಂದುಳಿದಿರುವುದಕ್ಕೆ ಕಾರಣಗಳನ್ನು ನೀಡಿದ್ದೇನೆ. ಹಾಗೂ ಸ್ವತಂತ್ರ ಭಾರತದಿಂದ ಇಂದಿನವರೆಗೆ ರಾಜಕಾರಣದಲ್ಲಿ ಇದ್ದ ಪ್ರಮುಖ ರಾಜಕಾರಣಿಗಳ ಹೆಸರುಗಳನ್ನು ಕಲೆ ಹಾಕಿ ಅವರು ನಡೆದು ಬಂದ ಹಾದಿಯನ್ನು, ಕೈಗೊಂಡ ಅಭಿವೃದ್ಧಿ ಕಾರ್ಯಗಳನ್ನು ವಿವರಿಸಿದ್ದೇನೆ.

ಅಧ್ಯಾಯ ಒಂಬತ್ತರಲ್ಲಿ ಸಮಾರೋಪ (ಉಪಸಂಹಾರ) ಎಂಬ ಕೊನೆಯ ಶೀರ್ಷಿಕೆ ಇದೆ. ಇದರಲ್ಲಿ ಎಲ್ಲಾ ಅಧ್ಯಾಯಗಳ ಸಂಕ್ಷಿಪ್ತ ಸಾರಾಂಶವಿದೆ. ಒಬ್ಬ ಸಂಶೋಧಕನಾಗಿ ನಾನು ಕಂಡುಕೊಂಡು ತಿಳಿದುಕೊಂಡ ವಿಷಯಗಳನ್ನು ನನ್ನ ಅಭಿಪ್ರಾಯದ ಮುಖಾಂತರ ವ್ಯಕ್ತಪಡಿಸಿದ್ದೇನೆ. ಬೇಡ ಸಮುದಾಯದ ಸಂಶೋಧನಾ ಅಧ್ಯಯನಕ್ಕೆ ಕಾರಣಗಳನ್ನು ದಾಖಲಿಸಿದ್ದೇನೆ.

ಅನುಬಂಧದಲ್ಲಿ ವಕ್ತೃ ಮಾಹಿತಿ ವಿವರ, ಸಗರನಾಡಿನ ವ್ಯಾಪ್ತಿಗೆ ಒಳಪಡುವ ತಾಲುಕು ಮತ್ತು ಗ್ರಾಮಗಳ ಪಟ್ಟಿ, ಪರಾಮರ್ಶನ ಗ್ರಂಥಗಳು, ಪತ್ರಿಕಾ ವರದಿಗಳು, ಛಾಯಾ ಚಿತ್ರಗಳನ್ನು ದಾಖಲಿಸಿದ್ದೇನೆ.

**೧.೧ ಅಧ್ಯಯನದ ಫಲಿತಗಳು:**

ಪ್ರಸ್ತುತ ಸಂಶೋಧನಾ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಈ ರೀತಿಯಾಗಿ ಪಟ್ಟಿ ಮಾಡಲಾಗಿದೆ.

- ಸಗರನಾಡಿನ ಬೇಡ ಸಮುದಾಯದ ಜನರು ಇನ್ನೂ ಗ್ರಾಮೀಣ ಪ್ರದೇಶಗಳಲ್ಲಿ ಬಡವರಾಗಿಯೇ ಜೀವನ ಸಾಗಿಸುತ್ತಿದ್ದಾರೆ.

- ಬೇಡ ಸಮುದಾಯದ ಸ್ತ್ರೀ ಶಿಕ್ಷಣದ ಕೊರತೆ ಕಂಡುಬರುತ್ತದೆ.
- ಕೆಲವು ಜನ ಬೇಡರು ಮಧ್ಯಪಾನಿಗಳು, ಧೂಮ್ರಪಾನಿಗಳು ಆಗಿದ್ದಾರೆ.
- ಆರ್ಥಿಕವಾಗಿ ಹಿಂದುಳಿದಿದ್ದರೂ ಸ್ವಪ್ರತಿಷ್ಠೆಗಾಗಿ ದುಡಿಯದ ಸೋಮಾರಿಗಳಾಗಿದ್ದಾರೆ.
- ಸಂವಿಧಾನಿಕ ಸವಲತ್ತುಗಳು ಹಾಗೂ ಪರಿಶಿಷ್ಠ ಪಂಗಡದ ಯೋಜನೆಗಳ ಕುರಿತು ಸಾಮಾನ್ಯ ಜ್ಞಾನವಿಲ್ಲದ್ದಾಗಿದೆ.
- ಹೆಚ್ಚಿನ ವಿದ್ಯಾಭ್ಯಾಸದ ಕೊರತೆ ಇದೆ.
- ತಮ್ಮದೇ ಸಮುದಾಯದ ರಾಜಕೀಯ ನಾಯಕರುಗಳಿಂದ ನಿರ್ಲಕ್ಷ್ಯತೆಗೆ ಒಳಪಟ್ಟಿದ್ದಾರೆ.
- ಮುಖ್ಯವಾಗಿ ಸಗರನಾಡಿನ ಬೇಡ ಸಮುದಾಯದವರಲ್ಲಿ ಒಗ್ಗಟ್ಟು, ಐಕ್ಯತೆಯ ಕೊರತೆ ಎದ್ದು ಕಾಣುತ್ತದೆ.
- ಈ ಸಮುದಾಯದಲ್ಲಿ ಬಡವ ಶ್ರೀಮಂತರು ಎಂಬ ವರ್ಗ ಭೇದ-ಭಾವವಿದೆ.
- ಅಲ್ಲದೇ ರಾಜವಂಶಕ್ಕೆ ಸೇರಿದವರು ಮತ್ತು ಸಾಮಾನ್ಯ ಬೇಡರು ಎಂಬ ವ್ಯತ್ಯಾಸದ ಕೀಳರಿಮೆ ಸಾಮಾನ್ಯ ಜನರಲ್ಲಿದೆ.
- ಧಾರ್ಮಿಕ ಆಚರಣೆಗಳನ್ನು ತಪ್ಪದೇ ಆಚರಿಸುತ್ತಾರೆ.
- ಸಗರನಾಡಿನ ಬೇಡ ಸಮುದಾಯದ ಜನರಲ್ಲಿ ಪ್ರಾಣಿಬಲಿ ಸಂಸ್ಕೃತಿ ಇದೆ.
- ಬೇಡ ಸಮುದಾಯದವರು ತಮ್ಮದೇ ಆದ ವೈಯಕ್ತಿಕ ಸಮಸ್ಯೆಯಿಂದ ಬಳಲುತ್ತಿದ್ದಾರೆ.
- ಈ ಸಮುದಾಯದವರಲ್ಲಿಯೂ ಕೆಲವು ಜನ ನಾಯಕರು ರಾಜಕೀಯ ಉನ್ನತ ಸ್ಥಾನಮಾನವನ್ನು ಪಡೆದಿದ್ದಾರೆ.
- ರಾಜವಂಶದಲ್ಲಿ ಸ್ತ್ರೀಯರಿಗೆ ಘೋಷಾ ಪದ್ಧತಿ ಇದ್ದರೆ ಸಾಮಾನ್ಯ ಬೇಡ ಮಹಿಳೆಯರಿಗೆ ಈ ಪದ್ಧತಿ ಇಲ್ಲ. ಅವರು ಸರಳವಾಗಿ ಸಾರ್ವಜನಿಕವಾಗಿ ಭಾಗಿಯಾಗುತ್ತಾರೆ.
- ಗ್ರಾಮೀಣ ಪ್ರದೇಶಗಳಲ್ಲಿ ಬೇಡರು ಇನ್ನೂ ಗುಡಿಸಲುಗಳಲ್ಲಿ ವಾಸವಾಗಿದ್ದಾರೆ.
- ಸುರಪುರ ತಾಲೂಕಿನ ಬೇಡರಿಗೂ ಶಹಾಪೂರ ಜೇವರ್ಗಿ ತಾಲೂಕಿನ ಬೇಡ ಸಮುದಾಯದವರಿಗೂ ಕೆಲವು ವಿಷಯಗಳಲ್ಲಿ ಸಾಕಷ್ಟು ವ್ಯತ್ಯಾಸವಿದೆ.
- ಪ್ರಸ್ತುತವಾಗಿ ಬೇಡ ಸಮುದಾಯದ ಯುವಕ ಯುವತಿಯರು ಶಿಕ್ಷಣದ ಕಡೆಗೆ ಒಲವು ತೋರುತ್ತಿದ್ದಾರೆ.

